ಮೊದಲನೆಯ ಮುದ್ರಣ : ೧೯೫೦

Awarded the Dravidian Languages Prize in Kannada
(1945-46) by the Madras University.



ಬೆಲೆ: ೪—೦—೦

ಪ್ರಕಾಶಕರು : ಎಚ್. ರಾಮಣ್ಣ

ಮುದ್ರಕರು :

ಜಿ. ಎಚ್. ರಾಮರಾವ್, ಬಿ. ಎಸ್ಸಿ.,

ಮೈಸೂರು ಪ್ರಿಂಟಿಂಗ್ ಮತ್ತು ಪಬ್ಲಿಷಿಂಗ್ ಹೌಸ್. ಮೈಸೂರು.

# ಪೀಠಿಕೆ

ಮೈಸೂರು ವಿಶ್ವವಿದ್ಯಾನಿಲಯದ ಅಧ್ಯಾಪಕ ಸಂಘದ ಪರವಾಗಿ ಮೈಸೂರು ದೇಶದ ಅನೇಕ ಭಾಗಗಳಲ್ಲಿ ಮಕ್ಕಳ ಮನಶ್ಶಾಸ್ತ್ರವನ್ನು ಕುರಿತು ಕನ್ನಡ ಭಾಷೆಯಲ್ಲಿ ಉಪನ್ಯಾಸಗಳನ್ನು ಕೊಡುವ ಅವಕಾಶವು ಹತ್ತು ವರ್ಷಗಳಿಂದ ನನಗೆ ದೊರೆತಿದ್ದಿತು. ನಾನಾಕಡೆಗಳಲ್ಲಿ ತಾಯಿತಂದೆಗಳು ಅತಿ ಕುತೂಹಲದಿಂದ ಈ ಉಪನ್ಯಾಸಗಳನ್ನು ಕೇಳಿದುದರಿಂದ ಮೈಸೂರು ವಿಶ್ವವಿದ್ಯಾನಿಲಯದ ಪ್ರಚಾರ ಪುಸ್ತಕ ಮಾಲೆಯಲ್ಲಿ "ಮಕ್ಕಳ ಭಾವ ಜೀವನ" ವೂ, ವಯಸ್ಕರ ಅಕ್ಷರ ಪ್ರಚಾರ ಪುಸ್ತಕಮಾಲೆಯಲ್ಲಿ "ನಮ್ಮ ಮಕ್ಕಳು" ಮತ್ತು "ಮಕ್ಕಳ ಬೆಳವಣಿಗೆ" ಎಂಬ ಪುಸ್ತಕಗಳೂ ಪ್ರಕಾಶಿತವಾದುವು. ಈ ಪುಸ್ತಕಗಳನ್ನು ಬರೆಯಲು ನನ್ನ ಮಿತ್ರರಾದ ಶ್ರೀಮಾನ್ ಜಿ. ಹನುಮಂತರಾವ್, ಶ್ರೀಮಾನ್. ಸಿ. ರಂಗಾಚಾರ್, ಶ್ರೀಮಾನ್. ಟಿ. ಕೃಷ್ಣಮೂರ್ತಿ, ಮತ್ತು ಶ್ರೀಮಾನ್. ಎಸ್. ವಿ. ಶ್ರೀನಿವಾಸರಾವ್ ಇವರುಗಳು ಪ್ರೋತ್ಸಾಹ ಕೊಟ್ಟಿದ್ದರು. ಮೇಲಿನ ಮೂರು ಪುಟ್ಟ ಗ್ರಂಥಗಳನ್ನು ಓದಿದ ಮಹಿಳೆಯರೂ, ಮಹನೀಯರೂ ಅವುಗಳ ವಿಷಯವಾಗಿ ತಮ್ಮ ಮೆಚ್ಚಿಗೆಯನ್ನು ತೋರ್ಪಡಿಸಿ ಒಳ್ಳೆಯ ಮಾತಾಡಿದ್ದರಿಂದ ಈ ಗ್ರಂಥವನ್ನು ಬರೆಯುವ ಸಾಹಸ ಮಾಡಿರುವೆನು.

ಮನಶ್ಶಾಸ್ತ್ರದಲ್ಲಿ ನನಗೆ ಅಭಿರುಚಿಯನ್ನುಂಟುಮಾಡಿದ ನನ್ನ ಗುರುಗಳಾದ, ಮಹಾರಾಜಾ ಕಾಲೇಜು ಪ್ರಿನ್ಸಿಪಾಲ್ ಡಾಕ್ಟರ್ ಗೋಪಾಲಸ್ವಾಮಿಯವರಿಗೆ ಈ ಸಂದರ್ಭದಲ್ಲಿ ನನ್ನ ಕೃತಜ್ಞತೆಯನ್ನು ತೋರಿಸುವುದು ನನ್ನ ಕರ್ತವ್ಯವೆಂದೆಣಿಸುತ್ತೇನೆ. ಕರ್ಣಾಟಕದಲ್ಲಿಯೇ, ಏಕೆ ಇಡೀಹಿಂದೂಸ್ಥಾನದಲ್ಲಿ ಮೊಟ್ಟಮೊದಲು ಎಳೇ ಮಕ್ಕಳ ಪ್ರತ್ಯೇಕ ಶಿಕ್ಷಣಕ್ಕಾಗಿ ಇವರು ಶಿಶುವಿಹಾರವನ್ನು ಸ್ಥಾಪಿಸಿದರೆಂದು ಎಲ್ಲರಿಗೂ ಗೊತ್ತಿರುವ ವಿಷಯ. ಈ ಗ್ರಂಥದ ಮೂಲಕ, ಶಿಶುವಿಹಾರಗಳ ಉಪಾಧ್ಯಾಯ ಉಪಾಧ್ಯಾಯಿನಿಯರು, ಮಕ್ಕಳ

ಮನಸ್ಸನ್ನು ಚೆನ್ನಾಗಿ ತಿಳಿದು ಡಾ. ಗೋಪಾಲಸ್ವಾಮಿಯವರ ಧ್ಯೇಯವು ಮುಂದುವರಿಯುವಂತೆ ಮಾಡಿದರೆ ಅದೇ ನನ್ನ ಪ್ರಯತ್ನಕ್ಕೆ ತಕ್ಕ ಪ್ರತಿಫಲವೆಂದು ತಿಳಿಯುವೆನು.

ಮಕ್ಕಳ ಮನಸ್ಸನ್ನು ಕುರಿತು ಅನೇಕ ಗ್ರಂಥಗಳನ್ನು ಬರೆದಿರುವ ಪಾಶ್ಚಾತ್ಯ ವೈಜ್ಞಾನಿಕರಿಗೆ ನಾನು ಋಣಿಯಾಗಿದ್ದೇನೆ. ಅವರು ಮಾಡಿದ ಪ್ರಯೋಗಗಳನ್ನೂ ಅವರು ಕಂಡು ಹಿಡಿದ ತತ್ವಗಳನ್ನೂ ಕನ್ನಡ ದೇಶದ ತಾಯಿ ತಂದೆಗಳಿಗೆ ಪರಿಚಯಮಾಡಿಕೊಡಬೇಕೆಂಬ ಬಯಕೆಯೂ ಈ ಪ್ರಯತ್ನಕ್ಕೆ ಕಾರಣವಾಗಿರುವುದು.

ಮಕ್ಕಳ ಮನಸ್ಸನ್ನು ಚೆನ್ನಾಗಿ ಅರಿಯಲು, ಮೊಟ್ಟಮೊದಲು ನನ್ನ ತಾಯಿಯೂ, ನಂತರ ನನ್ನ ಪತ್ನಿ ಮತ್ತು ಇಬ್ಬರು ಮಕ್ಕಳೂ ಬಹಳ ಮಟ್ಟಿಗೆ ಕಾರಣರಾದರು. ನನ್ನ ಮಕ್ಕಳ ಪಾಲನೆ ಪೋಷಣೆಗಳು ಅವರ ಮನಸ್ಸನ್ನು ಬಹು ಹತ್ತಿರದಿಂದ ನೋಡಿ ತಿಳಿಯಲು ಅನೇಕ ಸಂದರ್ಭಗಳನ್ನು ಒದಗಿಸಿಕೊಟ್ಟವೆ. ಬಹುಮುಖವಾಗಿ ಅವರನ್ನು ಕುರಿತು ನಾನು ಮಾಡಿದ ವೀಕ್ಷಣಗಳ ಫಲಿತಾಂಶವನ್ನು ಈ ಗ್ರಂಥದಲ್ಲಿ ಉಪಯೋಗಿಸಿಕೊಳ್ಳಲಾಗಿದೆ.

ಈ ಗ್ರಂಥವನ್ನು ಬರೆಯಲು ಪ್ರೋತ್ಸಾಹವನ್ನು ಕೊಟ್ಟು ಅತ್ಯಂತ ಸಹಾಯಮಾಡಿದ ಶ್ರೀಮಾನ್ ಕೆ. ವಿ. ಶ್ರೀಕಂಠಯ್ಯನವರಿಗೆ ನಾನು ಚಿರಋಣಿ. ನನ್ನ ಮಿತ್ರರಾದ ಶ್ರೀಮಾನ್ ವಿ. ಸೀತಾರಾಮಯ್ಯನವರು ಮೊದಲ ಎರಡು ಅಧ್ಯಾಯಗಳನ್ನು ಓದಿ ಅನೇಕ ಸಲಹೆಗಳನ್ನು ಕೊಟ್ಟರು. ಶ್ರೀಮಾನ್ ಸಿ. ಮಹದೇವಪ್ಪನವರು ಮತ್ತು ಶ್ರೀಮಾನ್ ಬಿ. ಕೃಷ್ಣನ್ ನವರು ಕೆಲವು ಅಧ್ಯಾಯಗಳ ಕರಡುಪ್ರತಿಗಳನ್ನು ಓದಿ ತಿದ್ದುಕೊಟ್ಟಿರುವರು. ನನ್ನ ಪತ್ನಿ ಶ್ರೀಮತಿ ಕಾಮೇಶ್ವರಮ್ಮ ಕುಪ್ಪುಸ್ವಾಮಿಯವರು ಈ ಗ್ರಂಥವನ್ನು ಬರೆಯಲು ಅನೇಕ ವಿಧದಲ್ಲಿ ಸಹಾಯಮಾಡಿರುವರು. ಇವರೆಲ್ಲರಿಗೂ ನನ್ನ ವಂದನೆಗಳು.

೭–೬–೧೯೫೦. ಬಿ. ಕುಪ್ಪುಸ್ವಾಮಿ.

## ಚಿತ್ರಗಳು

## ಪಟ್ಟಿಗಳು

# ವಿಷಯ ಸೂಚಿಕೆ

# ಅಧ್ಯಾಯ ೧

## ಪ್ರವೇಶ

### (ಮನಶ್ಶಾಸ್ತ್ರವೆಂದರೇನು ?)

ಬದುಕು ಸರಾಗವಾಗಿ ನಡೆಯಬೇಕಾದರೆ, ಯಾವ ಪ್ರಾಣಿಯೇ ಆಗಲಿ ತನ್ನ ಸುತ್ತಲಿರುವ ಇತರ ಪ್ರಾಣಿಗಳಿಗೂ ಮತ್ತು ಪದಾರ್ಥಗಳಿಗೂ ಹೊಂದಿಕೊಂಡು ಬಾಳಬೇಕಾಗುವುದು. ಮೊದಲಿನಿಂದಲೂ ಮನುಷ್ಯನು ತನ್ನ ಸುತ್ತಲಿರುವ ಪದಾರ್ಥಗಳ ತತ್ತ್ವವೇನು ಎಂಬುದನ್ನು ಕಂಡು ಹಿಡಿಯಲು ಪ್ರಯತ್ನ ಪಡುತ್ತಿರುವನು. ಈ ಜ್ಞಾನದಿಂದ ಭೌತಿಕ, ರಸಾಯನ ಮುಂತಾದ ಶಾಸ್ತ್ರಗಳು ಹುಟ್ಟಿವೆ. ಇದರಿಂದ ಮನುಷ್ಯನಿಗೆ ಪ್ರಕೃತಿಯ ನಿಜಗುಣವನ್ನು ಕಂಡುಹಿಡಿದು, ಅದರ ಮೇಲೆ ಹತೋಟಿಯನ್ನಿಡಲು ಸಾಧ್ಯವಾಯಿತು. ಪ್ರಾಣಿಗಳು ಸಹ ಎಲ್ಲ ಕಾಲದಲ್ಲಿಯೂ ನೀರು ದೊರೆಯುವ ಸ್ಥಳಗಳಿಗೆ ಹತ್ತಿರವಾಗಿ ನೆಲಸುವುವು. ಹಿಂದಿನ ಕಾಲದಿಂದಲೂ ಮನುಷ್ಯರು ಎಲ್ಲಿ ನದಿಗಳು ಹರಿಯುವುವೋ ಆ ಎಡೆಯಲ್ಲಿ ಊರುಗಳನ್ನು ಕಟ್ಟಿಕೊಳ್ಳುತ್ತಿದ್ದರು. ಕ್ರಮೇಣ ಪ್ರಕೃತಿಯ ವಿಷಯವಾಗಿ ಮನುಷ್ಯನ ಜ್ಞಾನವು ಹೆಚ್ಚಿ, ನದಿಗಳ ಆಸರೆಯೇ ಅಲ್ಲದೆ ಇಳಿಜಾರು ಭೂಮಿಗಳಲ್ಲಿ ಬೀಳುವ ಮಳೆಯ ನೀರಿಗೆ ಕಟ್ಟೆಯನ್ನು ಕಟ್ಟಿ ನೀರನ್ನು ತಡೆದು ಕೆರೆಗಳ ನಿರ್ಮಾಣವನ್ನು ಮಾಡಿಕೊಳ್ಳಲಾರಂಭಿಸಿದರು. ಜ್ಞಾನವು ಇನ್ನೂ ಮುಂದುವರಿದ ಮೇಲೆ ನದಿಗಳಿಗೆ ಕಟ್ಟೆಹಾಕಿ, ವ್ಯರ್ಥವಾಗಿ ಸಮುದ್ರಕ್ಕೆ ಹರಿದು ಹೋಗುತ್ತಿದ್ದ ನೀರನ್ನು ನಿಲ್ಲಿಸಿ, ನಾಲೆಗಳ ಮೂಲಕ ಬೇಸಾಯಕ್ಕೆ ಅನುಕೂಲವಾಗುವ ಹಾಗೆ ಮಾಡಲಾಯಿತು. ಹರಿಯುವ ನೀರಿನ ಶಕ್ತಿಯನ್ನುಪಯೋಗಿಸಿಕೊಳ್ಳಲು ವಿದ್ಯುಚ್ಛಕ್ತಿಯ ಯಂತ್ರಗಳನ್ನು ಸ್ಥಾಪಿಸಲಾಯಿತು. ಹೀಗೆ ಪ್ರಕೃತಿಯ ಜ್ಞಾನವು ಮನುಷ್ಯನಲ್ಲಿ ಹೆಚ್ಚಿದಂತೆಲ್ಲಾ ಅದರ ಮೇಲೆ ಮನುಷ್ಯನ ಅಧಿಕಾರವೂ ಹೆಚ್ಚಿ, ಹೆಚ್ಚಿನ ಅನುಕೂಲಗಳನ್ನೂ ಪಡೆಯಲಾಯಿತು.

ಪ್ರಾಣಿಗಳು ತಮ್ಮ ಸುತ್ತಮುತ್ತಲಿರುವ ಪದಾರ್ಥಗಳ ಗುಣಗಳ ತಿಳಿವಳಿಕೆಯೇ ಅಲ್ಲದೆ, ಇತರ ಪ್ರಾಣಿಗಳ ಗುಣ ಸ್ವಭಾವಗಳನ್ನು ಸಹ ಅರಿತುಕೊಂಡು ವರ್ತಿಸುವುವು. ಜಿಂಕೆ ಮುಂತಾದ ಪ್ರಾಣಿಗಳು ತಮಗೆ ಹಾನಿಯನ್ನುಂಟುಮಾಡುವ ಕ್ರೂರಮೃಗಗಳನ್ನು ನೋಡಿದ ಕೂಡಲೆ ಓಡಿಬಿಡುವುವು. ಕಣ್ಣಿನಿಂದ ನೋಡಿದ ಆಕಾರದಿಂದ ಮಾತ್ರವೇ ಅಲ್ಲದೆ ಕಿವಿಯಿಂದ ಕೇಳಿದ ಶಬ್ದ, ಮೂಗಿನಿಂದ ಕಂಡು ಹಿಡಿದ ವಾಸನೆ ಇವುಗಳ ಆಧಾರದ ಮೇಲೆಯೂ ತಮ್ಮ ಆತ್ಮ ರಕ್ಷಣೆಯನ್ನು ಮಾಡಿಕೊಳ್ಳುವುವು. ಗಾಡಿಯನ್ನು ಎಳೆದುಕೊಂಡು ಕಾಡಿನಲ್ಲಿ ಹೋಗುತ್ತಿರುವ ಎತ್ತುಗಳು ದೂರದಲ್ಲಿರುವ ಹುಲಿಯ ಇರುವಿಕೆಯನ್ನು ಅರಿತು, ಕೂಡಲೆ ಗಾಡಿಯಲ್ಲಿರುವ ಮನುಷ್ಯನಿಗೆ ಸೂಚನೆ ಕೊಡುವುವು. ನಮ್ಮ ಮನೆಗಳಲ್ಲಿರುವ ನಾಯಿ, ಬೆಕ್ಕು, ಹಸು, ಮುಂತಾದ ಪ್ರಾಣಿಗಳು ನಮ್ಮ ಸ್ವಭಾವ ಮತ್ತು ಚಲನ ವಲನಗಳಿಗೆ ಅನುಸಾರವಾಗಿ ವರ್ತಿಸತೊಡಗುವುವು. ಈ ರೀತಿ ಒಂದೊಂದು ಪ್ರಾಣಿಯೂ ಇತರ ಪ್ರಾಣಿಗಳ ವರ್ತನೆಯನ್ನು ತಕ್ಕಷ್ಟು ಮಟ್ಟಿಗೆ ತಿಳಿದುಕೊಂಡು ತನ್ನ ಜೀವನವನ್ನು ನಡಸುವುದು.

ಹೀಗೆಯೇ ಪ್ರಾಣಿಗಳೇ ಆಗಲಿ, ಮನುಷ್ಯರೇ ಆಗಲಿ ತಮ್ಮ ಆವರಣದಲ್ಲಿರುವ ಇತರ ಪ್ರಾಣಿಗಳ ಮತ್ತು ಮನುಷ್ಯರ ನಡವಳಿಕೆಯನ್ನು ಅರಿಯುವುದಕ್ಕೆ ಪ್ರಯತ್ನಮಾಡುವುದು ಸ್ವಾಭಾವಿಕವಾಗಿರುವುದು. ಇಲ್ಲದಿದ್ದರೆ ಶತ್ರುಗಳಿಂದ ಆತ್ಮರಕ್ಷಣೆಯನ್ನು ಮಾಡಿಕೊಳ್ಳುವುದು ಅಸಾಧ್ಯವಾಗುತ್ತಿತ್ತು. ಇಂತಹ ಅರಿವೇ ಮನಶ್ಶಾಸ್ತ್ರಕ್ಕೆ ಅಡಿಗಲ್ಲು. ಬೇರೆ ಶಾಸ್ತ್ರಜ್ಞರು ಹೇಗೆ ಸಾಮಾನ್ಯ ತಿಳಿವಳಿಕೆಗಳ ಪರಿಶೀಲನವನ್ನು ಮುಂದುವರಿಸಿ ಅದರಿಂದ ಉಂಟಾದ ಜ್ಞಾನವನ್ನು ಕ್ರಮಬದ್ಧವಾಗಿ ಮಾಡುವರೋ ಅದೇ ರೀತಿ ಮನಶ್ಶಾಸ್ತ್ರಜ್ಞರು ಪ್ರಾಣಿಗಳ ಮತ್ತು ಮನುಷ್ಯರ ವರ್ತನೆಯ ಸಾಮಾನ್ಯ ಜ್ಞಾನವನ್ನು ಕ್ರಮಬದ್ಧವಾಗಿ ಮಾಡಲು ಪ್ರಯತ್ನಿಸುವರು. ನಾವು ಮೇಲೆ ನೋಡಿದ ಉದಾಹರಣೆಯಲ್ಲಿ ಹೇಗೆ ಪ್ರಕೃತಿಜ್ಞಾನವು ಹೆಚ್ಚುತ್ತ ಹೆಚ್ಚುತ್ತ ಮನುಷ್ಯ ಜೀವನವು ಸುಧಾರಿತವಾಗುವುದೋ ಅದೇ ರೀತಿ ಪ್ರಾಣಿಗಳ ಮತ್ತು

ಮನುಷ್ಯರ ವರ್ತನೆಯ ಜ್ಞಾನವು ಹೆಚ್ಚಿದ ಹಾಗೆಲ್ಲ ಜೀವನವು ಸುಖವಾಗಲು ಸಾಧ್ಯವಾಗುವುದು.

ಇಂದು ಭೌತ, ರಸಾಯನ ಮುಂತಾದ ವಿಜ್ಞಾನ ಶಾಸ್ತ್ರಗಳು ಹೆಚ್ಚಾಗಿ ಮುಂದುವರಿದಿವೆ. ಇದರ ಪರಿಣಾಮವಾಗಿ ಅಪಾರ ಸಂಪತ್ತು ಉತ್ಪನ್ನವಾಗುತ್ತಿದೆ. ಆದರೂ ಪ್ರಪಂಚದಲ್ಲಿ ಬಡತನ, ದುಃಖ, ದ್ವೇಷ ಮೊದಲಾದ ಸಾಮಾಜಿಕ ರೋಗರುಜಿನಗಳು ನಿವಾರಣೆಯಾಗಲೇ ಇಲ್ಲ. ಕಾರಣವೇನು ? ಮೇಲೆ ಹೇಳಿದ ವಿಜ್ಞಾನ ಶಾಸ್ತ್ರಗಳ ಬೆಳವಣಿಗೆಗೆ ತಕ್ಕಂತೆ ಸಮಾಜ ಶಾಸ್ತ್ರಗಳ, ಅದರಲ್ಲೂ ಮನಶ್ಶಾಸ್ತ್ರದ ಬೆಳವಣಿಗೆ ಮತ್ತು ಪ್ರಚಾರಗಳು ಆಗುತ್ತಿಲ್ಲ. ಇದರಿಂದಲೇ ಸುಖದ ಸಾಧನಗಳು ಹೆಚ್ಚುತ್ತಿದ್ದರೂ ಪ್ರಪಂಚದಲ್ಲಿ ದುಃಖದ ಪ್ರಮಾಣವು ಕಡಿಮೆಯಾಗಿಲ್ಲ; ಸಂಪತ್ತು ಹೆಚ್ಚುತ್ತಿದ್ದರೂ ಬಡತನವು ನಿವಾರಣೆಯಾಗಿಲ್ಲ; ಭೌತ, ರಸಾಯನ ಶಾಸ್ತ್ರಗಳ ಬೆಳವಣಿಗೆಯ ಉಪಯೋಗವನ್ನು ನಾವು ಪೂರ್ಣವಾಗಿ ಪಡೆಯಬೇಕಾದರೆ ಸಮಾಜ ಶಾಸ್ತ್ರಗಳ ಜ್ಞಾನವೂ ಮನಶ್ಶಾಸ್ತ್ರದ ಜ್ಞಾನವೂ ಮುಂದುವರಿಯುವುದು ಅತ್ಯಾವಶ್ಯಕ.

ಮನಶ್ಶಾಸ್ತ್ರವನ್ನೂ ನಾವು ವರ್ತನ ಶಾಸ್ತ್ರವೆಂದು ಕರೆಯಬಹುದು. ಪ್ರಾಚೀನ ಕಾಲದಿಂದಲೂ ಶಾಸ್ತ್ರಜ್ಞರು ಮನುಷ್ಯನ ಬುದ್ಧಿಕುಶಲತೆಗೂ ಕೋಪ, ಭಯ ಮುಂತಾದ ಭಾವೋದ್ರೇಕಗಳಿಗೂ ಆತ್ಮವು ಆಧಾರವೆಂದು ತಿಳಿದಿದ್ದರು. ಆ ಕಾಲದಲ್ಲಿ ನಮ್ಮ ಹಿಂದೂದೇಶದಲ್ಲಿಯೂ, ಗ್ರೀಕ್ ದೇಶದಲ್ಲಿಯೂ ಆತ್ಮವೆಂದರೇನು, ಆತ್ಮಕ್ಕೂ ಸುಖದುಃಖಗಳಿಗೂ ಏನು ಸಂಬಂಧ ಎಂಬ ಈ ವಿಚಾರಗಳನ್ನು ಚರ್ಚಿಸುತ್ತಿದ್ದರು. ಸುಮಾರು ಮೂರು ಸಾವಿರ ವರ್ಷಗಳ ಹಿಂದೆ, ಅಂದರೆ ಪಾಶ್ಚಾತ್ಯ ದೇಶಗಳಲ್ಲಿ ತತ್ತ್ವಶಾಸ್ತ್ರವು ಹುಟ್ಟುವುದಕ್ಕಿಂತ ಬಹಳ ಹಿಂದೆಯೇ, ನಮ್ಮ ದೇಶದಲ್ಲಿ ಚಾರ್ವಾಕಮತಸ್ಥಾಪಕರಾದ ಶಾಸ್ತ್ರಜ್ಞರು "ಆತ್ಮ" ಎನ್ನುವುದು ವಸ್ತುವಲ್ಲ, ಅದು ನಮ್ಮ ಪ್ರತ್ಯಕ್ಷ ಅನುಭವಕ್ಕೆ ಬರುವುದಲ್ಲ ಎಂದರು. ಪ್ರತ್ಯಕ್ಷ ಒಂದೇ ಪ್ರಮಾಣ. ಈ ಆತ್ಮ ಎನ್ನುವ ವಸ್ತು ನಮ್ಮ ಅನುಭವಕ್ಕೆ ಸಿಲುಕುವುದಲ್ಲ. ಆದುದರಿಂದ ಅದರ ವಿಚಾರವಾಗಿ ನಾವು ಚರ್ಚೆ ಮಾಡುವುದು ವ್ಯರ್ಥವೆಂದು ವಾದಿಸಿದರು.

ಪಾಶ್ಚಾತ್ಯ ದೇಶಗಳಲ್ಲಿ 'ಸೈಕಾಲಜಿ' ಎನ್ನುವ ಪದವು 'ಸೈಕಿ' ಎಂಬ ಪದದಿಂದ ಹುಟ್ಟಿದೆ 'ಸೈಕಿ' ಎಂದರೆ ಗ್ರೀಕ್ ಭಾಷೆಯಲ್ಲಿ ಆತ್ಮ ಎಂದರ್ಥ. 'ಸೈಕಾಲಜಿ' ಶಾಸ್ತ್ರವು ಆತ್ಮಶಾಸ್ತ್ರವೆಂದು ಪೂರ್ವಿಕರು ಹೇಳಿದ್ದರು. ಕ್ರಮೇಣ ಆತ್ಮವು ಅಗೋಚರವಾದುದು ಎಂದು ತಿಳಿದು ಚಾರ್ವಾಕರು ವಾದಿಸಿದ ಹಾಗೆ ಅಲ್ಲಿಯೂ ಕೆಲವರು ವಾದಿಸಿ ಸೈಕಾಲಜಿ ಶಾಸ್ತ್ರಕ್ಕೆ ಆಧಾರವು ಆತ್ಮವಲ್ಲ 'ಮನಸ್ಸು' ಎಂದು ತಮ್ಮ ಭಾವನೆಯನ್ನು ಬದಲಾಯಿಸಿದರು. ಆತ್ಮವನ್ನು ಕುರಿತು ವಿಚಾರ ಮಾಡುವುದು ತತ್ತ್ವಶಾಸ್ತ್ರಜ್ಞರ ಕೆಲಸವೇ ಹೊರತು, ಮನಶ್ಶಾಸ್ತ್ರಜ್ಞರ ಕೆಲಸವಲ್ಲವೆಂದು ಅಭಿಪ್ರಾಯಪಟ್ಟರು. ಸ್ವಲ್ಪ ಕಾಲದ ಅನಂತರ ಮನಸ್ಸೆಂಬ ವಿಚಾರವೂ ಅಗೋಚರವಾದುದು ; ಇದು ವಾಸ್ತವಿಕ ಶಾಸ್ತ್ರವು ವಿಚಾರ ಮಾಡಲರ್ಹವಾದ ವಿಷಯವಲ್ಲ ಎಂದು ಮತ್ತೊಂದು ಬದಲಾವಣೆಯಾಯಿತು ಆ ಕಾಲದಲ್ಲಿ ಮನಶ್ಶಾಸ್ತ್ರಜ್ಞರು ಮನಸ್ಸಿನ ರೂಪ, ರಚನೆ ಮತ್ತು ಲಕ್ಷಣಗಳನ್ನು ತಿಳಿದುಕೊಳ್ಳಲು ತಮ್ಮ ಮನೋಭಾವಗಳು ಮತ್ತು ಭಾವೋದ್ರೇಕಗಳನ್ನು ಕುರಿತು ಚಿಂತನ ಮಾಡುವುದೊಂದೇ ವಿಧಾನವೆಂದು ಅರಿತಿದ್ದರು. ಈ ಭಾವನೆಗಳು ಮತ್ತು ಭಾವೋದ್ರೇಕಗಳು ಚೇತನ (ಕಾನ್ಷಸ್‌ನೆಸ್) ದ ಸತ್ತ್ವ. ಆದುದರಿಂದ ಮನಶ್ಶಾಸ್ತ್ರವು ಮನಸ್ಸು ಎಂಬ ವಸ್ತುವನ್ನು ಕುರಿತು ವಿಚಾರ ಮಾಡುವ ಶಾಸ್ತ್ರವಲ್ಲ. ಅದು ಚೇತನ ವಿಷಯವನ್ನು ಕುರಿತು ವಿಚಾರ ಮಾಡುವ ಶಾಸ್ತ್ರವೆಂದು ನಂಬಿಕೆಯಾಯಿತು. ಚೇತನವು ನಮ್ಮ ಅನುಭವದ ವಸ್ತು ; ಅದನ್ನು ಕುರಿತು ವಿಶ್ಲೇಷಣ ಮಾಡುವುದು ಸಾಧ್ಯ. ಆದರೆ ಮನಸ್ಸು ಎನ್ನುವುದು ಒಂದು ವಸ್ತುವಲ್ಲ ; ಅದು ಚೇತನಕ್ಕೆ ಆಧಾರವಾದುದೆಂಬ ನಂಬಿಕೆಯೇ ಹೊರತು ಅದು ಪ್ರತ್ಯೇಕ ಅಸ್ತಿತ್ವವನ್ನು ಪಡೆದಿರುವ ವಸ್ತುವಲ್ಲ ಎಂದು ನಂಬಿದರು. ಆ ಸಮಯದಲ್ಲಿ ಮನಶ್ಶಾಸ್ತ್ರಜ್ಞರು ಭಾವನೆಗಳನ್ನೂ (ಐಡಿಯಾಸ್) ಅವುಗಳಿಗಿರುವ ಸಂಗವನ್ನೂ (ಅಸೋಸಿಯೇಷನ್) ಕುರಿತು ಬಹಳವಾಗಿ ವಿಚಾರ ಮಾಡಿದರು. ಆದರೆ ಮತ್ತೆ ಕೆಲವು ಶಾಸ್ತ್ರಜ್ಞರಿಗೆ ಈ ವಿಚಾರದಲ್ಲಿ ನಂಬಿಕೆ ಕಡಿಮೆಯಾಯಿತು. ಮನಶ್ಶಾಸ್ತ್ರಜ್ಞರು ಮೃಗಗಳ, ಮಕ್ಕಳ, ಹುಚ್ಚರ ನಡೆ

ವಳಿಕೆಗಳನ್ನು ಪರೀಕ್ಷಿಸಲು ಪ್ರಾರಂಭಿಸಿದರು. ಈ ವರ್ತನೆಗಳ ತತ್ತ್ವಗಳನ್ನರಿಯಲು ಚೇತನಕ್ಕೆ ಸಂಬಂಧಪಟ್ಟ ಭಾವನೆಗಳು ಅಷ್ಟೊಂದು ಸಹಕಾರಿಗಳಾಗುತ್ತಿರಲಿಲ್ಲ. ಮನಶ್ಶಾಸ್ತ್ರವು ಮುಂದುವರಿಯ ಬೇಕಾದರೆ ವಯಸ್ಕರ ನಡವಳಿಕೆಯ ಪರಿಶೀಲನ ಒಂದೇ ಸಾಲದು ಎಂಬ ಅಭಿಪ್ರಾಯವು ಬಲವಾಯಿತು. ಜೀವಂತ ಪ್ರಾಣಿಗಳೆಲ್ಲದರ ನಡವಳಿಕೆಯನ್ನು ಪರಿಶೀಲನೆ ಮಾಡುವುದು ಅತ್ಯಗತ್ಯವೆಂದು ತಿಳಿದು ಬಂದಿತು. ಈ ಅಭಿಪ್ರಾಯವು ಬಂದಮೇಲೆ ಈಗ್ಗೆ ಸುಮಾರು ಐವತ್ತು ವರ್ಷಗಳಿಂದ ಮನಶ್ಶಾಸ್ತ್ರದ ಗುಣ, ಲಕ್ಷಣನಿರೂಪಣೆ, ಅರ್ಥವಿವರಣೆ ಮತ್ತು ಕ್ಷೇತ್ರ ವೈಶಾಲ್ಯಗಳು ಸಂಪೂರ್ಣವಾಗಿ ಬದಲಾವಣೆಯನ್ನೂ ಹೊಂದಿದುವು.

## ಮನಶ್ಶಾಸ್ತ್ರದ ವ್ಯಾಪ್ತಿ (ಸ್ಕೋಪ್)

ಮನಶ್ಶಾಸ್ತ್ರವು ಯಾವ ವಿಷಯಗಳನ್ನು ಕುರಿತು ವಿವೇಚಿಸು ತ್ತದೆ ಎನ್ನುವುದನ್ನು ತಿಳಿದುಕೊಂಡರೆ ಆಗ ಮನಶ್ಶಾಸ್ತ್ರವೆಂದರೇನು ಎನ್ನುವುದು ಸ್ಪಷ್ಟವಾಗುವುದು. ಒಂದು ಸರಕಾರಕ್ಕೆ ಒಂದು ಖಚಿತ ವಾದ ಭೂಪ್ರದೇಶವು ಹೇಗೆ ಅಗತ್ಯವೋ ಹಾಗೆಯೇ ಒಂದು ವಿಜ್ಞಾನ ಶಾಸ್ತ್ರಕ್ಕೆ ಒಂದು ನಿರ್ದಿಷ್ಟವಾದ ಕ್ಷೇತ್ರವು ಆವಶ್ಯಕ. ಕ್ಷೇತ್ರವು ಖಚಿತ ವಾಗಿ ನಿಶ್ಚಯವಾಗದಿದ್ದರೆ ಶಾಸ್ತ್ರದ ವಿವೇಚನೆಯು ಪೂರ್ಣವಾಗಲಾ ರದು ; ಫಲದಾಯಕವಾಗಲಾರದು. ಆದುದರಿಂದ ಮನಶ್ಶಾಸ್ತ್ರವು ಯಾವ ಯಾವ ವಿಷಯಗಳನ್ನು ಕುರಿತು ಸಂಶೋಧನೆಯನ್ನು ನಡಸು ವುದೆಂಬ ತಿಳಿವಳಿಕೆಯು ಆವಶ್ಯಕ.

ಆಧುನಿಕ ಮನಶ್ಶಾಸ್ತ್ರವು ಎರಡು ವಿಷಯಗಳನ್ನು ಕುರಿತು ಪರಿ ಶೀಲನೆ ಮಾಡುತ್ತದೆ—ಒಂದು ಜೀವಿಯ ವರ್ತನೆ (ಬಿಹೇವಿಯರ್) ಎರಡನೆಯದು ಜೀವಿಯ ಅನುಭವ (ಎಕ್ಸ್‌ಪೀರಿಯನ್ಸ್). ಯಾವ ಪ್ರಾಣಿಯಾಗಲಿ ತನ್ನ ಆವರಣಕ್ಕೆ ಸಂಬಂಧಿಸಿದ ಹಾಗೆ ವರ್ತಿಸಿದರೆ ಅದು ಮನಶ್ಶಾಸ್ತ್ರಕ್ಕೆ ಒಂದು ವಿಷಯವಾಗುವುದು. ಈ ವರ್ತನೆಯು ಅಣುಜೀವಿಯಲ್ಲಿದ್ದರೂ ಸರಿಯೆ, ಮನುಷ್ಯನಲ್ಲಿದ್ದರೂ ಸರಿಯೆ, ಯಾವ

ವರ್ತನೆಯನ್ನಾದರೂ ಪರಿಶೀಲಿಸುವುದಕ್ಕೆ ಮನಶ್ಶಾಸ್ತ್ರವು ಪ್ರಯತ್ನಿಸುವುದು. ಒಂದೊಂದು ವರ್ತನೆಗೂ ಅನುಗುಣವಾಗಿ ಆ ಜೀವಿಯಲ್ಲಿ ಒಂದೊಂದು ಅನುಭವವು ಇರುವುದೆಂದು ನಾವು ಊಹಿಸಬಹುದು. ಈ ಊಹೆಗೆ ಆಧಾರ ನಮ್ಮ ಸ್ವಾನುಭವ. ನಾನು ಒಂದು ಹಾವನ್ನು ಕಂಡು ಓಡಿ ಹೋಗುವಾಗ ನನ್ನ ಮನಸ್ಸಿನಲ್ಲಿ ಹೆದರಿಕೆಯುಂಟೆಂದು ನನ್ನ ಸ್ವಾನುಭವ. ನನ್ನ ಜೊತೆಗಾರನೊಬ್ಬನು ನಾನು ಓಡಿದಹಾಗೆಯೇ ಓಡಿದರೆ ಅವನಲ್ಲಿಯೂ ಹೆದರಿಕೆ ಇರಬಹುದೆಂದು ನಾನು ಊಹಿಸಬಹುದು. ಇದರ ಸತ್ಯಾ ಸತ್ಯವನ್ನು ಆತನನ್ನು ಪ್ರಶ್ನಿಸಿ ನಾನು ತಿಳಿದುಕೊಳ್ಳಬಹುದು. ಇದೇ ರೀತಿ ಹಾವನ್ನು ಕಂಡ ಪಶು ಸಹ ಓಡುವುದು. ಅದರ ವರ್ತನವನ್ನು ನಾವು ನೋಡಿದಾಗ ಅದಕ್ಕೆ ಮನಸ್ಸು ಎನ್ನುವುದಿದ್ದರೆ ನಮ್ಮ ಮನಸ್ಸಿನಲ್ಲಾದ ಪರಿವರ್ತನೆಯ ರೀತಿ ಅದರ ಮನಸ್ಸಿನಲ್ಲಿಯೂ ಆಗಿರಬಹುದೆಂದು ನಾವು ಊಹಿಸುತ್ತೇವೆ ಕೋತಿ, ನಾಯಿ, ಬೆಕ್ಕು, ದನಕರುಗಳಲ್ಲಿಯೂ ನಮಗುಂಟಾದ ಅನುಭವಗಳ ಹಾಗೆಯೇ ಅವುಗಳಲ್ಲಿಯೂ ಉಂಟಾಗಿರಬಹುದೆಂದು ನಾವು ಸ್ವಲ್ಪ ಧೈರ್ಯವಾಗಿ ಊಹಿಸಬಹುದು ಆದರೆ ತನ್ನ ಸಮೀಪಕ್ಕೆ ಬಂದ ಹಂಚೀಕಡ್ಡಿಯನ್ನು ಕಂಡ ಇರುವೆ ಓಡಿಹೋದರೆ ಅದರಲ್ಲಿಯೂ ಭಯಾನುಭವವಿತ್ತೆಂದು ಹೇಳಲು ಸ್ವಲ್ಪ ಕಷ್ಟ. ಆದುದರಿಂದ ಮನುಷ್ಯೇತರ ಪ್ರಾಣಿಗಳಲ್ಲಿರುವ ಅನುಭವವನ್ನು ಮನಶ್ಶಾಸ್ತ್ರವು ಪರಿಶೀಲನ ಮಾಡುವುದಕ್ಕಾಗುವುದಿಲ್ಲ. ಮನುಷ್ಯರಲ್ಲಿಯೂ ಹುಚ್ಚರು, ಅನಾಗರಿಕ ಕಾಡುಮನುಷ್ಯರು ಇವರ ಅನುಭವಗಳನ್ನು ಪರಿಶೀಲಿಸುವುದು ಬಹಳ ಕಷ್ಟ. ಆದುದರಿಂದ ಮನುಷ್ಯನ ಮತ್ತು ಮನುಷ್ಯೇತರ ಪ್ರಾಣಿಗಳ ವರ್ತನಯ ವಿಶ್ಲೇಷಣವನ್ನು ಮಾಡುವುದೇ ಮನಶ್ಶಾಸ್ತ್ರದ ಮುಖ್ಯ ಕೆಲಸ. ಇದರಿಂದಲೇ ಮನಶ್ಶಾಸ್ತ್ರವನ್ನು ಈಗ ವರ್ತನ ಶಾಸ್ತ್ರವೆಂದು ಕರೆಯಬೇಕೆಂದು ಕೆಲವು ಮನಶ್ಶಾಸ್ತ್ರಜ್ಞರು ಹೇಳುತ್ತಿರುವರು. ಆದರೆ ಅನುಭವವನ್ನು ಎಲ್ಲೆಲ್ಲಿ ಪರಿಶೀಲಿಸಲು ಸಾಧ್ಯವೋ ಅದನ್ನು ತಪ್ಪದೇ ಮಾಡಬೇಕೆಂಬುದನ್ನು ಇತ್ತೀಚೆಗೆ ಎಲ್ಲರೂ ಅಂಗೀಕರಿಸಿರುವರು. ಆದುದರಿಂದ ಮನಶ್ಶಾಸ್ತ್ರವು ಎಲ್ಲಾ ಪ್ರಾಣಿಗಳ ವರ್ತನೆ

ಯನ್ನೂ ಸಾಧ್ಯವಾದೆಡೆಯಲ್ಲೆಲ್ಲಾ ಅನುಭವವನ್ನೂ ವಿವೇಚಿಸಲು ಪ್ರಯತ್ನಿಸುವುದು.

ಮನಶ್ಶಾಸ್ತ್ರವು ಈ ವರ್ತನೆ ಮತ್ತು ಅನುಭವಗಳನ್ನಲ್ಲದೆ ವರ್ತನೆಯ ಪರಿಣಾಮಗಳನ್ನೂ ಪರಿಶೀಲಿಸುವುದು. ಹಕ್ಕಿಯ ಗೂಡಿನ ರಚನೆಯನ್ನು ನೋಡಿ ಹಕ್ಕಿಯ ಮನೋವ್ಯಾಪಾರಗಳು ಎಂತಹವು ಎಂಬುದನ್ನು ನಾವು ಕಂಡು ಹಿಡಿಯಬಹುದು. ಇದೇ ರೀತಿ ಯಾವ ಮನುಷ್ಯನೇ ಆಗಲಿ ಮನುಷ್ಯೇತರ ಪ್ರಾಣಿಯೇ ಆಗಲಿ ಮಾಡಿರುವ ಕೆಲಸಗಳಿಂದ ಅವರ ಮನೋವೃತ್ತಿಗಳನ್ನು ನಾವು ತಿಳಿಯಬಹುದು. ಅಂದರೆ ನಾವು ಅವರ ವರ್ತನೆಯನ್ನು ಪ್ರತ್ಯಕ್ಷವಾಗಿ ಪರೀಕ್ಷೆ ಮಾಡದೆ ಹೋದರೂ ಆ ವರ್ತನೆಯಿಂದುಂಟಾದ ಪರಿಣಾಮಗಳನ್ನು ಪರೀಕ್ಷಿಸಿ, ವರ್ತನೆ ಯಾವ ರೀತಿ ಇರಬಹುದೆಂಬುದನ್ನು ನಾವು ಊಹಿಸುವುದು ಸಾಧ್ಯವಾಗಿರುವುದು. ಸಾಧಾರಣವಾಗಿ ಮನೋವ್ಯಾಪಾರಗಳನ್ನು ಬೋಧನ, ಭಾವನ, ಪ್ರೇರಣ ಎಂದು ಮೂರು ವಿಧವಾಗಿ ವಿಂಗಡಿಸಬಹುದು. ಮಗು ತಾಯಿಯನ್ನು ನೋಡಿದ ಕೂಡಲೆ ಕೈ ಚಾಚಿ 'ಅಮ್ಮ' ಎಂದು ಕರೆಯುವ ಸನ್ನಿವೇಶದಲ್ಲಿ ಈ ಮೂರು ಮನೋವ್ಯಾಪಾರಗಳೂ ಕಂಡುಬರುತ್ತವೆ. ಮಗು ತಾಯಿಯನ್ನು ನೋಡಿ ಗುರುತಿಸುವುದು 'ಬೋಧನ'; ಗುರುತಿಸಿದ ಪರಿಣಾಮವಾಗಿ ಅದರ ಮನಸ್ಸಿನಲ್ಲಿ ಸಂತೋಷವುಂಟಾಗುವುದು 'ಭಾವನ'; ತಾಯಿಯ ಬಳಿಗೆ ಹೋಗಬೇಕೆಂಬ ಇಚ್ಛೆಯು 'ಪ್ರೇರಣ.' ಹೀಗೆ ಮನೋವ್ಯಾಪಾರಗಳನ್ನು ಮೂರು ವಿಧವಾಗಿ ವಿಭಾಗ ಮಾಡಿರುವುದು ಕೇವಲ ವಿಂಗಡಿಕೆಯ ಸಲುವಾಗಿ. ಹೀಗೆ ವಿಂಗಡಿಸಿದರೆ ಒಂದು ವ್ಯಕ್ತಿಯ ವರ್ತನೆಯು ನಮಗೆ ಸುಲಭ ರೀತಿಯಲ್ಲಿ ಬೋಧೆಯಾಗುವುದು; ಅಷ್ಟೇ ಹೊರತು ಮನಸ್ಸು ಹೀಗೆ ಮೂರು ಭಾಗಗಳುಳ್ಳ ವಸ್ತುವಲ್ಲ. ಈ ಮೂರು ಅಂಶಗಳು ಪ್ರತಿ ವರ್ತನೆಯಲ್ಲಿಯೂ ಅಡಗಿರುವುದು. ಮೊಟಾರು ಡ್ರೈವರು ಕೆಟ್ಟು ಹೋಗಿರುವ ತನ್ನ ಕಾರನ್ನು ಸರಿಪಡಿಸುವಾಗ ಅವನಲ್ಲಿ ಬೋಧನಾವಸ್ಥೆಯೇ ಪ್ರಧಾನವಾಗಿರುವುದು. ಒಬ್ಬ ಗ್ರಂಥಕರ್ತನು ಪುಸ್ತಕವನ್ನು ಬರೆಯುವಾಗ

ಬೋಧನಾವಸ್ಥೆಯೇ ಮುಖ್ಯವಾಗಿರುವುದು. ಆದರೆ ಅದೇ ಸಮಯದಲ್ಲಿ ಅವರಿಬ್ಬರ ಮನಸ್ಸಿನಲ್ಲಿಯೂ ಭಾವನ ಮತ್ತು ಪ್ರೇರಣಗಳೂ ಇದ್ದೇ ಇರುವುವು. ರಿಪೇರಿ ಮಾಡುವಾಗ ಒಂದೊಂದು ಭಾಗವೂ ಸರಿಯಾಗಿ ಕೆಲಸ ಮಾಡುವುದೋ ಇಲ್ಲವೋ ಎಂಬುದನ್ನು ಪರೀಕ್ಷಿಸುವುದು ಆತನ ಮನಸ್ಸಿನಲ್ಲಿ ನಡೆಯುತ್ತಿರುವ ಮುಖ್ಯ ಕೆಲಸ. ಇದೇ ಬೋಧನ. ಕೆಟ್ಟುಹೋಗಿರುವ ಕಾರನ್ನು ಸರಿಪಡಿಸಬೇಕೆನ್ನುವ ಇಚ್ಛೆಯು 'ಪ್ರೇರಣ.' ತನ್ನ ಯೋಚನೆಗಳು ಫಲಕಾರಿಯಾದರೆ ಆತನಲ್ಲಿ ಸಂತೋಷವುಂಟಾಗುವುದು, ವಿಫಲವಾದರೆ ವ್ಯಸನ, ಕೋಪ ಮುಂತಾದ ಭಾವನೆಗಳು ಉಂಟಾಗುವುವು. ಒಬ್ಬ ವ್ಯಕ್ತಿಯು ಸಂಗೀತ ಸಭೆಯಲ್ಲಿ ಆನಂದ ಮಗ್ನನಾಗಿರುವಾಗ ಅವನಲ್ಲಿ ಭಾವನಾವಸ್ಥೆಯೇ ಪ್ರಧಾನ. ಆದರೆ ಅಲ್ಲಿಯೂ 'ಬೋಧನ' 'ಪ್ರೇರಣ' ಗಳು ಸೇರಿಕೊಂಡೇ ಇರುವುವು. ಸಂಗೀತವನ್ನು ಕೇಳುವುದು, ಹಾಡಿನ ಅರ್ಥವನ್ನು ಗ್ರಹಿಸುವುದು, ರಾಗದಲ್ಲಿ ನಾದದ ಹೊಂದಿಕೆಯನ್ನು ತಿಳಿಯುವುದು ಇವೆಲ್ಲವೂ ಬೋಧನ. ಸಂತೋಷವನ್ನು ಇನ್ನೂ ಹೆಚ್ಚಾಗಿ ಅನುಭವಿಸಬೇಕೆಂಬ ಇಚ್ಛೆಯು ಪ್ರೇರಣ. ಹೀಗೆಯೇ ಪ್ರತಿಯೊಂದು ವರ್ತನೆಯನ್ನೂ ಪರಿಶೀಲಿಸುವುದೇ ಮನಶ್ಶಾಸ್ತ್ರದ ಮುಖ್ಯ ಕೆಲಸವಾಗಿರುವುದು.

## ಮನಶ್ಶಾಸ್ತ್ರದ ವಿಧಾನ

ಮನಶ್ಶಾಸ್ತ್ರದ ವಿಧಾನಗಳು ಅದು ಪರಿಶೀಲಿಸುವ ವಿಷಯಗಳಿಗನುಗುಣವಾಗಿರುವುವು. ಮೇಲೆ ಹೇಳಿದಂತೆ ಪ್ರತಿಯೊಂದು ಜೀವಿಯೂ ಒಂದೊಂದು ಸನ್ನಿವೇಶದಲ್ಲಿ ಯಾವ ರೀತಿ ವರ್ತಿಸುವುದು ಎನ್ನುವುದನ್ನು ಮನಶ್ಶಾಸ್ತ್ರವು ವಿಚಾರ ಮಾಡುವುದು. ಇದೇ ವರ್ತನಾ ಪರಿಶೀಲನ (ಆಬ್ಸರ್‌ವೇಷನ್) ಈ ಮಾರ್ಗದಿಂದಲೇ ಎಲ್ಲಾ ಪ್ರಾಣಿಗಳ ವರ್ತನೆಯ ತತ್ತ್ವಗಳನ್ನು ಕಂಡು ಹಿಡಿಯಲು ಸಾಧ್ಯವಾಗುವುದು. ಆದರೆ ಪ್ರಾಚೀನ ಕಾಲದಲ್ಲಿ ಈ ಮಾರ್ಗಕ್ಕೆ ಅಷ್ಟೊಂದು ಪ್ರಾಮುಖ್ಯತೆ ಇರಲಿಲ್ಲ. ನಮ್ಮದೇಶದಲ್ಲಿಯೂ ಪಾಶ್ಚಾತ್ಯದೇಶಗಳಲ್ಲಿಯೂ ಮನೋವ್ಯಾಪಾರಗಳನ್ನು ಅಂತರಾವಲೋಕನ (ಇಂಟ್ರಾಸ್ಪೆಕ್ಷನ್)

ಮಾರ್ಗದಿಂದಲೇ ಪರಿಶೀಲಿಸುವುದಕ್ಕೆ ಪ್ರಯತ್ನ ಪಡುತ್ತಿದ್ದರು. ಅಂತ ರಾವಲೋಕನವೆಂದರೆ ನಮ್ಮ ಮನಸ್ಸಿನೊಳಗೆ ಆಗುವ ಪರಿವರ್ತನೆ ಗಳನ್ನು ನಾವೇ ಪರೀಕ್ಷಿಸಿಕೊಳ್ಳುವುದು. ಇದಕ್ಕೆ 'ಚಿಂತನ ಮಾರ್ಗ' ಎನ್ನಬಹುದು. ಈ ಮಾರ್ಗವು ಬಹಳ ತೊಡಕಾದುದು. ಈ ಮಾರ್ಗ ವನ್ನು ಅನುಸರಿಸಬೇಕಾದರೆ, ಮನುಷ್ಯನು ಅಂತ್ಯಂತ ಅನುಭವಶಾಲಿ ಯಾಗಿರಬೇಕು. ಅಷ್ಟಾದರೂ ಈ ಮಾರ್ಗವು ನಮಗೆ ಸತ್ಯವನ್ನು ತೋರಿಸುತ್ತದೆ ಎಂಬ ಭರವಸೆಯಿಲ್ಲ. ಒಬ್ಬ ಮನುಷ್ಯನು ಅಂತ ರಾವಲೋಕನದಿಂದ ತನ್ನ ಮನೋವ್ಯಾಪಾರವು ಇದೇ ರೀತಿ ಇದ್ದಿತು ಎಂದು ಹೇಳಿದರೆ ಅದು ವಾಸ್ತವವಾಗಿಯೂ ಅವನ ಮನಸ್ಸಿನಲ್ಲಾದ ಪರಿಣಾಮವನ್ನು ಸೂಚಿಸುವುದೋ ಅಥವಾ ತನ್ನ ಮನೋವ್ಯಾಪಾರವು ಈ ರೀತಿಯೇ ಇರಬಹುದೆನ್ನುವ ಬಯಕೆಯ ಊಹೆಗಳನ್ನು ತೋರಿಸು ವುದೋ ಎಂಬ ಸಂದೇಹವು ನಮ್ಮಲ್ಲಿ ಇದ್ದೇ ಇರುವುದು ಸಾಧಾರಣ ವಾಗಿ ನಮ್ಮ ಎದುರಿಗೆ ನಡೆದ ಘಟನೆಗಳನ್ನು ನಾವು ವಿವರಿಸಬೇಕಾ ದರೆ ಸತ್ಯಾಂಶಗಳು ಹೊರಟು ಹೋಗಿ ನಮಗೆ ಯಾವುದು ಇಷ್ಟವೋ ಅದನ್ನು ಮಾತ್ರ ಹೇಳುವುದುಂಟು. ಕೆಲವು ವೇಳೆ ನಾವು ನೋಡಿ ದುದು ಒಂದಾದರೂ ನಮ್ಮ ಕಲ್ಪನೆಯಿಂದ ಬೇರೊಂದು ವಿವರಣೆ ಯನ್ನು ಕೊಡುವುದುಂಟು. ಹೀಗೆ ನಡೆದ ಘಟನೆಗಳನ್ನು ವಿವರಿಸು ವಾಗ ನಮ್ಮ ಊಹಾಪೋಹಗಳೂ, ಇಚ್ಛೆಗಳೂ, ಕಲ್ಪನೆಗಳೂ ಸೇರಿ ಸತ್ಯಾಂಶವನ್ನು ದೂರ ಮಾಡಿದರೆ ಇದು ನಮ್ಮ ಮನೋವ್ಯಾಪಾರ ಗಳನ್ನು ವಿವರಿಸುವಾಗ ಸತ್ಯಾಂಶವನ್ನೇ ಹೇಳುವೆವೆಂಬ ಭರವಸೆ ಹೇಗೆತಾನೆ ಇದ್ದೀತು?

ಚಿಂತನಮಾರ್ಗದಲ್ಲಿ ಮತ್ತೊಂದು ಕೊರತೆಯಿದೆ. ಎಲ್ಲರಲ್ಲಿಯೂ ಭಾಷಾಜ್ಞಾನವು ಒಂದೇ ಸಮನಾಗಿರುವುದಿಲ್ಲ. ಪದಗಳ ಮೇಲೆ ಚೆನ್ನಾಗಿ ಹತೋಟಿ ಇರುವವರು ತಮ್ಮ ಮನೋವ್ಯಾಪಾರಗಳನ್ನು ವಿಶದವಾಗಿ ವಿವರಿಸಬಲ್ಲರು. ಕೆಲವರು ಅದೇ ಮನೋವ್ಯಾಪಾರಗಳನ್ನು ಬಹು ಸಂಕುಚಿತ ರೀತಿಯಲ್ಲಿ ವಿವರಿಸುವರು. ಒಬ್ಬ ಸಾಧಾರಣ ವ್ಯಕ್ತಿಯು ಸೂರ್ಯಾಸ್ತವನ್ನು ನೋಡಿದಾಗ ವಿವರಿಸುವ ಮನೋ

ಭಾವನೆ ಮತ್ತು ವಿವರಣೆಗೂ, ಅದೇ ಅನುಭವವನ್ನು ವ್ಯಕ್ತಗೊಳಿಸುವ ಒಬ್ಬ ಕವಿಯ ವಿವರಣೆಗೂ ಬಹಳ ಅಂತರವಿರುವುದು. ಆದುದರಿಂದ ಮನೋವ್ಯಾಪಾರದ ಅಸ್ತಿತ್ವವನ್ನು ಕೇವಲ ಅಂತರಾವಲೋಕನದ ವಿವರಣೆಯನ್ನೇ ಆಧಾರವಾಗಿಟ್ಟುಕೊಂಡು ಪರಿಶೀಲನಮಾಡಿದರೆ, ಮನಶ್ಶಾಸ್ತ್ರವು ಹೆಚ್ಚಾಗಿ ಮುಂದುವರಿಯಲು ಅವಕಾಶವಾಗುವುದಿಲ್ಲ. ಬೇರೆ ವಿಜ್ಞಾನಶಾಸ್ತ್ರಗಳು ಬಹುವಾಗಿ ಮುಂದುವರಿದಿರುವುದಕ್ಕೂ ಮನಶ್ಶಾಸ್ತ್ರವು ಹಿಂದುಳಿದಿರುವುದಕ್ಕೂ ಇದೇ ಮುಖ್ಯಕಾರಣ.

ಚಿಂತನ ವಿಧಾನದಲ್ಲಿ ಮೂರನೆಯ ದೋಷ ಒಂದಿದೆ. ಒಂದು ಮನೋವ್ಯಾಪಾರದ ಸ್ವರೂಪವನ್ನು ಕಂಡುಹಿಡಿಯಲು ಮನೋವ್ಯಾಪಾರದಿಂದಲೇ ಸಾಧ್ಯ. ಮನೋವ್ಯಾಪಾರವನ್ನು ಮನೋವ್ಯಾಪಾರದಿಂದಲೇ ಪರಿಶೀಲಿಸಬೇಕಾಗುವುದು. ಅಂದರೆ ವಾದಿಯೇ ನ್ಯಾಯಾಧೀಶನಾಗುವನು! ಈ ಪರಿಸ್ಥಿತಿಯಲ್ಲಿ ಸತ್ಯಾನ್ವೇಷಣವು ಕಷ್ಟವೇ ಸರಿ! ಇನ್ನೊಂದು ಮಾತು ನಮಗೆ ಭಯವೋ ಕೋಪವೋ ಅಥವಾ ಯಾವುದೋ ಒಂದು ಭಾವೋದ್ರೇಕ ಉಂಟಾಗಿದೆ ಎನ್ನೋಣ ಆ ಕ್ಷಣದಲ್ಲಿ ನಮ್ಮ ಭಯದ ಅಥವಾ ಕೋಪದ ಸ್ವರೂಪ ಹೇಗಿರುವುದು ಎಂದು ಚಿಂತನ ಮಾಡತೊಡಗಿದರೆ ಆ ಭಾವೋದ್ರೇಕದ ಉದ್ವೇಗವು ಕೂಡಲೇ ಕಡಿಮೆಯಾಗುವುದು. ಆದುದರಿಂದ ಚಿಂತನಮಾರ್ಗವನ್ನು ಇನ್ನೊಂದು ರೀತಿಯಲ್ಲಿ ಉಪಯೋಗಿಸಿಕೊಳ್ಳುವರು. ಹೇಗೆಂದರೆ ಒಂದು ಮನೋವ್ಯಾಪಾರವಾಗುತ್ತಿರುವ ಸಮಯದಲ್ಲಿಯೇ ಅವಲಂಬಿಸದೆ, ಆ ವ್ಯಾಪಾರವು ಪೂರ್ಣವಾದನಂತರ ಅನುಸರಿಸುವರು. ಆದರೆ ಹೀಗೆ ಮಾಡುವುದರಿಂದ ಸ್ಮೃತಿ ಶಕ್ತಿಯ ಪ್ರಭಾವವು ಹೆಚ್ಚುವುದು. ಅಲ್ಲದೆ, ಸ್ಮೃತಿ ಶಕ್ತಿಯು ಎಷ್ಟಿರವುದೋ ಅದಕ್ಕೆ ಅನುಗುಣವಾದ ಚಿಂತನಾಶಕ್ತಿಯೂ ಇರುವುದೆಂದು ಹೇಳಿದ ಹಾಗಾಯಿತು. ಚಿಂತನ ಮಾರ್ಗದಿಂದ ನಮಗೆ ಲಭಿಸುವ ವಿವರಣೆಯು ಈ ಸ್ಮೃತಿ ದೋಷಗಳಿಂದ ಕೂಡಿರುವುದು.

ಅಂತರಾವಲೋಕನದ ಈ ದೋಷಗಳನ್ನೆಲ್ಲಾ ಪರ್ಯಾಲೋಚಿಸಿ ವಾಟ್ಸನ್ ಮುಂತಾದ ವರ್ತನವಾದಿಗಳು (ಬಿಹೇವಿಯರಿಸ್ಟ್ಸ್)

ಸುಮಾರು ಇಪ್ಪತ್ತು ವರ್ಷಗಳ ಹಿಂದೆ ಮನಶ್ಶಾಸ್ತ್ರವು ನಿಜವಾಗಿ ವಿಜ್ಞಾನಮಾರ್ಗವನ್ನು ಅವಲಂಬಿಸಿ ನಿರ್ದಿಷ್ಟವಾದ ಜ್ಞಾನವನ್ನು ನಮಗೆ ಕೊಡಬೇಕಾದರೆ, ಈ ಮಾರ್ಗವನ್ನು ಪೂರ್ಣವಾಗಿ ತ್ಯಜಿಸ ಬೇಕೆಂದು ವಾದಿಸಿದರು. ಆದರೆ ಈ ಮಾರ್ಗವು ದೋಷದಿಂದ ಕೂಡಿ ದರೂ ನಮಗೆ ಸತ್ಯವನ್ನು ತೋರಿಸಿಕೊಡುವ ಸಾಧನಗಳಲ್ಲಿ ಒಂದಾಗಿದೆ. ಈ ಮಾರ್ಗವು ದೋಷರಹಿತವಲ್ಲವೆಂದು ತಳ್ಳಿಹಾಕುವುದು ಸರಿಯಲ್ಲ. ಇದನ್ನು ಅನುಸರಿಸುವಾಗ ಇದು ಮೇಲೆ ಹೇಳಿದ ದೋಷಗಳಿಂದ ಕೂಡಿದೆ ಎನ್ನುವ ಅರಿವಿದ್ದರೆ ಸತ್ಯಾನ್ವೇಷಣೆಗೆ ಕುಂದಕವಿಲ್ಲ. ಸದ್ಯಕ್ಕೆ ಮನೋವಿಜ್ಞಾನದಲ್ಲಿ ಈ ಚಿಂತನ ಮಾರ್ಗವು ಯಾವ ರೀತಿಯಿಂದ ಉಪಯೋಗಿಸಲ್ಪಡುತ್ತದೆ ಎಂಬುದು ಮುಂದಿನ ವಾಕ್ಯಗಳಿಂದ ವಿಶದ ವಾಗುವುದು.

ವಿಜ್ಞಾನ ಶಾಸ್ತ್ರಗಳು ಸಾಧಾರಣವಾಗಿ ಪರಿಶೀಲನೆಯಲ್ಲಿ ಎರಡು ಮಾರ್ಗಗಳನ್ನು ಅವಲಂಬಿಸುವುವು ಒಂದು ಅವೇಕ್ಷಣ (ಅಬ್ಸರ್ವೇಷನ್) ಮತ್ತೊಂದು ಪ್ರಯೋಗ (ಎಕ್ಸ್‌ಪೆರಿಮೆಂಟ್). ಅವೇಕ್ಷಣ ಮಾರ್ಗವು ಎರಡು ಬಗೆಗಳಾಗಿರುವುದು—ಅಂತರಾವಲೋಕನ ಮತ್ತು ವರ್ತನ ಪರಿಶೀಲನ. ಬೇರೆ ವಿಜ್ಞಾನಗಳಲ್ಲಿ ಹೇಗೆ ಪ್ರಕೃತಿಯ ಸ್ವಭಾವವನ್ನರಿಯಲು ಅವೇಕ್ಷಣ ಮಾರ್ಗವನ್ನು ಉಪಯೋಗಿಸು ವರೋ, ಅದೇ ರೀತಿ ಮನಶ್ಶಾಸ್ತ್ರದಲ್ಲಿ ವರ್ತನ ಪರಿಶೀಲನ ಮಾರ್ಗ ವನ್ನು ಉಪಯೋಗಿಸುವರು ಆದರೆ ಅಂತರಾವಲೋಕನ ಮಾರ್ಗವು ಮನಶ್ಶಾಸ್ತ್ರಕ್ಕೇ ಒಂದು ಪ್ರತ್ಯೇಕವಾದ ವಿಧಾನ. ಈ ಮಾರ್ಗವನ್ನು ಮತ್ತೆ ಯಾವ ವಿಜ್ಞಾನಶಾಸ್ತ್ರವೂ ಅನುಸರಿಸಲಾರದು. ಇತರ ವಿಜ್ಞಾನಿಗಳು ಪ್ರಾಯೋಗಿಕ ಮಾರ್ಗವನ್ನು ಹದಿನೇಳನೆಯ ಶತಮಾನ ದಿಂದಲೂ ಬಹಳ ಹೆಚ್ಚಾಗಿ ಉಪಯೋಗಿಸುತ್ತಿರುವರು. ಆದರೆ ಮನಶ್ಶಾಸ್ತ್ರವು ತತ್ತ್ವಶಾಸ್ತ್ರದ ಒಂದು ಭಾಗವೆನಿಸಿಕೊಂಡಿದ್ದುದರಿಂದ ಈ ಮಾರ್ಗವನ್ನು ಹಿಂದಿನಿಂದಲೂ ಅವಲಂಬಿಸಿರಲಿಲ್ಲ. ೧೮೫೦ ರಿಂದ ಈಚೆಗೆ ಮನಶ್ಶಾಸ್ತ್ರದಲ್ಲಿ ಪ್ರಯೋಗಮಾರ್ಗವನ್ನು ಅವಲಂಬಿಸ ಲಾಗಿದೆ. ಮನಶ್ಶಾಸ್ತ್ರಕ್ಕೇ ಎಂದು ಪ್ರಯೋಗ ಶಾಲೆಯನ್ನು ೧೮೭೯ರಲ್ಲಿ

ಲೈಪ್ಸಿಗ್ ಎಂಬ ಜರ್ಮನ ಪಟ್ಟಣದಲ್ಲಿ ವೂಂಟ್ ಎಂಬ ಮನಶ್ಶಾಸ್ತ್ರಜ್ಞನು ಸ್ಥಾಪಿಸಿದನು. ಅಲ್ಲಿಂದೀಚೆಗೆ ಪ್ರಪಂಚದ ನಾನಾ ದೇಶಗಳಲ್ಲಿ ಪ್ರಾಯೋಗ ಶಾಲೆಗಳು ಸ್ಥಾಪಿತವಾಗಿ ಮನಶ್ಶಾಸ್ತ್ರಕ್ಕೆ ಸಂಬಂಧಪಟ್ಟಂತೆ ಸಾವಿರಾರು ಪ್ರಯೋಗಗಳು ನಡೆದಿವೆ.

ಒಬ್ಬ ಮನುಷ್ಯನನ್ನು ಒಂದು ಗೊತ್ತಾದ ಸನ್ನಿವೇಶದಲ್ಲಿಟ್ಟು ಅವನು ಯಾವರೀತಿ ವರ್ತಿಸುವನೆಂಬುದನ್ನು ಅವೇಕ್ಷಿಸುವುದೊಂದೇ ಅಲ್ಲದೆ ಅವನಿಗೆ ಕೆಲವು ಪ್ರಶ್ನೆಗಳನ್ನು ಹಾಕಿ ಅವನ ಅನುಭವವು ಯಾವ ರೀತಿ ಮಾರ್ಪಾಟನ್ನು ಹೊಂದುತ್ತದೆ ಎಂಬುದನ್ನು ಕಂಡುಹಿಡಿಯಬಹುದು. ಆತನು ಸ್ವೇಚ್ಛೆಯಾಗಿ ಚಿಂತನ ಮಾಡುವುದಕ್ಕೆ ಬದಲು ಈ ರೀತಿ ಪ್ರಶ್ನೆಗಳಿಂದ ನಿಶ್ಚಿತವಾದ ಮನೋವ್ಯಾಪಾರದ ಅಂಶಗಳನ್ನು ಮಾತ್ರ ಕುರಿತು ಚಿಂತನ ಮಾಡುವುದರಿಂದ ನಿಜಾಂಶವನ್ನರಿಯಲು ಸಾಧ್ಯವಾಗುವುದು. ಸನ್ನಿವೇಶವನ್ನು ಬದಲಾಯಿಸಿದರೆ ವರ್ತನೆಯಲ್ಲಿಯೂ ಅನುಭವದಲ್ಲಿಯೂ ಯಾವ ಬಗೆಯ ಬದಲಾವಣೆಯಾಯಿತೆಂಬುದನ್ನು ಪ್ರಯೋಗಮಾರ್ಗದಿಂದ ಅರಿಯಬಹುದು. ಒಂದೇ ಅಂಶವನ್ನು ಪದೇ ಪದೇ ಒಂದೇ ಸನ್ನಿವೇಶದಲ್ಲಿ ಪರೀಕ್ಷಿಸಲು ಸಾಧ್ಯವಾಗುವುದು. ಒಂದೇ ಸನ್ನಿವೇಶದಲ್ಲಿ ಬೇರೆ ಬೇರೆ ವ್ಯಕ್ತಿಗಳು ಹೇಗೆ ವರ್ತಿಸುವರು ಎಂಬುದನ್ನು ತಿಳಿಯಬಹುದು.

## ಮನಶ್ಶಾಸ್ತ್ರದ ಗುರಿ

ಲೋಕದಲ್ಲಿ ಮನುಷ್ಯರು ಮತ್ತು ಮನುಷ್ಯೇತರ ಪ್ರಾಣಿಗಳು ಹೇಗೆ ವರ್ತಿಸುವರು ಎಂಬುದನ್ನು ಕಂಡುಹಿಡಿಯುವುದು ಮನಶ್ಶಾಸ್ತ್ರದ ಕೆಲಸ. ಈ ಜ್ಞಾನವು ಮನುಷ್ಯನು ತನ್ನ ಸಾಮಾಜಿಕ ಜೀವನವನ್ನು ಸುಗಮವಾಗಿ ನಡಸಿಕೊಂಡು ಹೋಗಲು ಬಹುಮಟ್ಟಿಗೆ ಸಹಕಾರಿಯಾಗುವುದು. ನಮ್ಮ ಕಷ್ಟಸುಖಗಳು ಮತ್ತು ನಮ್ಮ ಸಮಾಜದ ಕಷ್ಟಸುಖಗಳೂ, ಅದರಲ್ಲಿಯೂ ಭೌತಿಕ ವಿಜ್ಞಾನಗಳು ಮುಂದುವರಿದಿರುವ ಈ ಕಾಲದಲ್ಲಿ ಬಾಹ್ಯ ಪ್ರಕೃತಿಯ ಜ್ಞಾನದ ಕೊರತೆಯಿಂದಲ್ಲ, ಮನುಷ್ಯ ವರ್ತನೆಯ ಜ್ಞಾನದ ಅಭಾವದಿಂದ ಉಂಟಾಗಿದೆ ಎಂದು

ಧಾರಾಳವಾಗಿ ಹೇಳಬಹುದು. ರಾಜ್ಯಶಾಸ್ತ್ರ, ಅರ್ಥಶಾಸ್ತ್ರ, ಸಮಾಜ ಶಾಸ್ತ್ರ ಮುಂತಾದುವು ಮುಂದುವರಿಯುವುದಕ್ಕೆ ಮನುಷ್ಯನ ವರ್ತನಾ ಜ್ಞಾನವು ಆವಶ್ಯಕ. ಈ ಶಾಸ್ತ್ರಗಳು ಮುಂದುವರಿಯದೆ ಹೋದರೆ ಮನುಷ್ಯನ ಜೀವನವು ಉನ್ನತಿಯನ್ನು ಹೊಂದಲಾರದು. ಈ ಗ್ರಂಥ ದಲ್ಲಿ ಮನುಷ್ಯನ ಸ್ವಭಾವ ಮತ್ತು ನಡವಳಿಕೆಗಳಿಗೆ ಅಸ್ತಿಭಾರವಾದ ಶೈಶವದಲ್ಲಿ ವರ್ತನಾಸ್ವರೂಪವೂ, ವರ್ತನೆಯ ಬೆಳವಣಿಗೆಯೂ ಯಾವ ನಿಯಮಗಳಿಂದ ಬದ್ಧವಾಗಿದೆ ಎಂಬ ವಿಷಯವನ್ನು ವಿಚಾರ ಮಾಡಲಾಗಿದೆ.

---

# ಅಧ್ಯಾಯ ೨

## ಮಕ್ಕಳ ಮನೋವಿಜ್ಞಾನದ ಸಮಸ್ಯೆಗಳೂ ಮತ್ತು ವಿಧಾನಗಳು

ಮಕ್ಕಳ ಮನೋವಿಜ್ಞಾನವು ಈಗ ಮನಶ್ಶಾಸ್ತ್ರದ ಮುಖ್ಯವಾದ ಶಾಖೆ. ಪ್ರಾಚೀನಕಾಲದಲ್ಲಿ ಮಕ್ಕಳ ಬೆಳವಣಿಗೆಯು ಮಾನವ ಜನಾಂಗದ ಬೆಳವಣಿಗೆಗೆ ಆಧಾರವೆಂದು ಅರಿತಿದ್ದರು. ಆದರೆ ಮಕ್ಕಳನ್ನು, ವಿಜ್ಞಾನ ಮಾರ್ಗದಿಂದ ಪರಿಶೀಲನ ಮಾಡುತ್ತಿರಲಿಲ್ಲ. "ಗಿಡವಾಗಿ ಬಗ್ಗದ್ದು ಮರವಾಗಿ ಬಗ್ಗೀತೆ"; "ತಂದೆಯಂತೆ ಮಗು, ಗುರುವಿನಂತೆ ಶಿಷ್ಯ"; "ಬಾಲಾನಾಂ ಬ್ರಹ್ಮಸ್ವರೂಪಂ" ಮುಂತಾದ ನಾಣ್ನುಡಿಗಳು ಶೈಶವಾವಸ್ಥೆಯು ಬಹಳ ಮುಖ್ಯವಾದುದೆಂದು ನಮ್ಮ ಪೂರ್ವಿಕರು ಅರಿತಿದ್ದರೆಂಬುದನ್ನು ತಿಳಿಯಪಡಿಸುತ್ತವೆ. ಆದರೆ ಮಕ್ಕಳ ವರ್ತನೆ, ಮಕ್ಕಳ ಮನೋವಿಕಾಸ ಮತ್ತು ಮಕ್ಕಳನ್ನು ಬೆಳಸುವಕ್ರಮ ಇಂತಹ ಸಮಸ್ಯೆಗಳಿಗೆ ಅವರು ಅಷ್ಟೊಂದು ಗಮನಕೊಟ್ಟಿರಲಿಲ್ಲ.

### ಈಚಿನ ಬೆಳವಣಿಗೆಗೆ ಕಾರಣಗಳು

ಮಕ್ಕಳ ಮನೋವಿಜ್ಞಾನವು ಈಗ್ಗೆ ಸುಮಾರು ಎಪ್ಪತ್ತೈದು ವರ್ಷಗಳಿಂದ ವೃದ್ಧಿಹೊಂದಿದೆ. ಮಕ್ಕಳ ವಿಷಯದಲ್ಲಿ ಇತ್ತೀಚಿಗೆ ವೈಜ್ಞಾನಿಕ ಶ್ರದ್ಧೆಯು ಬರಲು ಅನೇಕ ಕಾರಣಗಳಿವೆ. ಇವುಗಳಲ್ಲಿ ಮುಖ್ಯವಾದುದು ಶಿಕ್ಷಣ ಶಾಸ್ತ್ರಕ್ಕೆ ಸಂಬಂಧಪಟ್ಟದು. ಶಿಕ್ಷಣವೇತ್ತರಾದ ಪೆಸ್ಟಲಾಟ್ಸಿ, ಫ್ರೋಬೆಲ್ ಮುಂತಾದವರು ಶಿಕ್ಷಣವು ಉತ್ತಮ ರೀತಿಯಿಂದ ನಡೆಯಬೇಕಾದರೆ ಮಕ್ಕಳ ಸ್ವಭಾವವನ್ನು ಪರಿಶೀಲಿಸಿ ಅದಕ್ಕೆ ಅನುಗುಣವಾಗಿ ಶಿಕ್ಷಣ ಮಾರ್ಗಗಳನ್ನು ಅನುಸರಿಸುವುದು ಬಹಳ ಅಗತ್ಯವೆಂದು ಸಾರಿದರು. ಇದರ ಪರಿಣಾಮವಾಗಿ ಮಕ್ಕಳ ವರ್ತನೆಯನ್ನು ಜಾಗರೂಕತೆಯಿಂದ ಪರಿಶೀಲನಮಾಡಲು ಪ್ರಾರಂಭವಾಯಿತು. ಈಚಿಗೆ ಇಟಲಿ ದೇಶದ ಮಾಂಟಿಸೋರಿ ಎಂಬಾಕೆಯು ಶಾಲೆಗಳಲ್ಲಿ

ಹಿಂದುಳಿದ ಮಕ್ಕಳಿಗೆ ಯಾವ ವಿಧಾನಗಳಿಂದ ಶಿಕ್ಷಣ ಕೊಡಬೇಕೆಂಬ ಸಮಸ್ಯೆಗೆ ಗಮನಕೊಟ್ಟದ್ದರಿಂದ ಮಕ್ಕಳ ವರ್ತನೆಯನ್ನು ಇನ್ನೂ ಸೂಕ್ಷ್ಮರೀತಿಯಲ್ಲಿ ಪರೀಕ್ಷಿಸುವುದು ಆವಶ್ಯಕವಾಯಿತು. ಈ ಮೇಲೆ ಹೇಳಿದ ಶಿಕ್ಷಣಜ್ಞರ ಪ್ರಯತ್ನಗಳ ಫಲವಾಗಿ ಇಂದಿನ ಶಿಶುವಿಹಾರಗಳ ಯೋಜನೆಯು ಪ್ರಾರಂಭವಾಯಿತು.

ಸುಮಾರು ನಲ್ವತ್ತೈದು ವರ್ಷಗಳ ಹಿಂದೆ ಫ್ರೆಂಚ್ ಸರಕಾರವು ಶಾಲೆಗಳಲ್ಲಿ ಮಾನಸಿಕ ಲೋಪವಿರುವವರನ್ನು ಸಾಮಾನ್ಯ ಮಕ್ಕಳಿಂದ ಬೇರ್ಪಡಿಸಲು ಯೋಚಿಸಿತು. ಈ ಕಾರ್ಯಕ್ಕಾಗಿ ಬೀನೆ ಮತ್ತು ಸೈಮನ್ ಎಂಬ ವೈಜ್ಞಾನಿಕರನ್ನು ನೇಮಿಸಿತು. ಇವರು ಮಕ್ಕಳ ಬುದ್ಧಿಶಕ್ತಿಯನ್ನು ಅಳೆಯಲು ಪ್ರಾರಂಭಿಸಿದರು. ಈ ಕೆಲಸವು ಯಶಸ್ವಿಯಾಗಲು ಮಕ್ಕಳ ಸಾಮರ್ಥ್ಯಗಳನ್ನು ವಿಭಾಗಿಸಿ ಒಂದೊಂದು ಅಂಶಕ್ಕೂ ತಕ್ಕಂತೆ ಪರೀಕ್ಷೆಗಳನ್ನು ಮಾಡುವುದು ಅಗತ್ಯವಾಯಿತು. ಇದರಿಂದ ಮಕ್ಕಳ ವರ್ತನೆಯ ಪರಿಶೀಲನವು ಬಹಳ ಮಟ್ಟಿಗೆ ಮುಂದುವರಿಯಿತು.

ಮಕ್ಕಳ ಮನೋವಿಜ್ಞಾನವು ಬೆಳೆಯುವುದಕ್ಕೆ ಫ್ರಾಯಿಡ್ ಎಂಬ ಆಸ್ಟ್ರಿಯದ ಮನಶ್ಶಾಸ್ತ್ರದ ಪಂಡಿತರೂ ಬಹಳ ಮಟ್ಟಿಗೆ ಕಾರಣರಾದರು. ಇವರು ಮನೋವ್ಯಾಧಿಗಳಿಂದ ಪೀಡಿತರಾದವರನ್ನು ಪರೀಕ್ಷಿಸಿ ಬಾಲ್ಯಾವಸ್ಥೆಯ ಮಾನಸಿಕ ನ್ಯೂನತೆಗಳು ಈ ಜಾಡ್ಯಗಳಿಗೆ ಬಹಳ ಮಟ್ಟಿಗೆ ಕಾರಣವಾದುವುಗಳೆಂದು ಕಂಡುಹಿಡಿದರು. ಇವರ ಸ್ಫೂರ್ತಿಯಿಂದ ಮಕ್ಕಳ ವರ್ತನೆಯನ್ನು ಪರಿಶೀಲಿಸುವುದೊಂದೇ ಅಲ್ಲದೆ, ಮನೆಯಲ್ಲಿ ಮಗುವಿಗೂ ತಾಯಿತಂದೆಗಳಿಗೂ ಇರುವ ಭಾವನಾ ಸಂಬಂಧಗಳನ್ನು ಪರೀಕ್ಷಿಸಲಾಯಿತು. ಇದರ ಪರಿಣಾಮವಾಗಿ ಮನೆಗಳಲ್ಲಿಯೂ ಶಾಲೆಗಳಲ್ಲಿಯೂ ವಿಕೃತ (ಅಬ್‌ನಾರ್ಮಲ್) ವರ್ತನೆಗಳಿಂದ ನಡೆಯುತ್ತಿದ್ದ ಮಕ್ಕಳಿಗಾಗಿ ಚಿಕಿತ್ಸಾಲಯಗಳನ್ನು ಏರ್ಪಡಿಸಿದರು.

ಇವೆಲ್ಲಕ್ಕಿಂತಲೂ ಮಿಗಿಲಾಗಿ, ನಮಗೆ ವರ್ತನಾತತ್ತ್ವದ ಪೂರ್ಣ ಪರಿಚಯವಾಗಬೇಕಾದರೆ, ಕೇವಲ ವಯಸ್ಕರ ವರ್ತನ ಪರಿಶೀಲನವೊಂದೇ ಅಲ್ಲದೆ ಪ್ರಾಣಿಗಳ, ಮಕ್ಕಳ ಮತ್ತು ಹುಚ್ಚರ ವರ್ತನೆಗಳನ್ನು

ಪರಿಶೀಲನ ಮಾಡುವುದು ಅವಶ್ಯಕ. ಅಲ್ಲದೆ ಹೀಗೆ ಮಾಡುವುದರಿಂದಲೇ ವರ್ತನ ತತ್ತ್ವದ ನಿಯಮಗಳನ್ನು ನಾವು ಶಾಸ್ತ್ರರೀತಿಯಿಂದ ಕ್ರೋಢೀಕರಿಸಲು ಅನುಕೂಲವಾಗುವುದು ಎಂದು ಮನಶ್ಶಾಸ್ತ್ರಜ್ಞರಿಗೆ ತಿಳಿಯಬಂದಿತು. ಏಕೆಂದರೆ, ವಯಸ್ಕರ ವರ್ತನೆಯು ವಿದ್ಯೆ, ಅನುಭವ ಮತ್ತು ಸಂಘದ ಸಂಪ್ರದಾಯ ಇವುಗಳ ದೆಸೆಯಿಂದ ಬಹಳ ತೊಡಕಾದುದು. ವಯಸ್ಕರನ್ನು ಮಾತ್ರ ನಾವು ಪರೀಕ್ಷೆ ಮಾಡಿದರೆ ನಮಗೆ ವರ್ತನಾ ತತ್ತ್ವಗಳು ಲಭಿಸುವುದು ಕಷ್ಟ. ಮಕ್ಕಳಲ್ಲಿಯೂ ಮತ್ತು ಮನುಷ್ಯೇತರ ಪ್ರಾಣಿಗಳಲ್ಲಿಯೂ ವರ್ತನ ಸ್ವರೂಪವು ಸರಳವಾಗಿರುವುದು. ಇವುಗಳ ಮೇಲೆ ಪ್ರಯೋಗಗಳನ್ನು ನಡಸುವುದು ಸುಲಭ ಸಾಧ್ಯ. ಆದುದರಿಂದ ಇತ್ತೀಚೆಗೆ ಎಲ್ಲಾ ದೇಶಗಳಲ್ಲಿಯು ಮನೋವಿಜ್ಞಾನಕ್ಕೂ ಬಹಳ ಹೆಚ್ಚಾಗಿ ಗಮನಕೊಡುತ್ತಿರುವರು. ಈಗ ಸುಮಾರು ಇಪ್ಪತ್ತೈದು ವರ್ಷಗಳಿಂದ ಮಕ್ಕಳ ವರ್ತನಾ ಜ್ಞಾನವು ಬಹಳ ಮಟ್ಟಿಗೆ ಮುಂದುವರಿದಿದೆ. ಈಗ ಮಕ್ಕಳ ವರ್ತನೆಯನ್ನು ಪರೀಕ್ಷಿಸಲು ಅನುಸರಿಸುವ ಮಾರ್ಗಗಳಾವುವೆಂಬುದನ್ನು ನೋಡೋಣ.

### ಜ್ಞಾನ ಮತ್ತು ಜ್ಞಾನಾರ್ಜನೆಯ ಮಾರ್ಗ

ನಮ್ಮ ಜ್ಞಾನದ ಯಥಾರ್ಥತೆಗೂ ನಾವು ಜ್ಞಾನಾರ್ಜನೆಗಾಗಿ ಅನುಸರಿಸುವ ಮಾರ್ಗಗಳಿಗೂ ನಿಕಟ ಸಂಬಂಧವಿರುವುದು. ಸರಿಯಾದ ಮಾರ್ಗಗಳನ್ನು ನಾವು ಅನುಸರಿಸದೆ ಹೋದರೆ ನಮಗೆ ಪ್ರಕೃತಿ ಸ್ವರೂಪದ ಸತ್ಯವು ಲಭಿಸಲಾರದು. ನಮ್ಮ ತೀರ್ಮಾನಗಳಿಗೆ ವಿಷಯ ಸಂಗ್ರಹವೇ ತಳಹದಿ. ನಾವು ಸಂಗ್ರಹಿಸಿರುವ ವಿಷಯಗಳು ತಪ್ಪಾಗಿದ್ದರೆ ಸಿದ್ಧಾಂತವೇ ತಪ್ಪಾಗುವುದು. ನಮಗೆ ಗೊತ್ತಾಗಿರುವ ವಿಷಯಗಳು ನಾವು ಅನುಸರಿದ ಮಾರ್ಗಗಳನ್ನು ಅವಲಂಬಿಸಿರುವುವು. ಆದುದರಿಂದ ನಾವು ಸತ್ಯವನ್ನು ಅರಿಯಬೇಕಾದರೆ ಸರಿಯಾದ ವಿಜ್ಞಾನ ಮಾರ್ಗವನ್ನು ಅನುಸರಿಸುವುದು ಅತ್ಯಾವಶ್ಯಕ.

### ಮಕ್ಕಳ ಸ್ವಭಾವವನ್ನು ಕುರಿತ ಕೆಲವು ತಪ್ಪು ನಂಬಿಕೆಗಳು.

ಮಕ್ಕಳ ಸ್ವಭಾವವನ್ನು ಕುರಿತು ಪೂರ್ವದಲ್ಲಿಯೂ, ಇಂದಿಗೂ,

ಇರುವ ನಂಬಿಕೆಗಳನ್ನು ನಾವು ವಿಚಾರಿಸಿದರೆ ಮೇಲೆ ನಿರೂಪಿಸಿದ ವಿಷಯದ ಸತ್ಯಾಂಶವು ಗೊತ್ತಾಗುವುದು. ಮಕ್ಕಳು ಸ್ವಾಭಾವಿಕವಾಗಿಯೇ ತುಂಟರು ಎಂಬ ನಂಬಿಕೆಯು ಬಳಕೆಯಲ್ಲಿರುವುದು 'ಬ್ರಹ್ಮಚಾರಿ ಶತ ಮರ್ಕಟ:' ಎಂಬ ನುಡಿಯು ಕೆಲವು ಕಡೆ ಪ್ರಚಾರದಲ್ಲಿರುವುದು. ಸಾಧಾರಣವಾಗಿ ನಾವು 'ಇದೆಲ್ಲಾ ಹುಡುಗಾಟ' ಎನ್ನುತ್ತೇವೆ. ಅಂದರೆ ಸಾಮಾನ್ಯವಾಗಿ ಹುಡುಗರು ತುಂಟರು, ಜವಾಬ್ದಾರಿ ಇಲ್ಲದವರು, ಮೂರ್ಖರು ಎಂಬುದಾಗಿ ನಮ್ಮ ಭಾವನೆ. ಇಂತಹ ತಿಳವಳಿಕೆಗೆ ಮಕ್ಕಳ ಸ್ವಭಾವವನ್ನು ಗಮನವಿಟ್ಟು ಪರೀಕ್ಷಿಸದೆ ಇರುವುದೇ ಕಾರಣ.

ಇನ್ನು ಕೆಲವೆಡೆಗಳಲ್ಲಿ ಒಬ್ಬ ಹುಡುಗನು ಕೆಟ್ಟವನಾಗಿ ಪ್ರವರ್ತಿಸಿದರೆ ಅವನ ತಂದೆಯು "ನಾನೇನು ಮಾಡಲಿ, ಅವನ ಹಣೆಯ ಬರಹ, ಅವನ ಜನ್ಮಾಂತರ ಕರ್ಮಶೇಷ, ನಾನೆಷ್ಟು ಪ್ರಯತ್ನಿಸಿದರೂ ಅವನನ್ನು ಒಳ್ಳೆಯ ಮಾರ್ಗಕ್ಕೆ ತರಲು ಸಾಧ್ಯವಿಲ್ಲ" ಎಂದು ಮುಂತಾಗಿ ಹೇಳುವುದನ್ನು ಕೇಳಿದ್ದೇವೆ. ಮಕ್ಕಳ ಸ್ವಭಾವವು ಅವರ ಪೂರ್ವಜನ್ಮದ ಫಲವೆಂದು ನಂಬುವುದು ಕರ್ಮ ಸಿದ್ಧಾಂತದಮೇಲೆ ನಿಂತಿದೆ. ಇದು ಮಕ್ಕಳ ಸ್ವಭಾವವನ್ನು ಪರೀಕ್ಷಿಸಿ ಮಾಡಿದ ಸಿದ್ಧಾಂತವಲ್ಲ.

ಮತ್ತೆ ಕೆಲವರು "ಮಕ್ಕಳು ಸಹಜವಾಗಿಯೇ ಒಳ್ಳೆಯವರು, ಪರಿಶುದ್ಧರು; ಬೆಳೆಯುತ್ತ ಬೆಳೆಯುತ್ತ ಹಿರಿಯರ ಸಹವಾಸದಿಂದ ಕೆಡುತ್ತಾರೆ" ಎಂದು ಹೇಳುವರು. ಮಕ್ಕಳನ್ನು ದೇವರೆಂದೇ ಭಾವಿಸುವವರೂ ಇದ್ದಾರೆ. ಇಂಥ ನಂಬಿಕೆಗಳಿಗೆಲ್ಲಾ ಹಿರಿಯರ ನಡವಳಿಕೆಗಳ ಮೇಲಿನ ಜುಗುಪ್ಸೆಯೇ ಆಧಾರ.

ಇನ್ನು ಕೆಲವರು ಮಕ್ಕಳ ಮನಸ್ಸನ್ನು ಏನೂ ಇಲ್ಲದ ಬರಿಯ ಕಪ್ಪುಹಲಗೆಗೆ ಹೋಲಿಸುವರು; ಲೇಖಶೂನ್ಯವಾದುದೆಂದು ಹೇಳುವರು. ಈ ಹೇಳಿಕೆಯನ್ನು ಸುಪ್ರಸಿದ್ಧ ಆಂಗ್ಲತತ್ತ್ವಜ್ಞರಾದ ಲಾಕ್ ಎಂಬವರು ಮೊದಲು ಸೂಚಿಸಿದರು. ಅವರ ಸಿದ್ಧಾಂತದ ಪ್ರಕಾರ ಈಗ ಹುಟ್ಟಿದ ಮಗುವಿಗೆ ಯಾವ ಸ್ವಭಾವವೂ ಇಲ್ಲ. ಬೆಳೆದಂತೆಲ್ಲಾ ವಿಷಯಗಳನ್ನು ತಿಳಿದು ಮಾನಸಿಕ ವೃದ್ಧಿಯನ್ನು ಪಡೆಯುವುದು. ಈ ಸಿದ್ಧಾಂತವನ್ನು

ಸೂಚಿಸುತ್ತ, ಅಮೇರಿಕಾ ದೇಶದ ಮನಶಾಸ್ತ್ರಜ್ಞ ವಾಟ್ಸ್ನ್ ಎಂಬವರು 'ಹುಟ್ಟಿದ ಮಗುವನ್ನು ನನ್ನ ಕೈಗೆ ಕೊಡಿ; ಅವನನ್ನು ವೈದ್ಯನಾಗಿ, ವಕೀಲನಾಗಿ, ಕಲಾವಿದನಾಗಿ, ವ್ಯಾಪಾರಿಯಾಗಿ, ಕಡೆಗೆ ಭಿಕ್ಷುಕನನ್ನಾಗಿ ಅಥವಾ ಕಳ್ಳನನ್ನಾಗಿ, ಹೇಗೆ ಬೇಕಾದರೂ ತರಬೇತು ಮಾಡಿ ಬೆಳಸುವೆನು. ಆತನ ವಂಶ, ಸಾಮರ್ಥ್ಯ, ಸ್ವಭಾವಗಳು ಹೇಗಿದ್ದರೂ ಸರಿಯೆ' ಎಂದು ಹೇಳಿರುವರು. ಈ ನಂಬಿಕೆ ಸಹ ಸಾಮರ್ಥ್ಯ, ಸ್ವಭಾವಗಳು ಹುಟ್ಟು ಗುಣಗಳಲ್ಲ; ಬೆಳೆ ಬೆಳೆಯುತ್ತ ಆವರಣ ಪ್ರಭಾವದಿಂದ ಉಂಟಾಗುವುವು ಎಂಬುದರ ಮೇಲೆ ಆಧಾರವಾಗಿರುವುದು. ಮುಂದೆ ಹೇಳಿರುವಂತೆ, ಮಕ್ಕಳೆಲ್ಲರೂ ಸಮನಾದ ಸಾಮರ್ಥ್ಯವಿರುವವರೆಂದಾಗಲಿ, ಸಾಮರ್ಥ್ಯವೇ ಇಲ್ಲದವರೆಂದಾಗಲೀ ಹೇಳುವುದು ಭ್ರಮಾತ್ಮಕವೇ ಹೊರತು ಸತ್ಯವಲ್ಲ ಎಂಬುದು ವ್ಯಕ್ತವಾಗುವುದು.

ಮೇಲೆ ಹೇಳಿದ ಈ ನಾಲ್ಕಾರು ವಾದಗಳೂ ನಂಬಿಕೆಗಳೂ ಮಕ್ಕಳ ವರ್ತನೆಯನ್ನು ತಕ್ಕ ಮಾರ್ಗಗಳನ್ನು ಅನುಸರಿಸಿ ಪರೀಕ್ಷೆ ಮಾಡದೆ ಇರುವುದರಿಂದ ಹುಟ್ಟಿವೆ. ಮತ್ತೊಂದು ಕಾರಣ. ಈ ಮೇಲಿನ ವಾದಗಳನ್ನು ಮುಂದಿಡುವ ವ್ಯಕ್ತಿಗಳ ಮನಸ್ಸಿನಲ್ಲಿ ಪೂರ್ವ ನಿಶ್ಚಯವಿದ್ದು ಮಕ್ಕಳ ವರ್ತನೆಯನ್ನು ಸರಿಯಾಗಿ ಪರೀಕ್ಷಿಸದೆ, ತಮ್ಮ ಅಭಿಪ್ರಾಯಗಳನ್ನೇ ವ್ಯಕ್ತಪಡಿಸುತ್ತಿರುವರು. ಮಕ್ಕಳ ಮನಸ್ಸಿನ ಸ್ವರೂಪವನ್ನು ನಿರ್ದಿಷ್ಟವಾಗಿ ತಿಳಿಯಬೇಕಾದರೆ ಇಂತಹ ಪೂರ್ವಾಗ್ರಹಗಳನ್ನು ಬದಿಗಿಟ್ಟು ನಿಷ್ಪಕ್ಷಪಾತವಾಗಿ, ಮಕ್ಕಳ ವರ್ತನೆಯನ್ನು ಪ್ರತ್ಯಕ್ಷವಾಗಿ ಗಮನಿಸುವುದು ಆವಶ್ಯಕ. ವೈಜ್ಞಾನಿಕನು ಪ್ರಕೃತಿಯ ಬೇರೆ ಬೇರೆ ಅಂಶಗಳನ್ನು ಯಾವ ನಿಷ್ಪಕ್ಷವಾದ ದೃಷ್ಟಿಯಿಂದ ಪರೀಕ್ಷಿಸುವನೋ ಅದೇ ರೀತಿಯಲ್ಲಿ ಮಕ್ಕಳ ವರ್ತನೆಯನ್ನು ಸಹ ಪರೀಕ್ಷಿಸಬೇಕು. ಹೀಗೆ ಮಾಡದೆ ಹೋದರೆ ನಮಗೆ ಸತ್ಯವು ಸಿಕ್ಕುವುದಿಲ್ಲ.

## ವಿಜ್ಞಾನ ಮಾರ್ಗದ ಕೆಲವು ಲಕ್ಷಣಗಳು.

ಪ್ರಕೃತಿಯ ಯಾವ ಅಂಶವನ್ನು ಕುರಿತೇ ಆಗಲಿ ನಾವು

ಪರ್ಯಾಲೋಚಿಸುವಾಗ ಮೊದಲು ಯಥಾರ್ಥವನ್ನು ಅರಿಯಬೇಕು. ನಡೆಯುವ ಘಟನೆಗಳನ್ನು ಕಣ್ಣಿಟ್ಟು ನಿಷ್ಪಕ್ಷಪಾತವಾಗಿ ಗಮನಿಸಬೇಕು. ಇದ್ದುದನ್ನು ಇದ್ದಹಾಗೆಯೇ ಗುರುತು ಹಾಕಿಕೊಳ್ಳಬೇಕು. ಒಂದೊಂದು ಘಟನೆಯೂ ಎಷ್ಟು ಹೊತ್ತು ನಡೆಯುವುದು? ಯಾವ ಸಮಯದಲ್ಲಿ ನಡೆಯುವುದು? ಹೇಗೆ ನಡೆಯುವುದು ಮುಂತಾದ ವಿಷಯಗಳನ್ನು ನಿಶ್ಚಿತವಾಗಿ ಸ್ಪಷ್ಟವಾಗಿ ಕಂಡುಹಿಡಿಯಬೇಕು. ಕ್ರಮಬದ್ಧವಾಗಿ ಆ ಅಂಶದ ವಿಚಾರವಾಗಿ ಆದಷ್ಟು ಯಥಾರ್ಥ ವಿಷಯಗಳನ್ನು ಸಂಗ್ರಹಿಸಬೇಕು.

ಯಥಾರ್ಥ ವಿಷಯಗಳನ್ನು ನಾವು ಯಾವ ಸಂದರ್ಭದಲ್ಲಿ, ಯಾವ ವಿಧಾನದಿಂದ ಗುರುತು ಹಚ್ಚಿಕೊಂಡಿರುವೆವೆಂಬುದನ್ನು ನಾವು ಎಲ್ಲರಿಗೂ ಸ್ಪಷ್ಟವಾಗಿ ತಿಳಿಸಬೇಕು. ಏಕೆಂದರೆ ಸಂಗ್ರಹ ಮಾಡಿರುವ ವಿಷಯಗಳು ಸತ್ಯವೋ ಅಲ್ಲವೋ ಎಂಬುದನ್ನು ಲೋಕದಲ್ಲಿ ಮತ್ತೆ ಯಾವ ವೈಜ್ಞಾನಿಕನಾದರೂ ನಿಶ್ಚಯಿಸಲು ಸಾಧ್ಯವಾಗಿರಬೇಕು. ಆದುದರಿಂದ ವಿಜ್ಞಾನದಲ್ಲಿ ಗುಟ್ಟೆಂಬುದೇ ಇಲ್ಲ. ಯಾವ ವೈಜ್ಞಾನಿಕನಾದರೂ ಪ್ರಕೃತಿಯ ಒಂದು ಅಂಶದ ಸತ್ಯವನ್ನು ಕಂಡೊಡನೆಯೇ ವಿಜ್ಞಾನ ಪತ್ರಿಕೆಗಳಲ್ಲಿ ಮತ್ತು ವಿಜ್ಞಾನ ಸಮ್ಮೇಳನಗಳಲ್ಲಿ ಪ್ರಕಟಿಸುತ್ತಾನೆ. ಹಾಗೆ ಮಾಡಿದಹೊರತು ಆ ಜ್ಞಾನಕ್ಕೆ ಸ್ಥಾನವೇ ಇಲ್ಲ. ಬೇರೆ ವೈಜ್ಞಾನಿಕರು ಆ ವಿಷಯಗಳನ್ನು ಕುರಿತು ಮತ್ತೆ ಪರೀಕ್ಷೆಮಾಡಿ ಅದರ ಸತ್ಯಾಂಶವನ್ನು ನಿಶ್ಚಯಿಸದೆ ಹೋದರೆ ಆ ಜ್ಞಾನಕ್ಕೆ ಬೆಲೆಯೇ ಇಲ್ಲ.

ತತ್ತ್ವದ ಸ್ಥಾಪನೆಯೇ ವಿಜ್ಞಾನದ ಗುರಿ. ಈ ತತ್ತ್ವವು ಪ್ರಕೃತಿಯ ಸಾಮಾನ್ಯ ಲಕ್ಷಣಗಳ ಮೇಲೆ ನಿಂತಿದೆ. ಪ್ರಕೃತಿ ನಿಯಮಬದ್ಧವಾದುದು. ಈ ನಿಯಮಗಳನ್ನು ತಿಳಿಯಲು ವಿಜ್ಞಾನವು ಪ್ರಯತ್ನಿಸುವುದು. ಆದರೆ ಈ ನಿಯಮಗಳನ್ನು ಕಂಡುಹಿಡಿಯಲು ಒಂದೇ ಮಾರ್ಗ—ಪ್ರಕೃತಿಯ ಯಥಾರ್ಥ ಜ್ಞಾನ. ಯಥಾರ್ಥ ವಿಷಯಗಳ ಸಂಗ್ರಹವಾದಮೇಲೆ ಅವುಗಳ ಸಾಮಾನ್ಯ ಲಕ್ಷಣಗಳನ್ನು ಕುರಿತು ಯೋಚನೆ ಮಾಡುವುದು ವಿಜ್ಞಾನ ಮಾರ್ಗದ ವೈಶಿಷ್ಟ್ಯ.

ವಿಜ್ಞಾನಿಯು ಕಂಡುಹಿಡಿದಿರುವ ಸಾಮಾನ್ಯ ಲಕ್ಷಣಗಳ ಸೂತ್ರಗಳು ಅಲ್ಲಿಯವರೆಗೆ ಆತನು ಸಂಗ್ರಹಿಸಿರುವ ಯಥಾರ್ಥ ವಿಷಯಗಳಮೇಲೆ ಆಧಾರವಾಗಿರುವುವು. ಆದರೆ ಯಥಾರ್ಥ ವಿಷಯಗಳ ಜ್ಞಾನವು ಹೆಚ್ಚಿದಂತೆಲ್ಲ ಆ ಸೂತ್ರಗಳು ಬದಲಾವಣೆ ಹೊಂದುವುವು. ಆದುದರಿಂದ ವೈಜ್ಞಾನಿಕನು ತನ್ನ ಸೂತ್ರಗಳಿಗೆ ಶಾಶ್ವತ ಪದವಿಯನ್ನು ಎಂದಿಗೂ ಕೊಡುವುದಿಲ್ಲ. ವಿಜ್ಞಾನದ ಎಲ್ಲಾ ಸೂತ್ರಗಳೂ ತಾತ್ಕಾಲಿಕವೆಂದೇ ವೈಜ್ಞಾನಿಕರು ಭಾವಿಸುವರು. ಈ ಭಾವನೆಯೇ ವಿಜ್ಞಾನದ ಅಭಿವೃದ್ಧಿಗೆ ಮುಖ್ಯಕಾರಣ.

ಮಕ್ಕಳ ವರ್ತನೆಯ ತತ್ತ್ವಗಳನ್ನು ಈ ಮಾರ್ಗದಿಂದ ಸ್ಥಾಪಿಸಲು ವೈಜ್ಞಾನಿಕರು ಈಗ ಹೊರಟಿರುವರು. ಅದರಿಂದಲೇ ಈಗ ಸುಮಾರು ೩೦–೪೦ ವರ್ಷಗಳಿಂದ ಮಕ್ಕಳ ಮನಸ್ಸಿನ ರಚನಾಕ್ರಮದ ಜ್ಞಾನವು ಹೆಚ್ಚು ಹೆಚ್ಚಾಗಿ ನಮಗೆ ದೊರೆಯುತ್ತಿದೆ. ನಮಗೆ ಹೀಗೆ ದೊರೆತಿರುವ ಜ್ಞಾನವನ್ನು ವಿವರಿಸುವುದಕ್ಕೆ ಮೊದಲು ಶಿಶು ಮನೋವೈಜ್ಞಾನಿಕನು ಜ್ಞಾನಾರ್ಜನೆಯನ್ನು ಮಾಡಲು ಅನುಸರಿಸುವ ಮಾರ್ಗಗಳನ್ನು ಪರಿಶೀಲಿಸೋಣ.

**ಪ್ರಾಸಂಗಿಕ ಅವೇಕ್ಷಣ (ಇನ್‌ಸಿಡೆಂಟಲ್ ಅಬ್ಸರ್ವೇಷನ್) :—**

ಮಕ್ಕಳ ಮನಸ್ಸನ್ನು ಕುರಿತು ಬಳಕೆಯಲ್ಲಿರುವ ಅಭಿಪ್ರಾಯಗಳಿಗೆ ಪ್ರಾಸಂಗಿಕ ಅವೇಕ್ಷಣವೇ ತಳಹದಿ. ಆಕಸ್ಮಾತ್ತಾಗಿ ಮಕ್ಕಳ ನಡವಳಿಕೆಯನ್ನು ನೋಡಿ ಆವರ್ತನವೇ ಸ್ಥಿರವಾದುದೆಂದು ಅಭಿಪ್ರಾಯಪಟ್ಟುಕೊಳ್ಳುವುದು ಸಾಧಾರಣವಾಗಿ ಕಂಡುಬರುತ್ತದೆ. ಇದರಿಂದಲೇ ನಮ್ಮ ಸಾಮಾನ್ಯ ಅಭಿಪ್ರಾಯಗಳು ತಪ್ಪುಗಳಿಂದ ಒಳಗೂಡಿರುತ್ತವೆ. ಈ ವಿಧಾನದಲ್ಲಿ ಮಕ್ಕಳ ವರ್ತನೆಯ ಮುಖ್ಯಾಂಶಗಳು ನಮಗೆ ಲಭಿಸುವುದಿಲ್ಲ. ಇದಲ್ಲದೆ ಮಕ್ಕಳ ವರ್ತನೆಯಲ್ಲಿ ಯಾವುದು ಅಸಾಧಾರಣವೋ ಯಾವುದು ವಿಚಿತ್ರವೋ ಅದೇ ನಮ್ಮ ಗಮನಕ್ಕೆ ಬಂದು ನಮ್ಮಲ್ಲಿ ತಪ್ಪು ಅಭಿಪ್ರಾಯ ಉಂಟುಮಾಡುತ್ತದೆ. ಸಾಧಾರಣವಾಗಿ ನಾವು ಕಂಡದ್ದನ್ನು ಕಂಡಹಾಗೆ ಹೇಳುವೆವು ಎಂದು ಭಾವಿಸಿಕೊಳ್ಳುತ್ತೇವೆ. ಆದರೆ ಹೀಗೆ ಕಂಡದ್ದನ್ನು ಕಂಡಹಾಗೆ ಹೇಳುವುದು ಬಹಳ ಕಷ್ಟವಾದ ಕೆಲಸ.

ಯಾವ ಸನ್ನಿವೇಶದಲ್ಲಿ ಆ ವರ್ತನೆಯನ್ನು ಕಂಡೆವು, ನಾವು ಕಂಡ ವರ್ತನೆಯ ಸ್ವರೂಪವೇನು ? ಎಂಬುದನ್ನು ತಿಳಿಸಬೇಕಾದರೆ ನಾವು ಬಹಳ ಜಾಗರೂಕತೆಯಿಂದ ಅವೇಕ್ಷಣ ಮಾಡಬೇಕಾದುದು ಅವಶ್ಯಕ. ಈ ಪ್ರಾಸಂಗಿಕ ಅವೇಕ್ಷಣ ಮಾರ್ಗವು ನಮಗೆ ಸತ್ಯಾಂಶಗಳನ್ನು ದೊರಕಿಸಿಕೊಡದೆ ಹೋದರೂ ಮಕ್ಕಳ ವರ್ತನೆಯನ್ನು ಗಮನವಿಟ್ಟು ಅವೇಕ್ಷಿಸುವುದು ಅತ್ಯಾವಶ್ಯಕವೆಂದು ತೋರಿಸಿಕೊಟ್ಟಿತು.

೨ ಜೀವನ ಚರಿತ್ರೆಯ ವಿಧಾನ (ಬಯೊಗ್ರಾಫಿಕಲ್ ಮೆತಡ್)

ಮೊದಮೊದಲು ತಂದೆತಾಯಿಗಳು ತಮ್ಮ ಮಕ್ಕಳ ಜೀವನ ಚರಿತ್ರೆಯನ್ನು ಬರೆದಿರುವುದರ ಆಧಾರದ ಮೇಲೆ ಮಕ್ಕಳ ಮನೋವಿಜ್ಞಾನವು ಬೆಳೆದಿತ್ತು. ಆದರೆ ಆ ಹಳೆಯ ಕಾಲದಲ್ಲಿ ಬರೆದ ಜೀವನ ಚರಿತ್ರೆಗಳಲ್ಲಿ ಬಹಳ ತಪ್ಪುಗಳಿದ್ದುವು. ಒಂದು ಸಮಯದಲ್ಲಿ ಮಗುವು ಒಂದು ವಿಧವಾಗಿ ವರ್ತಿಸಿದರೆ ಅದಕ್ಕೆ ಪ್ರಾಮುಖ್ಯತೆಯನ್ನು ಕೊಡುವುದು ಮೊದಲನೆಯ ತಪ್ಪು. ಸನ್ನಿವೇಶವು ಯಾವುದೆಂದು ನಿಶ್ಚಿತವಾಗಿ ತಿಳಿಯದೆ ನಡೆದ ವರ್ತನೆಯನ್ನು ಮಾತ್ರ ಜಾಗರೂಕತೆಯಿಂದ ಗುರುತಿಸುವುದು ಎರಡನೆಯ ದೋಷ. ವರ್ತನೆ ನಡೆದ ಕೂಡಲೆ ಅದರ ಲಕ್ಷಣವನ್ನು ಗುರುತು ಮಾಡದೆ ಎಷ್ಟೋ ಕಾಲದ ನಂತರ ಅದನ್ನು ನೆನಪಿನಿಂದ ಬರೆಯುವುದು ಇನ್ನೊಂದು ತಪ್ಪು. ತಂದೆ ತಾಯಿಗಳು ತಮ್ಮ ಮಗುವಿನ ಮೇಲಿನ ಮಮತೆಯಿಂದ ಅದರ ಸ್ಫೂರ್ತಿಯು ಪ್ರಚಾರವಾಗುವಂತೆ ಕೆಲವು ಘಟನೆಗಳನ್ನು ಮಾತ್ರ ಆರಿಸಿ ಎತ್ತಿ ಹಿಡಿಯುವರು. ದೊಡ್ಡ ಕವಿಗಳೂ ತಮ್ಮ ಬಾಲ್ಯದಲ್ಲಿ ಸಂಭವಿಸಿದ ಘಟನೆಗಳೂ ಉಂಟಾದ ಅನುಭವಗಳೂ ಮುಂತಾದವುಗಳ ಆಧಾರದ ಮೇಲೆ ಕತೆಗಳನ್ನೂ, ಗ್ರಂಥಗಳನ್ನೂ, ಕವಿತೆಗಳನ್ನೂ ರಚಿಸುವರು. ಇಂತಹ ಪುಸ್ತಕಗಳಲ್ಲಿ ಕೆಲವು ಸಮಯಗಳಲ್ಲಿ ಮಕ್ಕಳ ಮನಸ್ಸನ್ನು ಕುರಿತು ಸತ್ಯಾಂಶಗಳನ್ನು ಸೂಚಿಸಿದರೂ ಅನೇಕವೇಳೆ ದೋಷಗಳಿಂದಲೂ ಕೂಡಿರುವುದು. ಹೇಗೆಂದರೆ ಕವಿಯು ಎಷ್ಟೋ ವರ್ಷಗಳ ಅನಂತರ ಆ ಘಟನೆಗಳನ್ನು ತನ್ನ ಸ್ಮರಣೆಗೆ ತಂದುಕೊಂಡು ಬರೆದಿರುವುದರಿಂದ ಅದರಲ್ಲಿ ಕಲ್ಪನೆ ಸೇರುವುದು ಸಹಜ.

ಇತ್ತೀಚಿಗೆ ಈ ಜೀವನ ಚರಿತ್ರೆಯ ವಿಧಾನವು ಕ್ರಮಬದ್ಧವಾಗಿ ಆಚರಣೆಗೆ ತರಲ್ಪಟ್ಟಿದೆ. ೧೮೮೨ ನೆಯ ಇಸವಿಯಲ್ಲಿ ಜರ್ಮನ್ ವೈಜ್ಞಾನಿಕನಾದ ಪ್ರೇಯರ್ ಎಂಬಾತನು 'ಮಕ್ಕಳ ಮನಸ್ಸು' ಎಂಬ ಪುಸ್ತಕದಲ್ಲಿ ಹುಟ್ಟಿದ ಸಮಯದಿಂದಲೂ ಮೂರು ವರ್ಷಗಳ ವಯಸ್ಸಿನವರೆಗೂ ತನ್ನ ಮಗನ ಜೀವನ ಚರಿತ್ರೆಯನ್ನು ಕ್ರಮಬದ್ಧವಾಗಿ ಬರೆದನು. ಆ ಪುಸ್ತಕದಲ್ಲಿ ಮಗು ಯಾವ ಯಾವ ಸಮಯದಲ್ಲಿ ಯಾವ ಸನ್ನಿವೇಶದಲ್ಲಿ ಎಂತಹ ವರ್ತನೆಯನ್ನು ತೋರಿಸಿತು ಎಂಬುದನ್ನು ನಿರೂಪಿಸಿರುವನು. ವರ್ತನೆಯು ನಡೆದು ಕೂಡಲೆ ಜಾಗರೂಕತೆಯಿಂದ ತನ್ನ ಪುಸ್ತಕದಲ್ಲಿ ಸಂಪೂರ್ಣವಾದ ವಿವರಣೆಗಳೊಡನೆ ಬರೆದಿಟ್ಟು ಪುಸ್ತಕವನ್ನು ರಚಿಸಿದನು. ಮಗುವು ಹುಟ್ಟಿದಾಗ ಏನೇನು ಪರಾವರ್ತನಕ್ರಿಯೆಗಳನ್ನು (ರಿಫ್ಲೆಕ್ಸ್) ವ್ಯಕ್ತಪಡಿಸಿತೋ ಅವುಗಳನ್ನೆಲ್ಲಾ ಎಚ್ಚರಿಕೆಯಿಂದ ಗುರುತುಮಾಡಿದನು. ಪ್ರೇಯರ ನಂತರ ಈ ಅರವತ್ತು ವರುಷಗಳಲ್ಲಿ ಕ್ರಮಬದ್ಧವಾದ ಎಷ್ಟೋ ಜೀವನ ಚರಿತ್ರೆಗಳು ಮಕ್ಕಳ ಬೆಳವಣಿಗೆಯ ಕ್ರಮವನ್ನು ಕುರಿತು ಬರೆಯಲ್ಪಟ್ಟಿವೆ. ಆದರೆ ಈ ವಿಧಾನವೂ ದೋಷರಹಿತವಾದುದಲ್ಲ. ಗ್ರಂಥಕರ್ತರು ಒಂದು ಮಗುವಿನ ವರ್ತನೆಯನ್ನು ಮಾತ್ರ ಪರೀಕ್ಷಿಸಿ ಬರೆದಿಡುವರು. ಆದುದರಿಂದ ಈ ಆಧಾರದ ಮೇಲೆ ಮಕ್ಕಳ ಸಾಮಾನ್ಯ ಲಕ್ಷಣಗಳನ್ನು ಕುರಿತು ನಿಯಮಗಳನ್ನು ಕಂಡುಹಿಡಿಯುವುದು ಕಷ್ಟವೇಸರಿ. ಅದಲ್ಲದೆ ಸನ್ನಿವೇಶದ ಮೇಲೆ ಹತೋಟಿಯೂ ಇರುವುದಿಲ್ಲ. ಒಂದು ಮಗುವು ಯಾವ ರೀತಿ ವರ್ತಿಸಿದರೆ ಆ ವರ್ತನೆಯನ್ನು ಪೂರ್ಣವಾಗಿ ಗುರುತು ಹಚ್ಚುವನೇ ಹೊರತು, ಸನ್ನಿವೇಶವನ್ನು ಬದಲಾಯಿಸಿದರೆ ವರ್ತನೆಯು ಹೇಗೆ ಬದಲಾಯಿಸುವುದು ಎಂಬುದನ್ನೂ, ಒಂದೇ ಸನ್ನಿವೇಶವದಲ್ಲಿ ಬೇರೆ ಬೇರೆ ಮಕ್ಕಳು ತೋರಿಸುವ ವೈಶಿಷ್ಟ್ಯವನ್ನೂ ಕಂಡುಹಿಡಿಯಲು ಸಾಧ್ಯವಿಲ್ಲ. ಆದರೂ ಈ ಮಾರ್ಗವು ಮಕ್ಕಳ ಮನಸ್ಸಿನ ಬೆಳವಣಿಗೆಯಲ್ಲಿ ಮುಖ್ಯವಾದ ಸಮಸ್ಯೆಗಳನ್ನು ನಮಗೆ ಸೂಚಿಸುವುದು.

### ೩ ಪ್ರಶ್ನಾವಳಿಯ ವಿಧಾನ

ಶಿಶು ಮನೋವಿಜ್ಞಾನದಲ್ಲಿ ಮೊದಮೊದಲು ಪ್ರಶ್ನಾವಳಿಯ

ವಿಧಾನವನ್ನು ಉಪಯೋಗಿಸುತ್ತಿದ್ದರು. ಈ ವಿಧಾನದ ಪ್ರಕಾರ ಮಕ್ಕಳ ವರ್ತನೆಯ ಕೆಲವು ಅಂಶಗಳನ್ನು ಕುರಿತು ಒಂದು ಪ್ರಶ್ನೆ ಪಟ್ಟಿಯನ್ನು ತಯಾರಿಸಿ ಈ ಪಟ್ಟಿಯನ್ನು ಮಗುವಿನ ತಂದೆ ತಾಯಿಗಳಿಗೆ ಅಥವಾ ಉಪಾಧ್ಯಾಯರಿಗೆ ಕಳುಹಿಸಿ ಆ ಪ್ರಶ್ನೆಗಳಿಗೆಲ್ಲಾ ಉತ್ತರವನ್ನು ಬರೆದು ಕೊಡಬೇಕೆಂದು ಕೇಳಲಾಗುವುದು. ಅವರೆಲ್ಲರೂ ಕೊಟ್ಟ ಉತ್ತರಗಳ ಆಧಾರದ ಮೇಲೆ ಮಕ್ಕಳ ವರ್ತನೆಯ ಸ್ವರೂಪವು ಇಂಥದೆಂದು ಕಂಡುಹಿಡಿಯುವರು. ಆದರೆ ಈ ಮಾರ್ಗವು ತಂದೆ ತಾಯಿಗಳ ಅಥವಾ ಉಪಾಧ್ಯಾಯರ ಸ್ಮರಣ ಶಕ್ತಿಯನ್ನು ಅವಲಂಬಿಸುತ್ತದೆ. ಆದುದರಿಂದ ಈ ಮಾರ್ಗದಿಂದ ದೊರೆತ ವಿಷಯ ಸಂಗ್ರಹವು ನಂಬಲರ್ಹವಲ್ಲ. ಇತ್ತೀಚೆಗೆ ಈ ವಿಧಾನವನ್ನು ಶಾಸ್ತ್ರಜ್ಞರು ಬಹಳ ಕಡಿಮೆಯಾಗಿ ಉಪಯೋಗಿಸುವರು.

### ೪ ಪರಿಸ್ಥಿತಿ ವೀಕ್ಷಣ (ಕೇಸ್ ಸ್ಟಡೀಸ್)

ದುರ್ಮಾರ್ಗ ಪ್ರವರ್ತನೆಯ ಪರಿಶೀಲನದಿಂದ ಮಕ್ಕಳ ಮನೋವಿಕಾಸವನ್ನು ಕುರಿತು ನಮಗೆ ಅನೇಕ ವಿಷಯಗಳು ಗೊತ್ತಾಗಿವೆ. ಅಮೆರಿಕ ಮತ್ತು ಯೂರೋಪು ಖಂಡಗಳ ದೊಡ್ಡ ದೊಡ್ಡ ಪಟ್ಟಣಗಳಲ್ಲಿ ವರ್ತನ ಚಿಕಿತ್ಸಾಲಯ (ಚೈಲ್ಡ್ ಗೈಡೆನ್ಸ್ ಕ್ಲಿನಿಕ್) ಗಳಿರುವುವು. ಇಲ್ಲಿ ಮಕ್ಕಳ ನಡತೆಯನ್ನು ತಿದ್ದುವರು. ಮನೆಯಲ್ಲಿಯೂ ಶಾಲೆಯಲ್ಲಿಯೂ ಮತ್ತು ಹೊರಗಡೆ ತುಂಟತನ, ಪುಂಡುತನ ಮುಂತಾದ ದುರ್ಮಾರ್ಗಗಳಿಂದ ವರ್ತಿಸುವ ಮಕ್ಕಳನ್ನು ಇಲ್ಲಿ ತಿದ್ದುವರು. ಹೀಗೆ ತಿದ್ದುವುದಕ್ಕೆ ಮೊದಲು ಆ ಮಗುವಿನ ವರ್ತನ ವಿಷಯಗಳನ್ನೂ, ಅದು ಬೆಳೆಯುತ್ತಿರುವ ಆವರಣದ ವಿಶೇಷತೆಗಳನ್ನೂ ಬಹಳ ಗಮನವಿಟ್ಟು ಗುರುತಿಸಿಕೊಳ್ಳುವರು. ಈ ರೀತಿಯ ವರದಿಗಳಿಂದ ಮಕ್ಕಳ ವರ್ತನೆಯ ಲಕ್ಷಣಗಳ ವಿವಿಧತೆಗಳು ಗೊತ್ತಾಗುವುವು. ಆದರೆ ಸಾಮಾನ್ಯ ಲಕ್ಷಣಗಳು ಈ ಪರಿಸ್ಥಿತಿಯ ವೀಕ್ಷಣದಿಂದ ಸಿಕ್ಕುವುದು ಬಹಳ ಕಷ್ಟ.

### ೫ ಲಕ್ಷ್ಯಾತ್ಮಕ ಪರಿಶೀಲನ (ಡೈರೆಕ್ಟೆಡ್ ಅಬ್ಸರ್ವೇಷನ್)

ಈಚೀಚೆಗೆ ಮಕ್ಕಳ ವರ್ತನೆಯ ಕೆಲವು ಗೊತ್ತಾದ ಅಂಶ

ಗಳನ್ನು ಮಾತ್ರ ಜಾಗರೂಕತೆಯಿಂದ ಪರಿಶೀಲಿಸುವ ವಿಧಾನವನ್ನು ಹೆಚ್ಚಾಗಿ ಅನುಸರಿಸುತ್ತಿರುವರು. ಕೆಲವು ನಿಶ್ಚಿತವಾದ ಸನ್ನಿವೇಶಗಳಲ್ಲಿ ಬೇರೆ ಬೇರೆ ವಯಸ್ಸಿನ ಮಕ್ಕಳೂ, ಬೇರೆ ಬೇರೆ ಆವರಣಗಳಲ್ಲಿ ಬೆಳೆದಿರುವ ಮಕ್ಕಳೂ ಹೇಗೆ ವರ್ತಿಸುವರೆಂಬುದನ್ನು ಗುರುತು ಹಚ್ಚಲಾಗುವುದು. ಒಂದು ಪಟ್ಟಿಯನ್ನು ತಯಾರಿಸಿ ಅದರಲ್ಲಿ ಸನ್ನಿವೇಶಗಳ ಮತ್ತು ವರ್ತನೆಯ ಲಕ್ಷಣಗಳನ್ನು ಗಮನದಿಂದ ಪರಿಶೀಲಿಸಿ ಗುರುತು ಮಾಡಲು ಪ್ರತ್ಯೇಕ ಸ್ಥಳವನ್ನು ಬಿಟ್ಟಿರುವರು. ಮನೆಯಲ್ಲಿಯೋ ಅಥವಾ ಅನಾಥಾಲಯಗಳಲ್ಲಿಯೋ ಇಲ್ಲವೆ ಶಾಲೆಗಳಲ್ಲಿಯೋ ಎಲ್ಲೆಲ್ಲಿ ಆ ವಯಸ್ಸಿನ ಮಕ್ಕಳಿರುವರೋ ಅಲ್ಲಿಗೆ ಹೋಗಿ ಮಕ್ಕಳ ವರ್ತನೆಯ ಲಕ್ಷಣಗಳನ್ನು ಪರಿಶೀಲಿಸಿ ಆ ಪಟ್ಟಿಯಲ್ಲಿ ತಕ್ಷಣವೇ ಗುರುತು ಹಚ್ಚಬೇಕು. ಈ ವಿಧಾನವನ್ನು ಉಪಯೋಗಿಸಿ ಮಕ್ಕಳ ಭಾಷೆಯ ಬೆಳವಣಿಗೆ, ಭಾವೋದ್ರೇಕಗಳ ಬೆಳವಣಿಗೆ, ಸಾಮಾಜಿಕ ವರ್ತನೆ ಮುಂತಾದ ಅಂಶಗಳನ್ನು ಆದಷ್ಟು ನಿರ್ದಿಷ್ಟವಾಗಿ ವೈಜ್ಞಾನಿಕರು ಕಂಡು ಹಿಡಿದಿರುವರು. ಮುಂದಿನ ಅಧ್ಯಾಯಗಳಲ್ಲಿ ಈ ಮಾರ್ಗವನ್ನು ಹೇಗೆ ಕಾರ್ಯರೂಪದಲ್ಲಿ ತಂದಿರುವರು ಮತ್ತು ಅದರಿಂದ ನಮಗೆ ದೊರೆತಿರುವ ಜ್ಞಾನ ಇತ್ಯಾದಿಗಳನ್ನು ವಿಶದಪಡಿಸಲಾಗಿದೆ.

**೬ ಪರಿಮಾಣ ನಿರೂಪಕ ವಿಧಾನ:—(ರೇಟಿಂಗ್ ಮೆತಡ್)**

ಒಂದು ಮಗುವಿನಲ್ಲಿರುವ ವರ್ತನ ವೈಶಿಷ್ಟ್ಯವು ಎಷ್ಟು ಪರಿಮಾಣದಲ್ಲಿರುವುದೆಂಬುದನ್ನು ಈ ವಿಧಾನದಿಂದ ಕಂಡು ಹಿಡಿಯಲು ಪ್ರಯತ್ನಪಟ್ಟಿರುವರು. ಒಂದು ಮಗುವಿಗೂ ಇನ್ನೊಂದು ಮಗುವಿಗೂ ವರ್ತನೆಯಲ್ಲಿ ಎಷ್ಟರ ಮಟ್ಟಿನ ಅಂತರವಿರುವುದೆಂಬುದನ್ನ ಕಂಡು ಹಿಡಿಯಲು ಈ ವಿಧಾನದಿಂದ ಸ್ವಲ್ಪ ಮಟ್ಟಿಗೆ ಸಾಧ್ಯವಾಗುವುದು. ಉದಾಹರಣೆಗಾಗಿ ಒಂದು ಮಗುವಿನಲ್ಲಿ ಕೋಪವು ಎಷ್ಟು ಪರಿಮಾಣದಲ್ಲಿದೆ ಎಂಬುದನ್ನು ಕೆಳಗೆ ಸೂಚಿಸಿರುವ ಅಳತೆ ಕಡ್ಡಿಯ ಪ್ರಕಾರ ನಾವು ಅಳೆಯಬಹುದು.

| ಅತಿಹೆಚ್ಚಿನಕೋಪ | ಹೆಚ್ಚಿಗೆಕೋಪ | ಸಾಮಾನ್ಯಕೋಪ | ಕಡಿಮೆಕೋಪ | ಅತಿಸ್ವಲ್ಪಕೋಪ |
|---|---|---|---|---|
| ೧ | ೨ | ೩ | ೪ | ೫ |

ಮಗುವನ್ನು ಸಾಧಾರಣವಾಗಿ ನೋಡಿಕೊಳ್ಳುತ್ತಿರುವ ತಾಯಿ, ದಾದಿ ಉಪಾಧ್ಯಾಯ ಅಥವಾ ಉಪಾಧ್ಯಾಯಿನಿ ಯಾರೇ ಆಗಲಿ ಈ ಪಟ್ಟಿಯ ಪ್ರಕಾರ ಆ ಮಗು ಸಾಧಾರಣವಾಗಿ ಎಷ್ಟರ ಮಟ್ಟಿನ ಕೋಪವನ್ನು ವ್ಯಕ್ತಗೊಳಿಸುವುದು ಎಂಬುದನ್ನು ತಿಳಿಸಬೇಕೆಂದು ಅವರನ್ನು ಕೇಳಿಕೊಳ್ಳಲಾಗುವುದು. ಈ ರೀತಿ ಒಂದೇ ಮಗುವು ಬೇರೆ ಬೇರೆ ವರ್ತನಾಂಶಗಳಲ್ಲಿ ಯಾವ ಲಕ್ಷಣಗಳನ್ನು ತೋರಿಸುವುದೆಂಬುದನ್ನು, ಒಂದೇ ಸನ್ನಿವೇಶದಲ್ಲಿ ಬೇರೆ ಬೇರೆ ಆವರಣದಲ್ಲಿ ಬೆಳೆದಿರುವ ಮಕ್ಕಳು ಯಾವ ಲಕ್ಷಣಗಳನ್ನು ವ್ಯಕ್ತಗೊಳಿಸುವರೆಂಬುದನ್ನು ಕಂಡುಹಿಡಿಯಲು ಸಾಧ್ಯ. ಆದರೆ ಈ ವಿಧಾನವು ಪರಿಮಾಣಗಳನ್ನು ನಿರ್ಧರಿಸುವ ವ್ಯಕ್ತಿಗಳ ಅಭಿಪ್ರಾಯಗಳನ್ನು ಒಳಗೊಂಡಿದೆ

## ೭ ನೇರವಾದ ಅಳತೆಯ ವಿಧಾನ

ಮಕ್ಕಳ ವರ್ತನೆಯ ಕೆಲವು ಅಂಶಗಳನ್ನು ನಾವು ನೇರವಾಗಿ ಅಳೆಯಲು ಸಾಧ್ಯ. ಮಕ್ಕಳ ಎತ್ತರ, ತೂಕ, ಮಾಂಸಖಂಡಗಳ ಶಕ್ತಿ, ಎಷ್ಟು ಬೇಗ ಕೈಯಲ್ಲಿ ಕುಟ್ಟಬಲ್ಲರು (ಟ್ಯಾಪಿಂಗ್) ಪ್ರತಿಕ್ರಿಯೆಯ ವೇಗ, ಶಬ್ದಗಳ ಸ್ಮೃತಿ ಮುಂತಾದುವುಗಳನ್ನು ಅಳೆಯಲು ಸಾಧ್ಯ. ಒಂದು ಮಗುವಿಗೂ ಇನ್ನೊಂದು ಮಗುವಿಗೂ ಮೇಲೆ ಹೇಳಿದ ವಿಷಯಗಳಲ್ಲಿ ಇರುವ ವ್ಯತ್ಯಾಸ, ಮಗು ಬೆಳೆಬೆಳೆಯುತ್ತ ಈ ಒಂದೊಂದು ಅಂಶದಲ್ಲಿಯೂ ತೋರಿಸುವ ಅಭಿವೃದ್ಧಿ ಇವುಗಳನ್ನು ಕಂಡುಹಿಡಿಯಬಹುದು. ಒಂದೇ ವಯಸ್ಸಿನ ಅನೇಕ ಮಕ್ಕಳನ್ನು ಒಂದೊಂದು ಅಂಶದಲ್ಲಿಯೂ ಅಳತೆಮಾಡಿ ಆ ವಯಸ್ಸಿನ ಸಾಮಾನ್ಯ ಪರಿಮಾಣವನ್ನು ಕಂಡುಹಿಡಿಯಬಹುದು ಈ ವಿಧಾನವನ್ನು ಉಪಯೋಗಿಸಿ ಗೆಸ್ಸೆಲ್ ಎಂಬ ಅಮೆರಿಕದ ಶಾಸ್ತ್ರಜ್ಞನು ಮಕ್ಕಳ ಬುದ್ಧಿಶಕ್ತಿಯ ಬೆಳವಣಿಗೆಯನ್ನು ಮಾಪನೆ ಮಾಡಿ ಆರು ತಿಂಗಳು, ಒಂಬತ್ತು ತಿಂಗಳು, ಹನ್ನೆರಡು ತಿಂಗಳು, ಹದಿನೆಂಟು ತಿಂಗಳು ಈ ರೀತಿ ಅರವತ್ತು ತಿಂಗಳ

ವರೆಗಿನ ಮಕ್ಕಳ ಸಾಮಾನ್ಯ ಪರಿಮಾಣವನ್ನು ಕಂಡು ಹಿಡಿದಿರುವನು. ಈಗ ನಾವು ಯಾವ ಮಗುವನ್ನೇ ಆಗಲಿ ತೆಗೆದುಕೊಂಡು ಅವರು ನಿರೂಪಿಸಿರುವ ಪರೀಕ್ಷಣ (ಟೆಸ್ಟ್) ಗಳನ್ನು ಉಪಯೋಗಿಸಿ ಆ ಮಗುವು ವಯಸ್ಸಿಗೆ ತಕ್ಕಷ್ಟು ಬುದ್ಧಿಶಕ್ತಿಯನ್ನು ಪಡೆದಿರುವುದೇ ಎಂದು ಕಂಡು ಹಿಡಿಯಬಹುದು. ಈ ವಿಧಾನದ ಆಧಾರದ ಮೇಲೆ ಮನಶ್ಶಾಸ್ತ್ರವು ಇತ್ತೀಚೆಗೆ ಬಹಳ ಮುಂದುವರಿದಿದೆ.

### ೮ ಸಂಖ್ಯಾನ ಪದ್ಧತಿ

ಮನಶ್ಶಾಸ್ತ್ರದಲ್ಲಿ ಮಾಪನ ಮಾರ್ಗವನ್ನು ಹೆಚ್ಚಾಗಿ ಬಳಕೆಯಲ್ಲಿ ತರಲು ಈ ಸಂಖ್ಯಾ ಶಾಸ್ತ್ರವೇ (ಸ್ಟಾಟಿಸ್ಟಿಕ್ಸ್) ಕಾರಣವೆಂದು ಹೇಳಬಹುದು. ಒಂದು ಗೊತ್ತಾದ ಲಕ್ಷಣವನ್ನು ತೆಗೆದುಕೊಂಡು ಅದು ನೂರಾರು ವ್ಯಕ್ತಿಗಳಲ್ಲಿ ಒಬ್ಬೊಬ್ಬರಲ್ಲಿಯೂ ಎಷ್ಟರ ಮಟ್ಟಿಗೆ ಇದೆ ಎಂಬುದನ್ನು ಸಂಖ್ಯಾರೂಪದಲ್ಲಿ ತಿಳಿದಿದ್ದೇವೆ ಎನ್ನೋಣ. ಈ ಸಂಖ್ಯೆಗಳ ಆಧಾರದ ಮೇಲೆ ಆ ಲಕ್ಷಣವು ಆ ಗುಂಪಿನಲ್ಲಿ ಸಾಮಾನ್ಯ ಪರಿಮಾಣದಲ್ಲಿ ಎಷ್ಟಿರುವುದು ಮತ್ತು ಕನಿಷ್ಠ ಮತ್ತು ಅತ್ಯಧಿಕ ಪರಿಮಾಣಗಳ ಅವಧಿ ಏನು ಇತ್ಯಾದಿ ವಿಷಯಗಳನ್ನು ಕಂಡುಹಿಡಿಯಲು ಸಂಖ್ಯಾಶಾಸ್ತ್ರವು ನಮಗೆ ಸಹಾಯಕಾರಿಯಾಗಿದೆ. ಈ ವಿಧಾನದ ಆಧಾರದ ಮೇಲೆ ಒಂದು ವಯಸ್ಸಿನ ಮಕ್ಕಳ ಗುಂಪಿಗೂ ಮತ್ತೊಂದು ವಯಸ್ಸಿನ ಮಕ್ಕಳ ಗುಂಪಿಗೂ ಒಂದು ಗೊತ್ತಾದ ವರ್ತನೆಯಲ್ಲಿ ಎಷ್ಟರ ಮಟ್ಟಿನ ಅಂತರವಿರುವುದು? ಆ ಅಂತರವು ಸತ್ಯವಾದುದೇ, ಅಥವ ಆಕಸ್ಮಿಕ ಲಬ್ಧವೋ ಎಂಬುದನ್ನು ನಾವು ಕಂಡುಹಿಡಿಯಬಹುದು. ಒಂದು ಗುಂಪಿನಲ್ಲಿ ಎರಡು ಲಕ್ಷಣಗಳ ಸಂಖ್ಯೆಗಳನ್ನು ಸಂಗ್ರಹಿಸಿ ಅವುಗಳ ಆಧಾರದ ಮೇಲೆ ಆ ಎರಡು ಲಕ್ಷಣಗಳಿಗೂ ಇರುವ ಪರಸ್ಪರ ಸಂಬಂಧ (ಕಾರಿಲೇಷನ್) ವೇನು ಎಂಬುದನ್ನು ಕಂಡುಹಿಡಿಯಬಹುದು. ಆ ಪರಸ್ಪರ ಸಂಬಂಧದ ತಿಳಿವಳಿಕೆಯ ಸಹಾಯದಿಂದ ಮೇಲೆ ಹೇಳಿದ ಆ ಎರಡು ಲಕ್ಷಣಗಳಲ್ಲಿ ಯಾವುದಾದರೂ ಒಂದು ಲಕ್ಷಣವು ಒಂದು ವ್ಯಕ್ತಿ ಅಥವಾ ಒಂದು ಗುಂಪಿನಲ್ಲಿ ಯಾವ ಪರಿಮಾಣದಲ್ಲಿದೆ ಎಂಬುದು ಗೊತ್ತಾದುದೇ ಆದರೆ ಆ ವ್ಯಕ್ತಿ ಅಥವಾ ಗುಂಪಿನಲ್ಲಿ

ಇನ್ನೊಂದು ಲಕ್ಷಣವೂ ಎಷ್ಟು ಪರಿಮಾಣದಲ್ಲಿ ಇರಬಹುದು ಎಂಬು ದನ್ನು ನಾವು ತಿಳಿದು ಕೊಳ್ಳಬಹುದು. ಈ ವಿಧಾನವನ್ನು ಮನಶ್ಶಾಸ್ತ್ರ ಜ್ಞರು ಹೇಗೆ ಉಪಯೋಗಿಸಿಕೊಂಡಿರುವರು ಎಂಬುದನ್ನು ಮುಂದಣ ಅಧ್ಯಾಯಗಳಲ್ಲಿ ವಿವರಿಸಲಾಗಿದೆ.

## ೯ ಪ್ರಾಯೋಗಿಕ ವಿಧಾನ

ಇದುವರೆಗೆ ಹೇಳಿರುವ ವಿಧಾನಗಳೆಲ್ಲವೂ ತಾನಾಗಿಯೇ ಒದಗಿ ರುವ ಸನ್ನಿವೇಶದಲ್ಲಿ ಉಂಟಾಗುವ ವರ್ತನೆಗಳನ್ನು ಪರಿಶೀಲಿಸಿ ಫಲಿ ತಾಂಶಗಳನ್ನು ನಿರೀಕ್ಷಿಸುವ ವಿಧಾನಗಳಾಗಿರುವುವು. ಪ್ರಾಯೋಗಿಕ ವಿಧಾನದಲ್ಲಿ ಸನ್ನಿವೇಶವನ್ನೂ ನಾವೇ ಕಲ್ಪಿಸಿಕೊಂಡು ವರ್ತನೆಯ ಲಕ್ಷಣಗಳನ್ನು ನಿರ್ದಿಷ್ಟವಾಗಿ ಕಂಡುಹಿಡಿಯಲು ಸಾಧ್ಯವಾಗುವುದು. ಈ ಕೃತಕ ಸನ್ನಿವೇಶದಲ್ಲಿ ನಮ್ಮ ಕೈಯಲ್ಲಾದಷ್ಟು ಮಟ್ಟಿಗೆ ಗೊತ್ತಾದ ಅಂಶಗಳನ್ನು ಹತೋಟಿಯಲ್ಲಿಟ್ಟುಕೊಂಡು ಒಂದೊಂದನ್ನೂ ಬದಲಾ ಯಿಸಿ ಅದರ ಪರಿಣಾಮವಾಗಿ ವರ್ತನೆಯು ಯಾವ ರೀತಿಯಲ್ಲಿ ಬದ ಲಾವಣೆ ಹೊಂದುವುದೆಂಬುದನ್ನು ಅರಿಯಬಹುದು. ಈ ಮಾರ್ಗವನ್ನನು ಸರಿಸಿ, ಕಲಿಯುವ ಕ್ರಮ, ಅದರ ನಿಯಮಗಳು, ಆಯಾಸದ ಪರಿಣಾ ಮಗಳು, ಸ್ಮೃತಿಶಕ್ತಿ ಮುಂತಾದ ವಿಷಯಗಳನ್ನು ತಿಳಿಯಲಾಗಿದೆ. ಉದಾಹರಣೆಗಾಗಿ ಭಾಷಾಜ್ಞಾನಕ್ಕೂ ಕುಟುಂಬದ ಆರ್ಥಿಕಸ್ಥಿತಿಗೂ ಇರುವ ಸಂಬಂಧವನ್ನು ನಾವು ಅರಿಯಲು ಈ ಪ್ರಯೋಗವನ್ನು ನಡಸ ಬಹುದು. ಕಾರ್ಖಾನೆಯಲ್ಲಿ ಕೆಲಸ ಮಾಡುವ ಮಕ್ಕಳ ಶಾಲೆಯೊಂ ದನ್ನು ತೆಗೆದು ಅಲ್ಲಿಗೆ ಬರುವ ಐದು ವರ್ಷದ ಮಕ್ಕಳು, ಆರು ವರ್ಷದ ಮಕ್ಕಳು ಎಷ್ಟು ಪದಗಳನ್ನು ಉಪಯೋಗಿಸುತ್ತಾರೆ ಎಂಬುದನ್ನು ಪರೀಕ್ಷಿಸಿ ಒಂದು ಪದಗಳ ಪಟ್ಟಿಯನ್ನು ಮಾಡಬೇಕು. ಇಂತಹ ಪದ ಪಟ್ಟಿಯನ್ನು ಉನ್ನತಾಧಿಕಾರಿಗಳ ಮಕ್ಕಳು ಹೋಗುವ ಶಾಲೆಯೊಂದ ರಲ್ಲಿರುವ ಅದೇ ವಯಸ್ಸಿನ ಮಕ್ಕಳನ್ನು ಪರೀಕ್ಷಿಸಿ ತಯಾರುಮಾಡಿದಲ್ಲಿ ಮೊದಲಿನ ಶಾಲೆಯ ಮಕ್ಕಳಿಗೆ ಗೊತ್ತಿರುವ ಪದಗಳ ಸಂಖ್ಯೆಗಿಂತಲೂ ಈ ಉನ್ನತಾಧಿಕಾರಿಗಳ ಮಕ್ಕಳಿಗೆ ಗೊತ್ತಿರುವ ಪದಗಳ ಸಂಖ್ಯೆಯು ಅಧಿಕವೆಂಬುದನ್ನು ತಿಳಿಯಬಹುದು. ಭಾಷಾಜ್ಞಾನದಲ್ಲಿ ತಾರತಮ್ಯ

ಗಳಿರದ ಕೆಲಸಗಾರರ ಮಕ್ಕಳ ಎರಡು ಶಾಲೆಗಳನ್ನು ತೆಗೆದುಕೊಂಡು ಒಂದು ಶಾಲೆಯಲ್ಲಿ ಪಾಠಗಳ ಜೊತೆಯಲ್ಲಿ ಭಾಷಾಜ್ಞಾನವನ್ನು ಹೆಚ್ಚಿಸಲು ಪ್ರತ್ಯೇಕವಾಗಿ ಒಂದು ಕ್ರಮವನ್ನನುಸರಿಸಬೇಕು. ಇನ್ನೊಂದು ಶಾಲೆಯನ್ನು ಹಾಗೆಯೇ ಬಿಟ್ಟು ಕೆಲವು ಕಾಲದನಂತರ ಮತ್ತೆ ಈ ಎರಡು ಶಾಲೆಗಳ ಮಕ್ಕಳ ಭಾಷಾ ಜ್ಞಾನವನ್ನು ಪರೀಕ್ಷಿಸಿದರೆ, ಪ್ರತ್ಯೇಕ ಶಿಕ್ಷಣವನ್ನು ಪಡೆದ ಮಕ್ಕಳಲ್ಲಿ ಭಾಷಾ ಜ್ಞಾನವು ಹೆಚ್ಚಾಗಿರುವುದು ಗೊತ್ತಾಗುವುದು. ಮೊದಲು ಈ ಅಂಶಗಳಲ್ಲಿ ತಾರತಮ್ಯಗಳಿಲ್ಲದೆ ಇದ್ದ ಮಕ್ಕಳಲ್ಲಿ ಈಗ ವ್ಯತ್ಯಾಸವು ಕಂಡುಬಂದಿರುವುದಕ್ಕೆ ಪ್ರತ್ಯೇಕ ಶಿಕ್ಷಣವೇ ಕಾರಣ. ಈ ಪ್ರಯೋಗದಿಂದ ಭಾಷಾ ಜ್ಞಾನಕ್ಕೂ ಮತ್ತು ಹೆಚ್ಚು ಪದಗಳನ್ನು ಉಪಯೋಗಿಸುವ ಅವಕಾಶಕ್ಕೂ ನಿಕಟ ಸಂಬಂಧವಿದೆ ಎಂದು ಸ್ಪಷ್ಟವಾಗುವುದು. ಆದುದರಿಂದ ಉನ್ನತಾಧಿಕಾರಿಗಳ ಮಕ್ಕಳು ಹೆಚ್ಚು ಭಾಷೆಯನ್ನು ಕಲಿಯುವುದಕ್ಕಿರುವ ಕಾರಣವು, ಅದೃಷ್ಟ, ಪೂರ್ವಜನ್ಮದ ಕರ್ಮಫಲ, ವಂಶಪಾರಂಪರ್ಯ, ಹೆಚ್ಚು ಬುದ್ಧಿಶಕ್ತಿ ಇವು ಯಾವುವೂ ಅಲ್ಲ. ಹೆಚ್ಚು ಪದಗಳನ್ನು ಉಪಯೋಗಿಸಲು ಇರುವ ಅವಕಾಶವೇ ಮುಖ್ಯ ಕಾರಣವೆಂದು ನಾವು ಈ ಪ್ರಾಯೋಗಿಕ ಮಾರ್ಗದಿಂದ ಸ್ಥಾಪಿಸಬಹುದು. ಈ ರೀತಿ ತತ್ತ್ವಗಳು ಕೇವಲ ಅಭಿಪ್ರಾಯಗಳ ಮೇಲೆ ಆಧಾರ ಪಡೆದ ಕೃತಕ ಸನ್ನಿವೇಶಗಳನ್ನು ಕಲ್ಪಿಸಿ ಅದರಿಂದ ನಮಗೆ ಒದಗುವ ವಿಷಯ ಸಂಗ್ರಹದ ಆಧಾರದಮೇಲೆ ಸ್ಥಿರಪಡುವುವು. ಇದರಿಂದಲೇ ಪ್ರಾಯೋಗಿಕ ಮಾರ್ಗವು ಸತ್ಯಾಂಶವನ್ನು ತಿಳಿಯುವದರಲ್ಲಿ ಬಹು ಮುಖ್ಯವಾದ ಸಾಧನವಾಗಿರುವದು. ಈ ಮಾರ್ಗವು ಆಧುನಿಕ ಸಂಸ್ಕೃತಿಯಲ್ಲಿ ಬಹುಮಟ್ಟಿಗೆ ಪರಿವರ್ತನೆಯನ್ನುಂಟುಮಾಡಿದೆ. ನಮ್ಮ ದೇಶದಲ್ಲಿ ಜ್ಞಾನಾರ್ಜನೆ ಈ ಮಾರ್ಗವನ್ನು ಹೆಚ್ಚು ಹೆಚ್ಚಾಗಿ ಅವಲಂಬಿಸಬೇಕಾದುದು ಆವಶ್ಯಕ. ಪ್ರಾಯೋಗಿಕ ಮಾರ್ಗವನ್ನು ಬಿಟ್ಟು ಇಂದಿನ ಪ್ರಪಂಚದಲ್ಲಿ ನಮ್ಮ ದೇಶವು ಮುಂದುವರಿಯಲು ಸಾಧ್ಯವೇ ಇಲ್ಲ.

---

# ಅಧ್ಯಾಯ ೩

## ವರ್ತನೆಯ ಮೂಲಾಧಾರ

### ೧. ಆನುವಂಶಿಕ ಧರ್ಮ

ಮನುಷ್ಯನ ಮಾನಸಿಕ ಮತ್ತು ಶಾರೀರಕ ಲಕ್ಷಣಗಳು, ಅವನ ಬೆಳವಣಿಗೆ ಇವೆಲ್ಲವೂ ವಂಶಪಾರಂಪರ್ಯದ ಮೇಲೆ ಆಧಾರವಾಗಿರುವುವು. ಆದುದರಿಂದ ನಾವು ಮಕ್ಕಳ ವರ್ತನೆಯ ಲಕ್ಷಣಗಳನ್ನು ಪರಿಪೂರ್ಣವಾಗಿ ತಿಳಿಯಬೇಕಾದರೆ ಈ ಆನುವಂಶಿಕ ಧರ್ಮಗಳನ್ನು ತಿಳಿಯುವುದು ಅಗತ್ಯ.

ಕೆಲವು ತಪ್ಪು ನಂಬಿಕೆಗಳು—ಮನುಷ್ಯ ಸ್ವಭಾವವು ಅವನ ಪೂರ್ವಜನ್ಮದ ಕರ್ಮಕ್ಕೆ ಅನುಸಾರವಾಗಿರುವದು ಎಂಬ ನಂಬಿಕೆ ನಮ್ಮ ದೇಶದಲ್ಲಿ ಪ್ರಬಲವಾಗಿದೆ. ಈ ನಂಬಿಕೆಯ ಪ್ರಕಾರ ಒಂದೊಂದು ಜೀವಿಯೂ ಅನೇಕ ಜನ್ಮಗಳನ್ನೆತ್ತಿ, ಜನ್ಮ ಸಾಫಲ್ಯಕ್ಕೆ ಪ್ರಯತ್ನಪಡುವದೆಂದು ತಿಳಿದುಬರುವದು. ಮತ್ತೆ ಕೆಲವರಲ್ಲಿ ಮನುಷ್ಯ ಸ್ವಭಾವವು ಆತನು ಹುಟ್ಟಿರುವ ಜಾತಿಯನ್ನು ಅವಲಂಬಿಸಿರುವದೆಂಬ ನಂಬಿಕೆಯೂ ಇರುವದು. ಈ ಎರಡನೆಯ ನಂಬಿಕೆಯ ಪ್ರಕಾರ ಮನುಷ್ಯ ಸ್ವಭಾವವು ಆನುವಂಶಿಕವಾದುದು ; ಆದರೆ ಮೊದಲನೆಯ ಪ್ರಕಾರ ವಂಶಕ್ಕೂ ಅಷ್ಟು ಸಂಬಂಧವಿಲ್ಲವೆಂದು ಹೇಳಿದಹಾಗಾಯಿತು. ಸ್ವಭಾವವು ಕರ್ಮದ ಫಲವಾದರೆ ಆಗ ಅದು ವ್ಯಕ್ತಿಗತವಾಗುವದು. ವಂಶಕ್ಕೂ ಸ್ವಭಾವಕ್ಕೂ ಏನೂ ಸಂಬಂಧವಿರುವದಿಲ್ಲ. ಇಂತಹ ನಂಬಿಕೆಯು ಜಾತಿ, ಮತ, ಭೇದಗಳ ಪ್ರಭಾವಕ್ಕೆ ಎಡೆಯಿಲ್ಲದಂತೆ ಮಾಡುವದು. ಆದುದರಿಂದ ನಮ್ಮ ದೇಶದಲ್ಲಿ ಇವೆರಡನ್ನೂ ಸಂಬಂಧಿಸಿಕೊಂಡು ಮೂರನೆಯ ನಂಬಿಕೆಯೊಂದು ಪ್ರಚಾರದಲ್ಲಿದೆ. “ಮನುಷ್ಯ ಸ್ವಭಾವವೇನೋ ವ್ಯಕ್ತಿಗತವೇ ಸರಿ. ಆದರೆ ಅವನ ಕರ್ಮಫಲಕ್ಕೆ ಅನುಸಾರವಾಗಿ ಅವನು ಪ್ರತ್ಯೇಕವಾದ ಒಂದು ವಂಶದಲ್ಲಿ,—ಜಾತಿಯಲ್ಲಿ ಜನ್ಮವೆತ್ತು

ತ್ತಾನೆ.” ಈ ರೀತಿ ಕರ್ಮದ ಸಿದ್ಧಾಂತಕ್ಕೂ ವಂಶಪಾರಂಪರ್ಯಕ್ಕೂ ಒಂದು ವಿಧವಾದ ಸಂಬಂಧವನ್ನು ಕಲ್ಪಿಸಿರುತ್ತಾರೆ. ಈ ನಂಬಿಕೆಗಳನ್ನು ನಾವು ವಿಜ್ಞಾನಮಾರ್ಗದಿಂದ ಸಾಧಿಸುವುದಕ್ಕೆ ಸಾಧ್ಯವಿಲ್ಲ. ವಿಜ್ಞಾನ ಮಾರ್ಗದಿಂದ ನಮಗೆ ಗೊತ್ತಿರುವ ಆನುವಂಶಿಕ ತತ್ತ್ವಗಳಿಗೂ, ಈ ಮೇಲೆ ನಿರೂಪಿಸಿರುವ ಮೂರು ವಿಧವಾದ ನಂಬಿಕೆಗಳಿಗೂ ಸಂಬಂಧ ವಿಲ್ಲ. ಆ ತತ್ತ್ವಗಳಾವುವು? ಅವುಗಳನ್ನು ಸಾಧಿಸಲು ಯಾವ ಮಾರ್ಗ ಗಳನ್ನು ಅನುಸರಿಸಿದರು? ಎಂಬುದನ್ನು ನಾವು ನೋಡಿದರೆ ಇದರ ನಿಜಾಂಶವು ವ್ಯಕ್ತವಾಗುವದು.

## ಜೀವೋತ್ಪತ್ತಿ

ಸಾಧಾರಣವಾಗಿ ಒಂದು ವ್ಯಕ್ತಿಯ ಜೀವನವು ಹುಟ್ಟಿದ ಸಮಯದಿಂದ ಆರಂಭವಾಗುವದೆಂದು ನಂಬುತ್ತೇವೆ ಆದರೆ ಇದು ಸರಿಯಲ್ಲ. ಜೀವವು ಹುಟ್ಟುವ ಮುನ್ನ ತಾಯಿಯ ಗರ್ಭದಲ್ಲಿ ಹೆಣ್ಣು-ಗಂಡು ಜೀವಾಣುಗಳು ಕೂಡಿ ಒಂದು ಹೊಸ ಜೀವಿಯು ಉತ್ಪನ್ನವಾಗುವುದು. ಏಕೆಂದರ ಈ ಎರಡು ಜೀವಾಣುಗಳೂ ಕೂಡಿದ ಕ್ಷಣದಿಂದ ಜೀವನವು ಪ್ರಾರಂಭವಾಯಿತು ಎಂದಹಾಗಾಯಿತು; ಆದರೆ ಇದೂ ಸರಿಯಲ್ಲ. ಏಕೆಂದರೆ ಹೆಣ್ಣು-ಗಂಡು ಜೀವಾಣುಗಳು ಸಹ ಸಂಯೋಗವಾಗುವುದರ ಮೊದಲೆ ಸ್ವತಂತ್ರವಾದ ಅಣು ಜೀವಿ ಗಳಾಗಿದ್ದವು. ಆದುದರಿಂದ ಜೀವನವು ನಿರಂತರವಾಗಿ ಸಾಗುತ್ತಿರು ವುದು ಎಂಬ ವಿಷಯವು ನಿರ್ವಿವಾದವಾದುದು.

## ವರ್ಣರೇಖೆಗಳು

ಜೀವರಾಶಿಗಳೆಲ್ಲವೂ ಜೀವಕಣಗಳ ಸಮೂಹವಾಗಿರುವುವು. ಮೊದಲು ಜೀವವು ಒಂದೇ ಕಣವಾಗಿದ್ದು ಕ್ರಮೇಣ ಕಣಸಮೂಹ ಗಳಾಗಿ ಪರಿವರ್ತನೆಯನ್ನು ಹೊಂದುವುವು. ಎಲ್ಲಾ ಜೀವರಾಶಿ ಗಳಲ್ಲಿಯೂ ಜೀವಕಣಗಳು ಒಂದು ನಿರ್ದಿಷ್ಟವಾದ ಕ್ರಮದಿಂದ ಇರು ವುವು. ಜೀವಕಣಗಳಲ್ಲಿ ಮುಖ್ಯವಾಗಿ ಎರಡು ಭಾಗಗಳಿವೆ. ಮಧ್ಯ ದಲ್ಲಿ ಕಣಬೀಜವಿದ್ದು (ನ್ಯೂಕ್ಲಿಯಸ್) ಸುತ್ತಲೂ ಸೈಟೋಪ್ಲಾಸಮ್ ಎಂಬ ದ್ರವವಿರುವುದು. ಕಣಬೀಜದಲ್ಲಿ ಒಂದು ಬಲೆಯೂ, ಅಲ್ಲಲ್ಲಿ

ಗುಡ್ಡೆಗುಡ್ಡೆಗಳಾಗಿ ಕೂಡಿರುವ ವಸ್ತುವೂ ಸಹ ಇವೆ. ಜೀವಕಣವು ಒಂದು ನಿರ್ದಿಷ್ಟವಾದ ಪ್ರಮಾಣಕ್ಕಿಂತ ಹೆಚ್ಚಾಗಿ ಬೆಳೆದರೆ, ಆಗ ಅದು ಒಡೆದು ಎರಡು ಜೀವಕಣಗಳಾಗುವುವು. ಹೀಗೆ ಒಡೆದ ಸಮಯದಲ್ಲಿ




ಕಣ ವಿಭಜನೆ

ಕಣಬೀಜದಲ್ಲಿರುವ ವಸ್ತುವು ರೇಖೆಗಳ ರೂಪವನ್ನು ತಾಳುವುದು. ಈ ರೇಖೆಗಳಿಗೆ ಬಣ್ಣವನ್ನು ಆಕರ್ಷಿಸುವ ಶಕ್ತಿಯಿರುವುದರಿಂದ “ವರ್ಣರೇಖೆ” (ಕ್ರೋಮೋಸೋಮ್) ಗಳು ಎಂದು ಹೆಸರು. ವರ್ಣರೇಖೆಗಳು ಒಂದೊಂದು ಜೀವರಾಶಿಯಲ್ಲಿಯೂ ಒಂದು ಗೊತ್ತಾದ ಸಂಖ್ಯೆಯಲ್ಲಿರುವುವು. ಮನುಷ್ಯಶರೀರದಲ್ಲಿರುವ ಯಾವ ಜೀವಕಣದಲ್ಲೇ ಆಗಲಿ ಇಪ್ಪತ್ತನಾಲ್ಕು ಜೊತೆ “ವರ್ಣರೇಖೆ” ಗಳಿರುವುವು.

ಮನುಷ್ಯನ ವರ್ಣರೇಖೆಗಳು

ಕಪ್ಪೆಗಳ ಜೀವಕಣಗಳಲ್ಲಿ ಹನ್ನೆರಡು ಜೊತೆ ಜೀವಕಣಗಳಿರುವುವು. ಇಲಿಯಲ್ಲಿ ಎಂಟು ಜೊತೆಗಳಿರುವುವು. ಪ್ರತಿಯೊಂದು ಜೊತೆಯಲ್ಲಿರುವ ವರ್ಣರೇಖೆಗಳೂ ಒಂದೇ ರೂಪ, ಗಾತ್ರ; ಆದರೆ ಬೇರೆ ಬೇರೆ ಜೋಡಿಗಳು ಬೇರೆ ಬೇರೆ ರೂಪದಲ್ಲಿರುವುವು. ಇದರಲ್ಲಿ ಮುಖ್ಯಾಂಶವೇನೆಂದರೆ ಒಂದು ಜೀವರಾಶಿಗೂ, ಮತ್ತೊಂದು ಜೀವರಾಶಿಗೂ ಈ ವರ್ಣರೇಖೆಗಳ ಸಂಖ್ಯೆಯಲ್ಲಿ ವ್ಯತ್ಯಾಸವಿದ್ದರೂ ಒಂದೇ ಜೀವರಾಶಿಯ ಜೀವಕಣದಲ್ಲಿ ಒಂದು ನಿರ್ದಿಷ್ಟವಾದ ಸಂಖ್ಯೆಯಲ್ಲಿ ಈ ವರ್ಣರೇಖೆಗಳಿರುವುವು. ಈ ವರ್ಣರೇಖೆಗಳಲ್ಲಿ ಒಂದು ಜೊತೆಯು ಲೈಂಗಿಕ ವರ್ಣರೇಖೆ (ಸೆಕ್ಸ್ ಕ್ರೋಮೋಸೋಮ್) ಯಾಗಿಯೂ, ಉಳಿದುವು ದೈಹಿಕ ವರ್ಣರೇಖೆಗಳಾಗಿಯೂ ಇರುವುವು. ಹೆಂಗಸಿನಲ್ಲಿ ಈ ಲೈಂಗಿಕ ವರ್ಣರೇಖೆಗಳು ಒಂದೇ ತೆರನಾಗಿರುವುವು (X, X). ಆದರೆ ಗಂಡಸಿನಲ್ಲಿ ಬೇರೆ ತರಹವಾಗಿರುವುವು (X, Y). ಮನುಷ್ಯರಲ್ಲಿ ಈ ಇಪ್ಪತ್ತುನಾಲ್ಕು ಜೊತೆಗಳ ವರ್ಣರೇಖೆಗಳು, ತಂದೆಯಿಂದ ಬಂದ ಇಪ್ಪತ್ತುನಾಲ್ಕು, ತಾಯಿಯಿಂದ ಬಂದ ಇಪ್ಪತ್ತನಾಲ್ಕು ವರ್ಣರೇಖೆಗಳೂ ಸೇರಿ ಆಗಿರುವುವು. ತಂದೆಯಿಂದ 'X' ವರ್ಣರೇಖೆಯನ್ನು ಪಡೆದ ಮಗುವು ತಾಯಿಯ 'X' ವರ್ಣರೇಖೆಯೊಡನೆ ಸೇರುವುದರಿಂದ 'X X' ಆಗಿ ಹೆಣ್ಣಾಗಿಯೂ, ತಂದೆಯಿಂದ 'Y' ವರ್ಣರೇಖೆಯೂ, ತಾಯಿಯಿಂದ ಪಡೆದಿರುವ 'X' ವರ್ಣರೇಖೆಯೊಡನೆ ಸೇರುವುದರಿಂದ 'X Y' ಆಗಿ ಗಂಡಾಗಿಯೂ ಆಗುವುದು.

## ಜೀವಕಣದ ವಿಭಜನೆ

ಒಂದು ಪ್ರಾಣಿಯಲ್ಲಿರುವ ಆನುವಂಶಿಕ ಗುಣಗಳೆಲ್ಲವೂ ಈ ಕಣಬೀಜದಲ್ಲಿ ಅಡಗಿರುವ ವರ್ಣರೇಖೆಗಳ ಆಧಾರದ ಮೇಲೆ ಇರುವುವು. ಒಬ್ಬ ವ್ಯಕ್ತಿಯ ಸ್ವರೂಪ, ಹುಟ್ಟುಗುಣ, ಮುಂತಾದವೆಲ್ಲವೂ ಅವನ ತಾಯಿತಂದೆಗಳಿಬ್ಬರಿಂದ ಬಂದಿರುವ ಎರಡು ಜೀವಕಣಗಳಲ್ಲಿರುವ ವರ್ಣರೇಖೆಗಳಮೇಲೆ ಆಧಾರವಾಗಿರುವುವು. ತಂದೆಯಿಂದಾಗಲೀ ತಾಯಿಯಿಂದಾಗಲೀ ಈ ಜೀವಕಣಗಳ ಹೊರತು ಮತ್ತಾವ ವಸ್ತುವೂ ಮಗುವಿಗೆ ದತ್ತವಾದುದಲ್ಲ.

ಮೇಲ್ತರದ ಜೀವಿಗಳಲ್ಲಿ ಜೀವಕಣದ ವಿಭಜನೆಯು ಎರಡು ವಿಧ ವಾಗಿ ನಡೆಯುವುದು. ದೈಹಿಕ ಜೀವಕಣಗಳಲ್ಲಿ ಜೀವರಸವು ಒಂದು ನಿರ್ದಿಷ್ಟ ಪ್ರಮಾಣಕ್ಕಿಂತಲೂ ಹೆಚ್ಚಾದರೆ, ಆಗ ಈ ಕೆಳಗೆ ವಿವರಿಸಿ ರುವ ವಿಭಜನೆಯಾಗುವುದು. ಮನುಷ್ಯ ದೇಹದ ಜೀವಕಣಗಳಲ್ಲಿ ಅಡಗಿರುವ ನಲವತ್ತೆಂಟು ವರ್ಣರೇಖೆಗಳೊಂದೊಂದೂ ಉದ್ದವಾಗಿ ಸೀಳಿ ಎರಡು ಭಾಗಗಳಾಗಿ, ಎರಡು ಮರಿಕಣಗಳಾಗಿ ಮಾರ್ಪಡುವುವು. ಈ ಎರಡು ಮರಿಕಣಗಳೂ ಎಲ್ಲ ವಿಧದಲ್ಲೂ ತಾಯಿ ಜೀವಕಣವನ್ನೇ ಹೋಲುವುವು. ಸಂತಾನೋತ್ಪತ್ತಿಗೆ ಕಾರಣವಾದ ಪ್ರಜನನ ಜೀವ ಕಣ (ರಿಪ್ರೊಡಕ್ಟಿವ್ ಸೆಲ್) ದಲ್ಲಿ ವಿಭಜನೆಯ ರೀತಿಯು ಬೇರೆ ವಿಧ ವಾಗಿರುವುದು. ಈ ವಿಧಾನಕ್ಕೆ ಸಂಖ್ಯಾಕ್ಷೀಣ ವಿಭಾಗಕ್ರಮ (ರಿಡಕ್ಷನ್ ಡಿವಿಷನ್) ವೆಂದು ಹೆಸರು. ಆದಿ ಪ್ರಜನನ ಜೀವಕಣದಲ್ಲಿ ಇಪ್ಪತ್ತು ನಾಲ್ಕು ಜೊತೆ ವರ್ಣರೇಖೆಗಳು ಇರುವುವೆಂದು ಹೇಳಿರುವೆವಷ್ಟೆ. ಅದು ವಿಭಾಗವಾಗುವಾಗ ಒಂದೊಂದು ವರ್ಣರೇಖೆಯೂ, ದೈಹಿಕ ಜೀವಕಣ ದಲ್ಲಿ ಉದ್ದವಾಗಿ ಸೀಳಿ ಎರಡು ಭಾಗಗಳಾಗುವಂತೆ ಆಗದೆ ಒಂದೊಂದು ಜೊತೆಯ ಒಂದೊಂದು ರೇಖೆಯೂ ಬೇರೆಯಾಗಿ ಎರಡು ಮರಿಕಣ ಗಳಲ್ಲಿಯೂ ಸಮವಾಗಿ ಹಂಚಿಕೊಳ್ಳುವುವು. ಆದುದರಿಂದ ಸಂಖ್ಯಾ ಕ್ಷೀಣವಿಭಾಗಕ್ರಮದಲ್ಲಿ ವಿಭಾಗವಾಗಿರುವ ಒಂದೊಂದು ಮರಿಕಣದಲ್ಲಿ ಯೂ ಇಪ್ಪತ್ತನಾಲ್ಕು ವರ್ಣರೇಖೆಗಳು ಮಾತ್ರ ಇರುವುವು. ಪುರುಷ ಪ್ರಜನನ ಕಣವೂ ಸ್ತ್ರೀ ಪ್ರಜನನ ಕಣವೂ ಸಂಯೋಗವಾಗಿ ಗರ್ಭ ಕಟ್ಟಿದ ಜೀವಕಣದಲ್ಲ ಒಟ್ಟು ಇಪ್ಪತ್ತನಾಲ್ಕು ಜೊತೆ ವರ್ಣರೇಖೆಗಳೇ ಇರುವುವು. ಈ ಪ್ರಜನನ ಜೀವಕಣದ ಸಂಖ್ಯಾವಿಭಾಗಕ್ರಮವು ಸ್ತ್ರೀ ಪುರುಷರು ಪ್ರೌಢಾವಸ್ಥೆಗೆ ಬಂದಾಗ ಪ್ರಾರಂಭವಾಗುವುದು.

ಮೇಲೆ ವಿವರಿಸಿರುವ ಹಾಗೆ ಪ್ರತಿಯೊಬ್ಬ ಮನುಷ್ಯನೂ ತಾಯಿ ಯಿಂದ ಇಪ್ಪತ್ತನಾಲ್ಕು ವರ್ಣರೇಖೆಗಳನ್ನೂ ತಂದೆಯಿಂದ ಇಪ್ಪತ್ತ ನಾಲ್ಕು ವರ್ಣರೇಖೆಗಳನ್ನೂ ಪಡೆಯುವನು. ಆದುದರಿಂದ ಹೊಸ ಜೀವಿಯು ಕೆಲವು ಅಂಶಗಳಲ್ಲಿ ತಾಯಿಯನ್ನೂ ಇನ್ನೂ ಕೆಲವು ಅಂಶ ಗಳಲ್ಲಿ ತಂದೆಯನ್ನೂ ಹೋಲುತ್ತದೆ, ಮತ್ತೆ ಕೆಲವು ಅಂಶಗಳಲ್ಲಿ

ತಾಯಿತಂದೆಗಳಿಬ್ಬರನ್ನೂ ಹೋಲದೆ ಇರಬಹುದು. ಇದರಿಂದಲೇ ಒಂದೇ ತಾಯಿತಂದೆಯ ಹೊಟ್ಟೆಯಲ್ಲಿ ಹುಟ್ಟಿರುವ ಮಕ್ಕಳಾದರೂ, ಅವರ ಲಕ್ಷಣ, ಸ್ವಭಾವ, ಮುಂತಾದುವುಗಳಲ್ಲಿ ಎಷ್ಟೋ ವ್ಯತ್ಯಾಸವು ಕಂಡು ಬರುವುದು.

## ಜೀನುಗಳ ಪ್ರಭಾವ

ಒಂದೊಂದು ವರ್ಣರೇಖೆಯಲ್ಲಿಯೂ ಅನೇಕ ಭಾಗಗಳಿರುವುವು. ಇವುಗಳಿಗೆ 'ಜೀನ್' ಎಂದು ಹೆಸರು. ಆನುವಂಶಿಕ ಗುಣಗಳಿಗೆ ಈ 'ಜೀನ್' ಗಳೇ ಆಧಾರಭೂತವಾಗಿರುವುವು. ಒಂದೊಂದು ಗುಣವೂ ಒಂದೊಂದು ಜೀನಿನ ಪ್ರಭಾವದಿಂದಾಗಲೀ, ಇಲ್ಲವೆ ಹಲವು ಜೀನ್‌ಗಳ ಪ್ರಭಾವದಿಂದಾಗಲೀ ಉಂಟಾಗುವುವು. ಒಂದೊಂದು ಜೀವಕಣದಲ್ಲಿಯೂ ಜೊತೆ ಜೊತೆಯಾಗಿ ವರ್ಣರೇಖೆಗಳಿರುವುದೆಂದು ಮೇಲೆ ಹೇಳಿದೆಯಷ್ಟೆ. ಅದೇ ರೀತಿಯಲ್ಲಿ ಈ 'ಜೀನ್' ಗಳು ಸಹ ಜೊತೆ ಜೊತೆಯಾಗಿರುವುವು. ಉದಾಹರಣೆಗಾಗಿ ತಲೆಗೂದಲಿನ ಬಣ್ಣವನ್ನು ನಿರ್ಧರಿಸುವ ಒಂದು 'ಜೀನ್' ಇದೆ ಎನ್ನೋಣ. ಈ 'ಜೀನ್' ತಂದೆಯಿಂದ ಪಡೆದಿರುವ ಒಂದು ವರ್ಣರೇಖೆಯ ಪ್ರತ್ಯೇಕ ಭಾಗದಲ್ಲಿದ್ದರೆ, ತಾಯಿಯಿಂದ ಲಭಿಸಿರುವ ವರ್ಣರೇಖೆಯಲ್ಲಿಯೂ ಅದೇ ಭಾಗದಲ್ಲಿ ತಲೆಗೂದಲಿನ ಬಣ್ಣವನ್ನು ನಿರ್ಧರಿಸುವ ಜೀನ್ ಇರುತ್ತದೆ. ನಾವು ವರ್ಣರೇಖೆಯನ್ನು ಅನೇಕ ಜೀನ್‌ಗಳಿಂದ ಕೂಡಿರುವ ಒಂದು ಸರಪಣಿ ಎಂದು ಭಾವಿಸಬಹುದು. (ಚಿತ್ರ ೩)

## ಮೆಂಡಲನ ಪ್ರಯೋಗ

ಆನುವಂಶಿಕ ಧರ್ಮದ ನಿಯಮಗಳನ್ನು ಆಸ್ಟ್ರಿಯಾದೇಶದ ಕ್ರೈಸ್ತ ಸನ್ಯಾಸಿ ಮೆಂಡೆಲ್ ಎಂಬುವವನು ಶಾಸ್ತ್ರೋಕ್ತವಾಗಿ ಅಧ್ಯಯನ ಮಾಡಿರುವನು. ಈತನು ಬಟಾಣಿ ಗಿಡಗಳ ಮೇಲೆ ಅನೇಕ ಪ್ರಯೋಗಗಳನ್ನು ನಡೆಸಿ ೧೮೬೬ ರಲ್ಲಿ ತನ್ನ ಪ್ರಯೋಗಗಳ ಫಲಿತಾಂಶವನ್ನು ಪ್ರಕಟಿಸಿದನು. ಮಾನವನ ತಿಳುವಳಿಕೆಯ ಇತಿಹಾಸದಲ್ಲಿ ಈ ಪ್ರಯೋಗಗಳು ಆನುವಂಶಿಕನಿಯಮಗಳನ್ನು ಮೊಟ್ಟಮೊದಲನೆಯದಾಗಿ ಸ್ಥಾಪಿಸಿದುವು. ಆದರೂ ಆ ಪ್ರಕಟನೆಯು ೧೯೦೦ ರ ವರೆಗೂ ಬೆಳಕಿಗೆ

ಬರಲೇ ಇಲ್ಲ. ಆತನು ಸತ್ತಮೇಲೆಯೇ ಆತನ ಮಹತ್ತು ಪ್ರಪಂಚಕ್ಕೆ ಗೋಚರವಾದದ್ದು. ಆತನು ನಡಸಿದ ಪ್ರಯೋಗಗಳಲ್ಲಿ ಹಲವನ್ನು




ಚಿತ್ರ ೩. ಜೀನುಗಳ ಸರಪಣಿ (ಜೆನ್ನಿಂಗ್ಸ್)

ಉದಾಹರಣೆಗಾಗಿ ಇಲ್ಲಿ ಕೊಡಲಾಗಿದೆ. ಒಂದು ಎತ್ತರವಾಗಿ ಬೆಳೆಯುವ ಬಟಾಣಿ ಗಿಡದ ಬೀಜವನ್ನು ನೆಟ್ಟು ಬೆಳಸಿದರೆ ಅದೂ ಸಹ ಎತ್ತರವಾಗಿಯೇ ಬೆಳೆಯುವುದು. ಅದೇ ರೀತಿ ಒಂದು ಗಿಡ್ಡಾಗಿ ಬೆಳೆಯುವ ಬಟಾಣಿಗಿಡದ ಬೀಜವನ್ನು ನೆಟ್ಟು ಬೆಳಸಿದರೆ ಅದು ಗಿಡ್ಡಾದ ಗಿಡವೇ ಆಗುವುದು. ಎತ್ತರವಾಗಿ ಗಿಡ್ಡಾಗಿ ಬೆಳೆಯುವ ಈ ಗುಣಗಳು ಶುದ್ಧಗುಣಗಳು. ಮೆಂಡೆಲನು ಒಂದು ಉದ್ದವಾಗಿ ಬೆಳೆಯುವ ಗಿಡದ ಹೂವಿನ ಪರಾಗವನ್ನು ಗಿಡ್ಡಾಗಿ ಬೆಳೆಯುವ ಗಿಡದ ಹೂವಿನ ಪರಾಗ ಕೇಸರದೊಡನೆ ಸಂಪರ್ಕಮಾಡಿ ಉತ್ಪನ್ನವಾದ ಬೀಜದಿಂದ ಗಿಡಗಳ ಗುಣವು ಯಾವವಿಧವಾಗಿರುವುದೆಂದು ಅನೇಕ ಪ್ರಯೋಗಗಳನ್ನು

ನಡಸಿದನು. ಈ ಪ್ರಯೋಗಗಳು ಅತ್ಯಾಶ್ಚರ್ಯಕರವಾದ ಫಲಿತಾಂಶಗಳನ್ನು ಕೊಟ್ಟುವು. ಮೊದಲನೆಯ ಸಂತಾನದ ಗಿಡಗಳೆಲ್ಲವೂ ಎತ್ತರವಾಗಿಯೇ ಬೆಳೆದವು. ಎರಡನೆಯ ತಲೆಮಾರಿನ ಗಿಡಗಳ ಬೀಜವನ್ನು ನೆಟ್ಟು ಬೆಳೆಸಿದಾಗ ಶೇಕಡ ೭೫ ರಷ್ಟು ಗಿಡಗಳು ಉದ್ದವಾಗಿ ಬೆಳೆದುವು. ಉಳಿದ ಶೇಕಡ ೨೫ ರಷ್ಟು ಗಿಡಗಳು ಗಿಡ್ಡಾಗಿ ಬೆಳೆದುವು. ಈ ಗಿಡ್ಡಾಗಿ ಬೆಳೆದಿರುವ ಗಿಡಗಳ ಬೀಜವನ್ನು ಮತ್ತೆ ನೆಟ್ಟು ಬೆಳಸಿದಾಗ ಅವೆಲ್ಲವೂ ಗಿಡ್ಡಾದ ಗಿಡಗಳೇ ಆದುವು ಈ ಶೇಕಡ ೨೫ ರಷ್ಟು ಗಿಡ್ಡಾದ ಗಿಡಗಳ ಬೀಜದ ಸಂತತಿಯೆಲ್ಲವೂ ಗಿಡ್ಡಾಗಿಯೇ ಬೆಳೆದುವು. ಈ ರೀತಿ ಇವುಗಳಿಗೆ ಮೊದಲಿನ ಶುದ್ಧಗುಣವೇ ಪ್ರಾಪ್ತವಾಯಿತು. ಮೊದಲನೇ ಸಂತತಿಯಲ್ಲಿ ಉದ್ದವಾಗಿ ಬೆಳೆದ ಶೇಕಡ ೭೫ ರಷ್ಟು ಗಿಡಗಳ ಬೀಜವನ್ನು ನೆಟ್ಟು ಬೆಳೆಸಿದಾಗ ಅವುಗಳಲ್ಲಿ ೧/೩ ಭಾಗ ಗಿಡಗಳ ಸಂತತಿಗಳು ಸದಾ ಉದ್ದವಾಗಿ ಬೆಳೆದುವು ಉಳಿದ ೨/೩ ಭಾಗ ಗಿಡಗಳ ಸಂತತಿಗಳ ಬೀಜದಲ್ಲಿ ಯಾವಾಗಲೂ ಶೇಕಡ ೭೫ರಷ್ಟು ಉದ್ದವಾಗಿಯೂ, ಉಳಿದ ೨೫ ರಷ್ಟು ಗಿಡ್ಡಾಗಿಯೂ ಬೆಳೆದುವು

ಇದಕ್ಕಿಂತಲೂ ಸುಲಭವಾದ ಮತ್ತೊಂದು ಉದಾಹರಣೆಯನ್ನು ತೆಗೆದುಕೊಳ್ಳೋಣ. ಒಂದು ಬಿಳಿ ಹೂವಿನ ಗಿಡವನ್ನು ಒಂದು ಕೆಂಪು ಹೂವಿನ ಗಿಡದೊಡನೆ ಸೇರಿಸಿ ಕಸಿಮಾಡಿದರೆ ಮಿಶ್ರಗಿಡದ ಹೂಗಳೆಲ್ಲವೂ ಪಾಟಲ ಬಣ್ಣವಾಗಿರುವುವು. ಈ ಹೂವಿನ ಗಿಡದಲ್ಲಿ ಬಣ್ಣವನ್ನು ನಿರ್ಧರಿಸುವ 'ಜೀನ್' ಗಳು ಎರಡು ವರ್ಣರೇಖೆಗಳಲ್ಲೂ ಇರುವುವೆಂದು ಮೊದಲೇ ಹೇಳಿದೆಯಷ್ಟೆ. ಬಿಳಿ ಹೂವಿನ ಗಿಡದಲ್ಲಿ ಬಿಳಿ ಬಣ್ಣವನ್ನು ನಿರ್ಧರಿಸುವ ಜೀನ್‌ಗಳು ಎರಡಿವೆ. ಒಂದೊಂದು ಗಿಡದಲ್ಲೂ ಸಂಖ್ಯಾಕ್ಷೀಣ ವಿಭಾಗದ ಕಾಲದಲ್ಲಿ ಬಿಳಿ ಹೂವಿನ ಗಿಡದ ವರ್ಣರೇಖೆಯ ಒಂದು ಜೀನ್ ಒಂದು ಮರಿಕಣದಲ್ಲಿಯೂ ಮತ್ತೊಂದು ಜೀನ್ ಇನ್ನೊಂದು ಮರಿಕಣದಲ್ಲಿಯೂ ಇರುವುದು. ಹೀಗೆಯೇ ಕೆಂಪು ಹೂವಿನ ಗಿಡದ ಕಣದಲ್ಲಿಯೂ ಸಂಖ್ಯಾಕ್ಷೀಣ ವಿಭಾಗಾನಂತರ ಒಂದೊಂದು ಮರಿಕಣದಲ್ಲಿಯೂ ಒಂದೊಂದು ಕೆಂಪು ಜೀನ್ ಇರುವುದು. ಕಸಿಮಾಡಿದ ಮೇಲೆ ತಾಯಿಯಿಂದ ಬಂದ ಮರಿಕಣದಲ್ಲಿ

ಬಿಳಿ ಬಣ್ಣಕ್ಕೆ ಕಾರಣವಾದ ಜೀನೂ ತಂದೆಯಿಂದ ಬಂದ ಮರಿಕಣದಲ್ಲಿ ಕೆಂಪು ಬಣ್ಣಕ್ಕೆ ಕಾರಣವಾದ ಜೀನೂ ಸೇರಿ ಗರ್ಭಕಟ್ಟಿ ಮಿಶ್ರಗಿಡವಾಗುವುದು. ಆದುದರಿಂದ ಈ ಸಂತತಿಯ ಗಿಡಗಳೆಲ್ಲವೂ ತಾಯಿ ಗಿಡದ ಹೂವಿನಂತೆ ಬಿಳುಪೂ ಅಲ್ಲ; ತಂದೆ ಗಿಡದ ಹೂವಿನಂತೆ ಕೆಂಪೂ ಅಲ್ಲ; ಮಿಶ್ರವರ್ಣದ ಪಾಟಲ ಹೂವನ್ನು ಬಿಡುವುವು.




ಚಿತ್ರ ೪. ಮೆಂಡಲಿನ ಪ್ರಯೋಗ

ಈ ಪಾಟಲ ಹೂಗಳನ್ನು ಬಿಡುವ ಗಿಡಗಳ ಬೀಜದಿಂದ ಬೆಳೆದ ಗಿಡಗಳೂ ಕೆಂಪು ಬಿಳುಪು ಮತ್ತು ಪಾಟಲ ಬಣ್ಣ—ಈ ಮೂರು ತರಹೆಯ ಹೂಗಳನ್ನೂ ಬಿಡುವುವು. ಪಾಟಲಬಣ್ಣದ ಹೂಗಳನ್ನು ಮಾತ್ರ ಬಿಡುವ ಗಿಡದ ಬೀಜಗಳಿಂದ ಈ ಮೂರು ತರಹ ಹೂಗಳನ್ನು ಬಿಡುವ ಗಿಡಗಳು ಹೇಗೆ ಉಂಟಾಗುವುವು ಎಂಬುದನ್ನು ನೋಡೋಣ.

ಪಾಟಲಬಣ್ಣದ ಹೂಗಳನ್ನು ಬಿಡುವ ಗಿಡದ ಪ್ರಜನನ ಜೀವ ಕಣದಲ್ಲಿ, ಬಣ್ಣವನ್ನು ನಿರ್ಧರಿಸುವ ಜೀನುಗಳು ಎರಡಿವೆ. ತಾಯಿ ಯಿಂದ ಬರುವ ಕೆಂಪುಜೀನೊಂದು ತಂದೆಯಿಂದ ಬಂದಿರುವ ಬಿಳಿಯ ಜೀನೊಂದು ಇರುವುವು. ಸಂಖ್ಯಾಕ್ಷೀಣವಿಭಾಗದ ಸಮಯದಲ್ಲಿ ಒಂದು ಮರಿಕಣದಲ್ಲಿ ಪುನಃ ಒಂದೊಂದು ಬಣ್ಣಕ್ಕೆ ಕಾರಣವಾದ ಜೀನುಗಳು ಬೇರೆಯಾಗಿಹೋಗುವುವು. ಹೊಸ ಸಂತತಿಯಲ್ಲಿ ಕೆಂಪುಜೀನಿನ ಜೊತೆಯಲ್ಲಿ ಕೆಂಪು ಜೀನು ಸೇರಿದರೆ ಕೆಂಪು ಹೂಗಳನ್ನು ಬಿಡುವ ಗಿಡ ಗಳಾಗುವುವು. ಕೆಂಪುಜೀನಿನ ಜೊತೆಯಲ್ಲಿ ಬಿಳಿ ಜೀನು ಸೇರಿ ಪಾಟಲ ಬಣ್ಣದ ಹೂಗಳನ್ನು ಬಿಡುವ ಗಿಡಗಳಾಗುವುವು. ಬಿಳಿ ಜೀನುಗಳ ಜೊತೆಯಲ್ಲಿ ಬಿಳಿ ಜೀನುಗಳು ಸೇರಿ ಬಿಳಿ ಹೂವನ್ನು ಬಿಡುವ ಗಿಡ ಗಳಾಗುವುವು.[1] ನಾವು ಮೇಲೆ ಹೇಳಿದ ಪ್ರಕಾರ ಇಲ್ಲಿಯೂ ಒಂದು ಗುಣದಲ್ಲಿ ವ್ಯತ್ಯಾಸವಿರುವ ಎರಡು ಬೀಜಗಳ ಸಂಯೋಗದಿಂದ ಶೇಕಡಾ ೨೫ ರಷ್ಟು ತಾಯಿಯ ಶುದ್ಧ ಗುಣವುಳ್ಳ ಸಂತತಿಯೂ ಶೇಕಡ ೨೫ ರಷ್ಟು ತಂದೆಯ ಶುದ್ಧ ಗುಣವುಳ್ಳ ಸಂತತಿಯೂ ಇನ್ನುಳಿದ ಶೇಕಡ ೫೦ ರಷ್ಟು ಮಿಶ್ರಗುಣವುಳ್ಳ ಸಂತತಿಯೂ ಉಂಟಾಗುವುದು. ಇದನ್ನು ಬೀಜಗಣಿತದ ಸೂತ್ರದ ಪ್ರಕಾರ ಹೀಗೆ ವಿವರಿಸಬಹುದು.

$$(A+B)^2 = A^2 + 2AB + B^2$$

## ಮೆಂಡೆಲನ ತತ್ತ್ವಗಳು

ಮೇಲೆ ಹೇಳಿದ ಈ ಎರಡು ಉದಾಹರಣೆಗಳೂ ಮೆಂಡಲ್ ನಿರೂಪಿಸಿದ ನಿಯಮಗಳನ್ನು ನಮಗೆ ವ್ಯಕ್ತಪಡಿಸುವುವು. ಒಂದು ಗುಣಕ್ಕೆ ಕಾರಣವಾದ ಜೀನ್ ಯಾವಾಗಲೂ ಸ್ವತಂತ್ರದಿಂದ ಇರು ವುದು. ಮಿಳಿತವಾದಮೇಲೂ ಇದರ ಪ್ರತ್ಯೇಕ ಅಸ್ತಿತ್ವವು ನಾಶ ಹೊಂದುವುದಿಲ್ಲ. ಆದುದರಿಂದಲೇ ಇದರ ಫಲಿತಾಂಶವು ಒಂದು ತಲೆ ಮಾರಿನಲ್ಲಿ ಕಾಣಿಸಿಕೊಳ್ಳದೇ ಹೋದರೂ. ಮುಂದಿನ ತಲೆಮಾರಿನಲ್ಲಿ ಕಾಣಿಸಿಕೊಳ್ಳುವುದು.[1] ಕೆಂಪು ಮತ್ತು ಬಿಳಿ ಜೀನುಗಳು ಮಿಳಿತ

---

1. ಚಿತ್ರ ೪

ವಾಗುವುದರಿಂದ ಪಾಟಲ ಬಣ್ಣದ ಹೂ ಉತ್ಪನ್ನವಾಗಿ ಅದರಲ್ಲಿ ಬಿಳಿ ಮತ್ತು ಕೆಂಪು ಜೀನ್‌ಗಳ ಪ್ರಭಾವವು ಗುಪ್ತವಾಗಿದ್ದರೂ, ಮುಂದಿನ ಸಂತತಿಯಲ್ಲಿ ಅವುಗಳ ಪ್ರಭಾವವು ಕೆಲವು ಸಂದರ್ಭಗಳಲ್ಲಿ ಮತ್ತೆ ವ್ಯಕ್ತವಾಗುವುವು. ಈಗ ಕೆಂಪು ಜೀನುಗಳು ಕೆಂಪುಜೀನುಗಳೊಡನೆ ಸೇರಿದರೆ ಶುದ್ಧ ಕೆಂಪು ಬಣ್ಣದ ಹೂವಿಗೆ ಕಾರಣವಾಗುವುವು. ಹಾಗೆಯೇ ಬಿಳಿ ಜೀನುಗಳು ಬಿಳಿಜೀನುಗಳೊಡನೆ ಸೇರಿದರೆ ಬಿಳಿ ಹೂಗಳಾಗುವುವು. ಇವೆರಡೂ ಅಲ್ಲದೆ ಪಾಟಲ ಬಣ್ಣದ ಹೂವಿನ ಪರಾಗವು (ಪೋಲೆನ್) ಪಾಟಲ ಬಣ್ಣದ ಹೂವಿನ ಪರಾಗ ಕೇಸರ (ಸ್ಟೇಮನ್) ದಲ್ಲಿ ಸೇರಿ ಬೀಜವಾದಾಗ ಮಾತ್ರ ಮೂರು ವಿಧವಾದ ಹೂಗಳನ್ನು ಬಿಡುವ ಗಿಡಗಳಾಗುವುವು. ಆದರೆ ಪಾಟಲಬಣ್ಣದ ಹೂವಿನ ಪರಾಗವು ಕೆಂಪು ಬಣ್ಣದ ಹೂವಿನ ಪರಾಗಕೇಸರದಲ್ಲಿ ಸೇರಿ ಬೀಜವಾದಾಗ ಆ ಬೀಜದ ಗಿಡವು ಶುದ್ಧ ಕೆಂಪುಹೂಗಳನ್ನೋ ಅಥವಾ ಪಾಟಲಹೂಗಳನ್ನೊ ಬಿಡುವುದೇ ಹೊರತು ಬಿಳಿಬಣ್ಣದ ಹೂಗಳನ್ನು ಎಂದಿಗೂ ಬಿಡುವುದಿಲ್ಲ. ಏಕೆಂದರೆ ಈ ಸಂದರ್ಭದಲ್ಲಿ ಬಿಳಿ ಜೀನು ಬಿಳಿಜೀನಿನೊಡನೆ ಮಿಳಿತವಾಗುವ ಸಂಭವವೇ ಇಲ್ಲ. ಇದೇ ರೀತಿ ಬಿಳಿ ಮತ್ತೊಂದು ಮತ್ತು ಪಾಟಲ ಹೂವಿನ ಸಂಯೋಗದಿಂದ ಬಿಳಿ ಮತ್ತು ಪಾಟಲಹೂಗಳು ಉಂಟಾಗುವುವೇ ಹೊರತು ಕೆಂಪು ಬಣ್ಣದ ಹೂ ಬಿಡಲು ಸಾಧ್ಯವೇ ಇಲ್ಲ.

ಮೆಂಡಲನು ಕಂಡುಹಿಡಿದ ಮತ್ತೊಂದು ಮುಖ್ಯ ನಿಯಮವೇನೆಂದರೆ — ಕೆಲವು ಜೀನುಗಳು ಪ್ರಬಲವಾಗಿ (ಡಾಮಿನೆಂಟ್) ಮತ್ತೆ ಕೆಲವು ಜೀನುಗಳು ದುರ್ಬಲವಾಗಿ (ರಿಸೆಸಿವ್) ಇರುವುವು.

ಮೇಲೆ ಹೇಳಿರುವ ಉದಾಹರಣೆಯಲ್ಲಿ ಬಟಾಣಿಗಿಡವು ಎತ್ತರವಾಗಿ ಬೆಳೆಯಲು ಕಾರಣವಾದ ಜೀನು ಪ್ರಬಲವಾಗಿರುವುದು; ಗಿಡ್ಡಾಗಿ ಬೆಳೆಯುವ ಗುಣದ ಜೀನು ದುರ್ಬಲವಾಗಿರುವುದು. ಆದುದರಿಂದ ಈ ಎರಡು ಗಿಡಗಳನ್ನೂ ಕಸಿಮಾಡಿ ಬೆಳಸಿದರೆ ಮೊದಲನೆಯ ಸಂತತಿಯ ಗಿಡಗಳೆಲ್ಲವೂ ಎತ್ತರವಾಗಿಯೇ ಬೆಳೆಯುವುವು. ಆದರೆ ಮುಂದಿನ ಸಂತತಿಯಲ್ಲಿ ಎತ್ತರದ ಗಿಡಗಳೂ ಗಿಡ್ಡಾದ ಗಿಡಗಳೂ ಹುಟ್ಟುವುವು.

ಏಕೆಂದರೆ ಎರಡನೆಯ ಸಂತತಿಯ ಗಿಡಗಳ ಬೀಜದಲ್ಲಿ ಗಿಡ್ಡಾಗಿ ಬೆಳೆಯುವ ಗುಣದ ಜೀನುಗುಪ್ತವಾಗಿದ್ದಿತೇ ಹೊರತು ಸ್ಪಷ್ಟವಾಗಿರಲಿಲ್ಲ. ಐದನೆಯ ಚಿತ್ರದಲ್ಲಿ ಕಪ್ಪು ಮತ್ತು ಬಿಳಿ ಬಣ್ಣದ ಮೊಲಗಳ ಪೀಳಿಗೆಗಳ ಪ್ರಮಾಣಗಳು ಸ್ಪಷ್ಟವಾಗಿ ಕಾಣುವುವು. ಆರನೆಯ ಚಿತ್ರದಲ್ಲಿ ನೀಗ್ರೋ ಹೆಂಗಸು ಪರಂಗಿಯವನನ್ನು ಮದುವೆಯಾದರೆ ಅವರ ಸಂತತಿಯ



ಚಿತ್ರ ೫. ಮೆಂಡಲಿನತತ್ತ್ವ (ಮೂಲ)

ಮಕ್ಕಳ ಬಣ್ಣವನ್ನು ವಿವರಿಸಲಾಗಿದೆ. ಈ ಸಂತತಿಗಳಲ್ಲಿ ಅಚ್ಚ ಕಪ್ಪು ಬಣ್ಣದ, ಅಚ್ಚ ಬಿಳಿಯ ಬಣ್ಣದ ಮತ್ತು ಮಿಶ್ರಬಣ್ಣದ ಮಕ್ಕಳು ಹುಟ್ಟುವರು. ಹೀಗೆ ಮನುಷ್ಯರಲ್ಲಿ ಕಣ್ಣಿನ ಬಣ್ಣ, ಕೂದಲಿನ ಬಣ್ಣ ಮತ್ತು ಕೂದಲು ನೆಟ್ಟಗಿರುವುದು ಇಲ್ಲವೆ ಗುಂಗುರಾಗಿರುವುದು, ಮೂಗಿನ ಆಕಾರ, ಕೈಬೆರಳಿನ ಉದ್ದ, ದಪ್ಪ, ದೇಹದ ಎತ್ತರ, ರಕ್ತದ

ಸ್ವಭಾವ ಮುಂತಾದ ಗುಣಗಳು ಮೆಂಡಲ್ ತೋರಿಸಿಕೊಟ್ಟಿರುವ ಪರಿಮಾಣಗಳಲ್ಲಿ ಅನುವಂಶಿಕವಾಗಿರುವುವೆಂದು ಗೊತ್ತಾಗಿದೆ.



ಚಿತ್ರ ೬ ಮೆಂಡಲಿನ ತತ್ತ್ವ (ಮನುಷ್ಯರ ಬಣ್ಣ)

## ಮಾರ್ಗನ್‌ನ ಪ್ರಯೋಗ

ಇತ್ತೀಚೆಗೆ ಅಮೆರಿಕದ ಮಾರ್ಗನ್ ಎಂಬವರು ಅನುವಂಶಿಕ ನಿಯಮಗಳ ಜ್ಞಾನವನ್ನು ಮತ್ತಷ್ಟು ಹೆಚ್ಚಿಸಿರುವರು. ಇವರು ಡ್ರೊಸಫೈಲ ಎಂಬ ನೊಣಗಳ ಮೇಲೆ ಅನೇಕ ಪ್ರಯೋಗಗಳನ್ನು ನಡಸಿ ಜೀನುಗಳು ಗುಣಗಳಿಗೆ ಯಾವರೀತಿಯಿಂದ ಕಾರಣಭೂತ

ವಾಗಿರುವುವೆಂದು ನಮಗೆ ತಿಳಿಸಿರುವರು. ಸುಮಾರು ೪೦-೫೦ ವರ್ಷ ಗಳ ಹಿಂದೆ ದೇಹದ ಒಂದೊಂದು ಗುಣವೂ ಒಂದೊಂದು ಜೀನಿನ ಮೇಲೆ ಆಧಾರವಾಗಿರುವುದೆಂದು ನಂಬಿದ್ದರು. ಆದರೆ ಮಾರ್ಗನ್[1] ಮಾಡಿದ ಪ್ರಯೋಗದಿಂದ ನೊಣದ ಕಣ್ಣಿನ ಬಣ್ಣವು ಮೂರು ವರ್ಣ ರೇಖೆಗಳಲ್ಲಿ ಹಂಚಿಕೊಂಡಿರುವ ಹತ್ತೊಂಭತ್ತು ಜೀನುಗಳ ಒಟ್ಟು ಪ್ರಭಾವದಿಂದ ಉಂಟಾಗುವುದು ಎಂದು ಗೊತ್ತಾಗಿರುವುದು. ಯಾವ ಒಂದು ಜೀನಿನಲ್ಲಾದರೂ ಹೆಚ್ಚು ಕಡಿಮೆಯಾದರೆ ಕಣ್ಣಿನ ಬಣ್ಣವು ಬೇರೆಯಾಗುವುದು. ನೊಣಗಳ ಕಣ್ಣಿನ ಬಣ್ಣವೊಂದೇ ಇಷ್ಟೊಂದು ತೊಡಕಾದ ಹೊಂದಾವಣೆಯ ಮೇಲೆ ಆಧಾರಪಟ್ಟಿರಬೇಕಾದರೆ ಮನು ಷ್ಯನ ಆಕಾರ, ಸ್ವಭಾವಗಳಲ್ಲಿ ಕಂಡುಬರುವ ವೈವಿಧ್ಯಕ್ಕಾಗಿ ನಾವು ಆಶ್ಚರ್ಯಗೊಳ್ಳುವುದೇಕೆ?

ಯಾವ ಒಂದು ಗುಣವೇ ಆಗಲಿ ಒಂದು ಪ್ರತ್ಯೇಕವಾದ ಜೀನಿನ ಮೇಲೆ ಆಧಾರವಾಗಿರುವುದು ದುರ್ಲಭ. ಸಾಧಾರಣವಾಗಿ ಒಂದು ಗುಣವು ನಾಲ್ಕಾರು ಜೀನುಗಳ ಅಂತರಸಂಬಂಧದಿಂದ ಉಂಟಾಗು ವುದು. ಜೀವನವು ವಿಕಾಸವಾದಂತೆಲ್ಲಾ ಈ ಅಂತರ ಸಂಬಂಧವು ಹೆಚ್ಚಾಗುತ್ತಾ ಬರುವುದು.

### ಜೀನುಗಳು ಮತ್ತು ಆವರಣ

ಇಷ್ಟೇ ಅಲ್ಲದೆ ಒಂದು ಗುಣವು ಕೇವಲ ಜೀನುಗಳಮೇಲೆಯೇ ಆಧಾರಪಡುವುದಿಲ್ಲ—ಅದರಲ್ಲೂ ಮುಖ್ಯವಾಗಿ ಮೇಲ್ತರದ ಜೀವಿ ಗಳಲ್ಲಿ ಪ್ರತ್ಯೇಕವಾದ ಗುಣಗಳಿಗೆ ಜೀನುಗಳು ಸಂಪೂರ್ಣಕಾರಣ ವೆಂದು ನಾವು ಭಾವಿಸಬಾರದು. ಮೇಲೆ ನೋಡಿದಹಾಗೆ ಒಂದು ಬೀಜದಲ್ಲಿ ದುರ್ಬಲ ಜೀನು ಇದ್ದರೂ ಆ ಗುಣವನ್ನು ಆ ಸಂತತಿಯಲ್ಲಿ ವ್ಯಕ್ತಪಡಿಸದೆ ಹೋಗಬಹುದು. ಒಂದೇ ಜೀನು ಒಂದು ಗುಣಕ್ಕೆ ಕಾರಣಭೂತವೆಂದು ಹೇಳಲಾಗದು. ಆ ಜೀನು ಇತರ ನೂರಾರು ಜೀನುಗಳ ಜೊತೆಯಲ್ಲಿ ಸೇರಿ ಒಂದು ಗುಣಕ್ಕೆ ನೆರವಾಗುವುದು ಮತ್ತು

---

1. ಮಾರ್ಗನ್—ತಿಯರಿ ಆಫ್ ದಿ ಜೀನ್

ಈ ಜೀನುಗಳಿರುವ ಜೀವಿಯು ಯಾವ ಆವರಣದಲ್ಲಿ ಬೆಳೆಯುವುದೋ ಅದರಮೇಲೂ ಸ್ವಲ್ಪಮಟ್ಟಿಗೆ ಆಧಾರವಾಗಿರುವುದು.

ಜೀವಿಯು ಅಸ್ವತಂತ್ರವಾದುದು. ಒಂದು ಕಡೆ ಜೀನುಗಳ ಮೇಲೆಯೂ ಮತ್ತೊಂದು ಕಡೆ ಆವರಣದ ಮೇಲೆಯೂ ಆಧಾರವಾಗಿರುವುದು. ಮುಖ್ಯವಾಗಿ ಮನುಷ್ಯನ ಹುಟ್ಟುಗುಣವು ಅವನು ಬೆಳೆಯುತ್ತಿರುವ ಸನ್ನಿವೇಶಗಳ ಮೇಲೆ ಬಹಳಮಟ್ಟಿಗೆ ನಿಂತಿರುವುದು.

ಅನುವಂಶೀಯತೆಗೂ ಆವರಣಕ್ಕೂ ಇರುವ ನಿಕಟ ಸಂಬಂಧವು ಕೆಳಗಿನ ಉದಾಹರಣೆಗಳಿಂದ ಸ್ಪಷ್ಟವಾಗುವುದು. 'ಸಾಲಮ್ಯಾಂಡರ್' ಎಂಬ ಹಲ್ಲಿ ಜಾತಿಯ ಒಂದು ಪ್ರಾಣಿಯಿದೆ.[1] ಇದರ ಮೈಮೇಲೆ ಹಳದಿ ಮತ್ತು ಕಪ್ಪು ಬಣ್ಣದ ಚುಕ್ಕೆಗಳಿವೆ. ಹಳದಿ ಬಣ್ಣವು ಹೆಚ್ಚಾಗಿರುವುದು ಇಲ್ಲವೇ ಕಡಿಮೆಯಾಗಿರುವುದು ಜೀನುಗಳ ಮೇಲೆ ಆಧಾರವಾಗಿರುವುದು. ಏಕೆಂದರೆ ಹೆಚ್ಚು ಹಳದಿ ಬಣ್ಣದ ಸಾಲಮ್ಯಾಂಡರಿಗೂ ಕಡಿಮೆ ಹಳದಿ ಬಣ್ಣದ ಸಾಲಮ್ಯಾಂಡರಿಗೂ ಸಂಯೋಗಮಾಡಿ ಪಡೆದ ಸಂತಾನದಲ್ಲಿ ಮೆಂಡಿಲ್‌ನ ನಿಯಮಕ್ಕೆ ಅನುಸಾರವಾಗಿ ಶೇಖಡ ೭೫ ರಷ್ಟು ಹೆಚ್ಚು ಹಳದಿ ಬಣ್ಣದ ಸಾಲಮ್ಯಾಂಡರ್‌ಗಳೂ ಶೇಕಡ ೨೫ ರಷ್ಟು ಕಡಿಮೆ ಹಳದಿ ಬಣ್ಣದ ಸಾಲಮ್ಯಾಂಡರುಗಳೂ ಹುಟ್ಟುವುವು. ಆದರೆ ಹಳದಿ ಬಣ್ಣದ ಪರಿಮಾಣವೂ ಸೂರ್ಯನ ಬೆಳಕಿನಿಂದಲೂ ಪರಿವರ್ತನೆಯನ್ನು ಹೊಂದುವುದು. ಸೂರ್ಯನ ಬೆಳಕು ಹೆಚ್ಚಾದರೆ ಹಳದಿ ಬಣ್ಣವು ಹೆಚ್ಚಾಗುವುದು. ಆ ಪ್ರಾಣಿಯನ್ನು ಸೂರ್ಯನ ಬೆಳಕು ಕಡಿಮೆಯಿರುವ ಕತ್ತಲುಪ್ರದೇಶದಲ್ಲಿ ಇಟ್ಟಿದ್ದರೆ ಈ ಹಳದಿಬಣ್ಣದ ಪರಿಮಾಣವು ಕಡಿಮೆಯಾಗುವುದು. ಆದುದರಿಂದ ಸಾಲಮ್ಯಾಂಡರಿನ ಬಣ್ಣವು ಜೀನುಗಳ ಮೇಲೆಯೇ ಆಧಾರವಾದುದಲ್ಲ. ಆವರಣದ ಪ್ರಭಾವವೂ ಅದನ್ನು ಬದಲಾಯಿಸುವುದು.[2]

---

1. ಕ್ಯಾಮರಾರ್—ದಿ ಇನ್‌ಹೆರಿಟೆನ್ಸ್ ಆಫ್ ಅಕ್ವೈರ್ಡ್ ಕ್ಯಾರೆಕ್ಟರ್ಸ್.
2. ಜೆನ್ನಿಂಗ್ಸ್—ಜಿನೆಟಿಕ್ಸ್

## ಅನುವಂಶಿಕ ತತ್ತ್ವಗಳು

ಇದುವರೆಗೂ ಹೇಳಿರುವುದರ ಸಾರಾಂಶವನ್ನು ಈ ಕೆಳಗೆ ಸೂಚಿಸಿರುವ ನಿಯಮಗಳಿಂದ ಸಂಕ್ಷೇಪಿಸಬಹುದು.

೧. ಸಂತಾನವು ತಂದೆತಾಯಿಗಳ ಜೀನುಗಳಿಂದ ಕೂಡಿರುವ ಎರಡು ಪ್ರಜನನ ಜೀವಾಣುಗಳನ್ನು ಮಾತ್ರ ಪಡೆಯುವುದು.

೨. ಜೀನುಗಳು ಇತರ ಜೀನುಗಳ ಜೊತೆಯಲ್ಲಿ ಸೇರಿ ಕೆಲವು ಗುಣಗಳನ್ನು ಪಡೆಯಲು ನೆರವಾಗುವುವು.

೩. ಜೀನುಗಳಿಂದ ಉಂಟಾದ ಗುಣಗಳು ಕೆಲವು ಸಂದರ್ಭಗಳಲ್ಲಿ ಆವರಣದ ಪ್ರಭಾವದಿಂದಲೂ ಆಗಬಹುದು.

## ಮಾನಸಿಕ ಲಕ್ಷಣಗಳ ಅನುವಂಶೀಯತೆ.

ಇದುವರೆಗೆ ಮನುಷ್ಯನ ಕೆಲವು ದೇಹಲಕ್ಷಣಗಳಿಗೆ ಸಂಬಂಧಪಟ್ಟ ಅನುವಂಶೀಯತೆಯ ನಿಯಮಗಳನ್ನು ವಿವರಿಸಲಾಗಿದೆ. ತಲೆಯ ಅಳತೆ, ಕಣ್ಣಿನ ಬಣ್ಣ, ದೃಷ್ಟಿಶಕ್ತಿ, ದೇಹದ ಎತ್ತರ ಮುಂತಾದ ಲಕ್ಷಣಗಳ ಅನುವಂಶೀಯತೆಯ ಜ್ಞಾನವು ಬಹಳ ಮುಂದುವರಿದಿದೆ. ಮಾನಸಿಕ ಲಕ್ಷಣಗಳು ಎಷ್ಟುಮಟ್ಟಿಗೆ ಈ ಅನುವಂಶೀಯತೆಯ ನಿಯಮಗಳಿಗೆ ಒಳಪಟ್ಟಿದೆ ಎಂದು ನೋಡುವುದು ಅತ್ಯಾವಶ್ಯಕ. ಮಾನಸಿಕ ಗುಣಗಳು ಮನುಷ್ಯನಲ್ಲಿಯೇ ಹೆಚ್ಚಾಗಿ ಕಂಡುಬರುವುವು. ಆದರೆ ಮನುಷ್ಯನ ಮೇಲೆ ಈ ಅನುವಂಶಿಕ ಪ್ರಯೋಗಗಳನ್ನು ನಡಸುವುದು ಅಷ್ಟುಸುಲಭವಲ್ಲ. ಬೇರೆ ಸಸ್ಯ ಮತ್ತು ಕೀಳ್ತರಗತಿಯ ಪ್ರಾಣಿಗಳಲ್ಲಿ[1]

---

1 ನೊಣಗಳು ಸಾಮಾನ್ಯವಾಗಿ ಹನ್ನೆರಡು ದಿನಗಳಿಗೊಮ್ಮೆ ಮೊಟ್ಟೆಗಳನ್ನಿಟ್ಟು ಮರಿಮಾಡುವುವು. ಅಂದರೆ ಒಂದು ವರ್ಷದಲ್ಲಿ ಮೂವತ್ತು ತಲೆಮಾರುಗಳ ನೊಣಗಳನ್ನು ಜೀವಶಾಸ್ತ್ರಜ್ಞರು ಪ್ರಯೋಗ ಶಾಲೆಯಲ್ಲಿ ಪರೀಕ್ಷಿಸಬಹುದು. ಅಲ್ಲದೆ, ಒಂದೊಂದು ನೊಣವನ್ನು ಪ್ರತ್ಯೇಕವಾಗಿ ಗುರುತುಮಾಡಿ ಅವರ ಲಕ್ಷಣಗಳೆಲ್ಲವನ್ನೂ ಪರೀಕ್ಷಿಸಿ, ಗಾಳಿ, ಬೆಳಕು, ಶೀತೋಷ್ಣ ಮುಂತಾದ ಆವರಣಗಳ ವೈವಿಧ್ಯವನ್ನು ಹತೋಟಿಯಲ್ಲಿಟ್ಟು ಅನುವಂಶಿಕ ನಿಯಮಗಳನ್ನು ಪರೀಕ್ಷಿಸಲು ಸಾಧ್ಯವಾಗುವುದು. ಒಂದು ಶತಮಾನಕ್ಕೆ ಮೂರು ತಲೆಮಾರುಗಳನ್ನು ಪಡೆಯುವ

ಅನುವಂಶಿಕ ಪ್ರಯೋಗಗಳನ್ನು ನಡಸುವುದು ಸುಲಭ. ಅಲ್ಲದೆ ಒಂದು ವರ್ಷದಲ್ಲಿ ಹಲವಾರು ತಲೆಮಾರುಗಳನ್ನು ಪಡೆದು ಪರೀಕ್ಷಿಸಬಹುದು. ಮನುಷ್ಯರಲ್ಲಿ ಇದು ಅಸಾಧ್ಯ. ಆದುದರಿಂದಲೇ, ಮಾನಸಿಕ ಲಕ್ಷಣಗಳ ಅನುವಂಶೀಯುತೆಯ ಜ್ಞಾನವು ಅಷ್ಟೊಂದು ಹೆಚ್ಚಾಗಿ ಲಭಿಸಿಲ್ಲ.

ಮನುಷ್ಯರಲ್ಲಿ ಅನುವಂಶಿಕ ನಿಯಮಗಳ ವ್ಯಾಪ್ತಿಯನ್ನು ಕಂಡು ಹಿಡಿಯಲು ಅನೇಕ ಪ್ರಯತ್ನಗಳನ್ನು ಮಾಡಿರುವರು. ಅವುಗಳಲ್ಲಿ ಕೆಲವನ್ನು ಇಲ್ಲಿ ಸೂಚಿಸಲಾಗಿದೆ. ಗೊಡ್ಡಾರ್ಡ್ ಎಂಬ ಶಾಸ್ತ್ರಜ್ಞನು ಒಂದೇವಂಶಕ್ಕೆ ಸೇರಿದ ಎರಡು ಶಾಖೆಗಳನ್ನು ಪರೀಕ್ಷಿಸಿದನು. ಒಂದು ಶಾಖೆಯಲ್ಲಿ ಕುಡುಕರು, ಕಳ್ಳರು, ವ್ಯಭಿಚಾರಿಗಳು, ದಡ್ಡರು ಮುಂತಾದವರೇ ಇದ್ದರು. ಇನ್ನೊಂದು ಶಾಖೆಯಲ್ಲಿ ಉತ್ಕೃಷ್ಟವಾದ ನಾಗರಿಕತೆಯಲ್ಲಿ ಬೆಳೆದು ಬುದ್ಧಿವಂತರಾಗಿ ಮೇಲ್ತರಗತಿಯ ಉದ್ಯೋಗಗಳನ್ನು

---

ಮನುಷ್ಯ ಸಂತತಿಯಲ್ಲಿ ಈ ತರಹದ ಪ್ರಯೋಗಗಳು ಹೇಗೆ ತಾನೆ ಸಾಧ್ಯ ? ಮೇಲೆ ಹೇಳಿದಂತೆ ಮನುಷ್ಯರಲ್ಲಿ ೨೪ ಜೊತೆ ವರ್ಣರೇಖೆಗಳಿರುವುವು. ಈ ಇಪ್ಪತ್ತು ನಾಲ್ಕು ಜೊತೆಗಳ ಪರಸ್ಪರ ಸೇರುವಿಕೆಯ ವಿವಿಧ ರೀತಿಗಳು ಸುಮಾರು ೨೮ ಸಾವಿರ ಕೋಟಿ (೨೮,೨೪೭,೯೫,೩೬,೪೮೧) ಆಗುವವೆಂದು ಮಾರ್ಗನರವರು ಲೆಕ್ಕಮಾಡಿರುವರು. ಆದುದರಿಂದಲೇ ವೈಯಕ್ತಿಕ ವ್ಯತ್ಯಾಸಗಳು ಇಷ್ಟೊಂದು ಹೆಚ್ಚಾಗಿ ಕಾಣಬರುವುವು. ಮನುಷ್ಯರಲ್ಲಿ ಅನುವಂಶಿಕ ಪ್ರಯೋಗಗಳನ್ನು ನಡಸಲು ಮತ್ತೊಂದು ತೊಂದರೆಯೂ ಇರುವುದು. ಇನ್ನಾವ ಪ್ರಾಣಿಯೂ, ಮನುಷ್ಯನ ಹಾಗೆ, ಆವರಣದ ಲಕ್ಷಣಗಳನ್ನು ಹತೋಟಿಯಲ್ಲಿಟ್ಟುಕೊಂಡಿಲ್ಲ. ಮಕ್ಕಳನ್ನು ತನಗೆ ತೋಚುವ ರೀತಿಯಲ್ಲಿ ಬೆಳಸಲು ಮನುಷ್ಯನು ಪ್ರಯತ್ನಿಸುವನು. ಗುರಿಗೆ ತಕ್ಕಂತೆ ಆವರಣವನ್ನು ಬದಲಾಯಿಸಿ ಮಕ್ಕಳ ಶಿಕ್ಷಣ ಕ್ರಮವನ್ನು ನಿರ್ಧರಿಸುವನು. ಇದಕ್ಕನುಗುಣವಾಗಿ ಮಕ್ಕಳು ತಮ್ಮ ಗುಣಗಳನ್ನು ಮಾರ್ಪಡಿಸಿಕೊಳ್ಳುವರು. ಮನುಷ್ಯರು ಸುಲಭವಾಗಿ ಹೊಸ ಪ್ರತಿಕ್ರಿಯೆಗಳನ್ನು ಕಲಿಯುವ ಸಾಮರ್ಥ್ಯವನ್ನು ಪಡೆದಿರುವುದೇ ಇದಕ್ಕೆ ಕಾರಣ. ಆದುದರಿಂದ ಒಬ್ಬ ಮನುಷ್ಯನ ಗುಣವು ಎಷ್ಟರ ಮಟ್ಟಿಗೆ ಅನುವಂಶಿಕವಾದುದು ; ಎಷ್ಟರಮಟ್ಟಿಗೆ ಆವರಣದ ಪ್ರಭಾವ, ಶಿಕ್ಷಣ ಮುಂತಾದುವುಗಳ ಮೇಲೆ ಆಧಾರವಾಗಿದೆ ಎಂದು ಹೇಳುವುದು ಬಹಳ ಕಷ್ಟ.

ಮಾಡುವವರಾಗಿದ್ದರು. ಇವರಲ್ಲಿ ಹೆಚ್ಚಾಗಿ ವಕೀಲರು, ಉಪಾಧ್ಯಾಯರು, ಡಾಕ್ಟರುಗಳು, ದೊಡ್ಡ ವರ್ತಕರು, ಸ್ಥಾನೀಯ ಸಂಸ್ಥೆಯ ಅಧಿಕಾರಿಗಳೂ ಆಗಿದ್ದರು. ಗೊಡ್ಡಾರ್ಡ್ ಈ ಎರಡು ಶಾಖೆಗಳ ಉತ್ಪತ್ತಿಯನ್ನೂ ಕಂಡುಹಿಡಿದನು. ಒಬ್ಬಾನೊಬ್ಬ ಸೈನ್ಯಾಧಿಕಾರಿಯು ಯುದ್ಧಕ್ಕೆ ಹೋದಾಗ ಒಂದು ಊರಿನಲ್ಲಿ ಒಬ್ಬ ದಡ್ಡ ಹೆಂಗಸನ್ನು ಮದುವೆಮಾಡಿಕೊಂಡ. ಆಕೆಯಲ್ಲಿ ನಾಲ್ಕಾರು ಮಕ್ಕಳನ್ನು ಪಡೆದನಂತೆ. ಅವರ ಸಂತತಿಯವರೇ ಹೆಚ್ಚಾಗಿ ಕೆಟ್ಟಗುಣಗಳಿಂದ ಕೂಡಿದವರಾಗಿ ದುರಾಚಾರಿಗಳಾದರು. ಯುದ್ಧ ಮುಗಿದನಂತರ, ಆತನು ತನ್ನ ಊರಿಗೆ ಹೋಗಿ ಒಬ್ಬ ಸುಸಂಸ್ಕೃತಳಾದ ಹೆಂಗಸನ್ನು ಮದುವೆಮಾಡಿಕೊಂಡು ಆಕೆಯಲ್ಲಿಯೂ ನಾಲ್ಕಾರು ಮಕ್ಕಳನ್ನು ಪಡೆದನು. ಈ ಮಕ್ಕಳ ಸಂತತಿಯವರೇ ಎರಡನೆಯ ಶಾಖೆಯುವರಾದರು. ಈ ಶೋಧನೆಯ ಆಧಾರದ ಮೇಲೆ ಗೊಡ್ಡಾರ್ಡ್ ಒಳ್ಳೆಯ ಗುಣಗಳೂ, ಕೆಟ್ಟಗುಣಗಳೂ ಆನುವಂಶಿಕವೆಂದು ಸ್ಥಾಪಿಸಲು ಪ್ರಯತ್ನಪಟ್ಟನು. ಈ ತರಹದ ನಂಬಿಕೆಯು ಜನರಲ್ಲಿ ಸಾಮಾನ್ಯವಾಗಿ ಇದ್ದೇ ಇರುವುದು.

ಆದರೆ ಇದರ ಸತ್ಯಾಂಶವು ನಂಬಿಕೆಯ ಮೇಲೆ ನಿಂತಿರಬಾರದು. ಒಳ್ಳೆಯ ಮತ್ತು ಕೆಟ್ಟ ಗುಣಗಳು ಆನುವಂಶಿಕವಾದರೆ, ಮೊದಲು ನೋಡಿದ ಹಾಗೆ, ಅವು ಜೀನುಗಳ ಮೇಲೆ ಆಧಾರವಾಗಿರಬೇಕು. ಅವು ಜೀನುಗಳ ಮೇಲೆ ಆಧಾರವಾಗಿದ್ದರೆ ಮೆಂಡಲ್ ಮತ್ತು ಮಾರ್ಗನ್ ತೋರಿಸಿಕೊಟ್ಟಿರುವ ಖಚಿತವಾದ ಪ್ರಮಾಣದಲ್ಲಿಯೇ ನಡೆಯಬೇಕು. ನಾವು ಮುಖ್ಯವಾಗಿ ಗಮನದಲ್ಲಿಟ್ಟಿರಬೇಕಾದ ಅಂಶವೇನೆಂದರೆ, ಯಾವ ಗುಣಗಳು ಒಂದು ಸಂತಾನದಲ್ಲಿ ನಿಯಮಬದ್ಧವಾಗಿ ಕಾಣಿಸಿಕೊಳ್ಳುವುದಿಲ್ಲವೋ ಅವು ಆನುವಂಶಿಕವಲ್ಲ. ಗೊಡ್ಡಾರ್ಡನು ವಿಚಾರ ಮಾಡಿದ "ಕ್ಯಾಲಿ-ಕ್ಯಾಕ್"(ಒಳ್ಳೆಯ-ಕೆಟ್ಟ) ಕುಟುಂಬದಲ್ಲಿ ಒಳ್ಳೆಯತನ ಮತ್ತು ಕೆಟ್ಟತನಗಳು ಆ ನಿಯಮಗಳ ಪ್ರಕಾರ ಇರಲಿಲ್ಲ. ಇರುವುದೂ ಸಾಧ್ಯವಲ್ಲ. ತಂದೆಯು ಕುಡುಕನಾಗಿ ಕಳ್ಳತನ ಮಾಡುವವನಾಗಿದ್ದರೆ ಅವನ ಮಕ್ಕಳೂ ಈ ಅಭ್ಯಾಸಗಳನ್ನು ಕಲಿಯುವುದರಲ್ಲಿ ಏನಾಶ್ಚರ್ಯ! ಮೊದಲನೆಯ ಸಂತತಿಯವರೆಲ್ಲರೂ ಹೊಲಸುಕೇರಿ

ಗಳಲ್ಲಿ ಬೆಳೆದು ವಿದ್ಯೆಯಿಲ್ಲದೆಯೇ ಕೆಟ್ಟ ಸಹವಾಸದಲ್ಲಿಯೇ ಬೆಳೆದವರು. ಇಂತಹ ಶಾಖೆಯಲ್ಲಿ ಕೆಟ್ಟಬುದ್ಧಿಯಿರುವುದು ಸಹಜವೇ ಸರಿ. ಎರಡನೆಯ ಶಾಖೆಯುವರು ಪಟ್ಟಣದ ಸ್ವಚ್ಛವಾದ ಭಾಗದಲ್ಲಿದ್ದು ವಿದ್ಯಾವಂತರಾಗಿ, ಒಳ್ಳೆಯ ಸಹವಾಸದಲ್ಲಿದ್ದವರು. ಆ ಶಾಖೆಯುವರು ಸಜ್ಜನರಾಗಿರುವುದು ಸಹಜವೇ ಸರಿ.

ಮೊದಲನೆಯ ಶಾಖೆಯ ಮಕ್ಕಳಿಗೆ ಒಳ್ಳೆಯ ಗುಣಗಳನ್ನು ಕಲಿಯುವ ಸನ್ನಿವೇಶಗಳೇ ದುರ್ಲಭವಾಗಿರುವಾಗ ' ನಿಮ್ಮ ಕೆಟ್ಟತನವು ನಿಮ್ಮ ಹುಟ್ಟುಗುಣ ' ಎಂದು ಹೇಳುವುದು ಸಮಂಜಸವಲ್ಲ.

ಗಾಲ್ಟನ್ ಮತ್ತೊಂದು ಸಂಶೋಧನೆಯನ್ನು ನಡಸಿದನು. ಈತನು ಅವಲಂಬಿಸಿದ ಕ್ರಮವೇ ಬೇರೆ. ಈತನು ಆಂಗ್ಲ ದೇಶದಲ್ಲಿ ಸುಮಾರು ಮುನ್ನೂರು ಕುಟುಂಬಗಳಲ್ಲಿ ಶ್ರೇಷ್ಠತೆಯನ್ನು ಪಡೆದವರ ಸಂಖ್ಯೆ ಎಷ್ಟು ಎಂಬುದನ್ನು ಕಂಡು ಹಿಡಿದನು. ಸುಪ್ರಸಿದ್ಧ ಜಡ್ಜಿಗಳು ರಾಜಕೀಯ ಅಧಿಕಾರಿಗಳು, ಗ್ರಂಥಕರ್ತರು, ವೈಜ್ಞಾನಿಕರು, ಕಲಾವಿದರು ಈ ಮುನ್ನೂರು ಕುಟುಂಬಗಳಲ್ಲಿ ಒಂದು ಸಾವಿರ ಜನರಿದ್ದರು ಸಾಮಾನ್ಯವಾಗಿ ಒಬ್ಬ ಸುಪ್ರಸಿದ್ಧ ಮನುಷ್ಯನ ಹತ್ತಿರ-ಸಂಬಂಧಿಕನು ತಾನೂ ಸುಪ್ರಸಿದ್ಧನಾಗಲು ಸಾಧ್ಯವಿದೆ ಎಂಬುದನ್ನು ತೋರಿಸಿದನು. ಒಬ್ಬಾನೊಬ್ಬ ಸುಪ್ರಸಿದ್ಧ ಮನುಷ್ಯನ ತಮ್ಮನೋ, ಅಣ್ಣನೋ ಅಥವಾ ಹತ್ತಿರ ಸಂಬಂಧಿಕನೋ ಸುಪ್ರಸಿದ್ಧನಾಗಲು ಇರುವಸಂಬಂಧಕ್ಕಿಂತಲೂ ಆತನ ಮಗನು ಸುಪ್ರಸಿದ್ಧನಾಗಲು ಇರುವ ಸಂಭವವೇ ಹೆಚ್ಚು.

ಕಾರ್ಲ್ ಪಿಯರ್ಸನ್ ಎಂಬುವನು ಗಾಲ್ಟನ್ ಮಾಡಿದ ಕೆಲಸವನ್ನು ಮುಂದುವರಿಸಿದನು. ಈತನು ಸಾವಿರಾರು ಕುಟುಂಬಗಳಲ್ಲಿ ಅಣ್ಣ ತಮ್ಮಂದಿರು ಅಕ್ಕತಂಗಿಯರು ಇವರಿಗೆ ಇರುವ ತಾರತಮ್ಯವನ್ನು ಲೆಕ್ಕಾಚಾರವಾಗಿ ಪರೀಕ್ಷಿಸಿದನು. ಅಣ್ಣನಿಗೂ ತಮ್ಮನಿಗೂ ಎತ್ತರ, ಕೈಉದ್ದ, ತಲೆಯ ಅಳತೆ, ಕಣ್ಣಿನ ಬಣ್ಣ ಮುಂತಾದ ಶಾರೀರಿಕ ಲಕ್ಷಣಗಳಲ್ಲಿ ಎಷ್ಟರ ಮಟ್ಟಿನ ಸಂಬಂಧವಿದೆ ಎಂಬುದನ್ನು ತಿಳಿಸಿದನು. ಈ ಪ್ರಯೋಗದಲ್ಲಿ ಸಹೋದರ—ಸಹೋದರಿಯರಲ್ಲಿ ತಲೆಉದ್ದ, ಕಣ್ಣಿನ ಬಣ್ಣ, ಬುದ್ಧಿಶಕ್ತಿ ಈ ಮೂರು ಗುಣಗಳಲ್ಲಿಯೂ ಸಾಧಾರಣವಾಗಿ ೦.೫

ಸಂಬಂಧವಿತ್ತೆಂದು ಕಂಡುಬಂದಿತು. ಇದರ ಆಧಾರದ ಮೇಲೆ ಕಾರ್ಲ್ ಪಿಯರ್ಸನ್ನನು ಈ ರೀತಿ ವಾದಿಸಿದನು—ತಲೆಯ ಉದ್ದ ಮತ್ತು ಕಣ್ಣಿನ ಬಣ್ಣ ಜೀನುಗಳ ಆಧಾರದ ಮೇಲೆ ನಿಂತಿರುವ ಆನುವಂಶಿಕ ಗುಣ. ಸಹೋದರರಲ್ಲಿ ಈ ಆನುವಂಶಿಕ ಗುಣಗಲ್ಲಿ ಎಷ್ಟು ಸಂಬಂಧ ವಿದೆಯೋ ಅಷ್ಟೇ ಪ್ರಮಾಣದ ಸಂಬಂಧವು ಬುದ್ಧಿಶಕ್ತಿಯಲ್ಲಿಯೂ ಕಂಡುಬಂದಿರುವುದರಿಂದ, ಬುದ್ಧಿಶಕ್ತಿಯೂ, ತಲೆಯ ಉದ್ದ, ಕಣ್ಣಿನ ಬಣ್ಣ ಇವುಗಳಂತೆ ಆನುವಂಶಿಕವೆಂದು ವಾದಿಸಿದನು. ಆದರೆ ಈತನು ಬುದ್ಧಿಶಕ್ತಿಯನ್ನು ಅಳೆಯಲು ಪ್ರಯತ್ನಿಸಲಿಲ್ಲ. ಬುದ್ಧಿಶಕ್ತಿಯ ತಾರತಮ್ಯಗಳನ್ನು ಉಪಾಧ್ಯಾಯರ ಅಭಿಪ್ರಾಯದ ಮೇಲೆ ಸಂಗ್ರಹಿಸಿದನು.

ಅಮೆರಿಕ ದೇಶದಲ್ಲಿ ಕ್ಯಾಟಲ್ ಎಂಬ ಮನಶ್ಶಾಸ್ತ್ರಜ್ಞನು ೧೯೦೫ ನೆಯ ಇಸವಿಯಲ್ಲಿ ಅಮೆರಿಕ ಒಂದೊಂದು ಪ್ರಾಂತದಲ್ಲಿ ಎಷ್ಟು ವೈಜ್ಞಾನಿಕರು ಉನ್ನತ ಸ್ಥಿತಿಯನ್ನು ಪಡೆದಿರುವರು ಎಂದು ಒಂದು ಸಂಶೋಧನೆಯನ್ನು ನಡಸಿದನು. ಕೆಲವು ಪ್ರಾಂತಗಳಲ್ಲಿ ಸುಪ್ರಸಿದ್ಧವೈಜ್ಞಾನಿಕರಿದ್ದರು. ಇನ್ನು ಕೆಲವು ಪ್ರಾಂತಗಳಲ್ಲಿ ಇದರ ನೂರರಲ್ಲೊಂದು ಭಾಗಕ್ಕಿಂತಲೂ ಕಡಿಮೆಯಾಗಿದ್ದರು. ಇದನ್ನು ಕಂಡು 'ಕ್ಯಾಟಲ್' ನು ಈ ಅಂತರಕ್ಕೆ ಆ ಪ್ರಾಂತದ ಜನಗಳ ಬುದ್ಧಿಶಕ್ತಿಯ ವ್ಯತ್ಯಾಸಗಳು ಕಾರಣವೇ ? ಅಥವಾ ಎಲ್ಲಾ ಪ್ರಾಂತಗಳಲ್ಲಿಯೂ ಬುದ್ಧಿಶಕ್ತಿಯ ವ್ಯಾಪ್ತಿಯು ಒಂದೇ ತೆರವಾಗಿದ್ದರೂ, ವೈಜ್ಞಾನಿಕ ಶಿಕ್ಷಣದ ಅನುಕೂಲ್ಯಗಳ ತಾರತಮ್ಯವು ಕಾರಣವೇ ? ಎಂದು ಯೋಚಿಸಿದನು. ೧೯೩೨ ರಲ್ಲಿ ಈತನು ಮತ್ತೆ ಒಂದು ಸಂಶೋಧನೆಯನ್ನು ಪ್ರಾರಂಭಿಸಿದನು. ಇದರ ಫಲಿತಾಂಶವು ೧೯೦೫ ರಲ್ಲಿ ಬಂದ ಫಲಿತಾಂಶಕ್ಕೆ ವಿರುದ್ಧವಾಗಿದ್ದಿತು. ಆಗ ಹಿಂದುಳಿದಿದ್ದ ಪ್ರಾಂತಗಳೆಲ್ಲೆಲ್ಲ ೧೯೩೨ ರಲ್ಲಿ ಬಹಳ ಹೆಚ್ಚಾಗಿ ಸುಪ್ರಸಿದ್ಧ ವೈಜ್ಞಾನಿಕರು ಇದ್ದುದು ಕಂಡುಬಂದಿತು. ಒಂದು ಪ್ರಾಂತಕ್ಕೂ ಮತ್ತೊಂದು ಪ್ರಾಂತಕ್ಕೂ ಮೊದಲು ಇದ್ದ ಅಂತರವು ಈಗ ಬಹಳ ಕಡಿಮೆಯಾಯಿತು. ಒಂದೊಂದು ಪ್ರಾಂತದಲ್ಲಿಯೂ ವಿಶ್ವವಿದ್ಯಾನಿಲಯಗಳು ಸ್ಥಾಪಿತವಾದುದರಿಂದ ವೈಜ್ಞಾನಿಕ ಶಿಕ್ಷಣವು ಉನ್ನತ ಸ್ಥಿತಿಗೆ ಬಂದು ಸುಪ್ರಸಿದ್ಧ ವೈಜ್ಞಾನಿಕರು ಆ ಪ್ರಾಂತದಲ್ಲಿ ಉದ್ಭವಿಸಲು ಅವಕಾಶವಾಯಿತು.

ಮೈಸೂರು ದೇಶದಲ್ಲಿ ೨೦-೩೦ ವರ್ಷಗಳ ಹಿಂದೆ ಮಲೆನಾಡು ಪ್ರದೇಶದಲ್ಲಿದ್ದ ಜನರಲ್ಲಿ ವಿದ್ಯಾವಂತರು, ಪದವೀಧರರು, ಉನ್ನತಾಧಿಕಾರಿಗಳು, ಇವರ ಸಂಖ್ಯೆಯು ಬಯಲು ಸೀಮೆಯವರ ಸಂಖ್ಯೆಗಿಂತಲೂ ಎಷ್ಟೋ ಕಡಿಮೆಯಾಗಿತ್ತು. ಇದಕ್ಕೆ ಮುಖ್ಯ ಕಾರಣ ಬಯಲುಸೀಮೆಯವರ ಬುದ್ಧಿಶಕ್ತಿಯು ನ್ಯೂನತೆ ಅಲ್ಲ. ವಿದ್ಯಾಭ್ಯಾಸಕ್ಕೆ ಸ್ಥಾನಗಳಾದ ಮೈಸೂರು, ಬೆಂಗಳೂರು ಪಟ್ಟಣಗಳು ಬಯಲು ಸೀಮೆಯಲ್ಲಿದ್ದುದೇ ಕಾರಣ. ಈಗ ಮಲೆನಾಡು ಪ್ರದೇಶದಲ್ಲಿ ವಿದ್ಯಾಭ್ಯಾಸಕ್ಕೆ ಅನುಕೂಲಗಳು ಹೆಚ್ಚಿರುವುಧರಿಂದ ಈ ತಾರತಮ್ಯವು ಬಹು ಮಟ್ಟಿಗೆ ಕಡಿಮೆಯಾಗಿದೆ. ಇದೇ ರೀತಿ ಜಾತಿ, ಮತ, ಪ್ರಾಂತಗಳಲ್ಲಿ ಕಂಡುಬರುವ ವ್ಯತ್ಯಾಸಗಳು ಕೇವಲ ಬುದ್ಧಿಶಕ್ತಿಯ ವಿಕಾಸಕ್ಕೆ ಇರುವ ಅವಕಾಶಗಳ ಮೇಲೆ ಆಧಾರವಾಗಿರುವುದು.

ಬುದ್ಧಿಶಕ್ತಿ, ನೈತಿಕಗುಣ, ಮುಂತಾದುವು ಎಷ್ಟರಮಟ್ಟಿಗೆ ಆನುವಂಶಿಕವೆಂದು ಪರೀಕ್ಷಿಸಲು ಕುಟುಂಬಗಳ ಪರಿಶೀಲನ ಮಾರ್ಗವು ಅಷ್ಟೊಂದು ಫಲಕಾರಿಯಲ್ಲವೆಂಬುದು ಮೇಲೆ ಹೇಳಿರುವ ಸಂಶೋಧನೆಗಳಿಂದ ವ್ಯಕ್ತವಾಗುವುದು. ಆದುದರಿಂದ ಈಚೀಚೆಗೆ ಮಾನಸಿಕ ಗುಣಗಳ ಅನುವಂಶಿಕ ಪರೀಕ್ಷೆಗಳನ್ನು ಎರಡು ಮಾರ್ಗಗಳಿಂದ ಮಾಡಲು ಪ್ರಯತ್ನಿಸುತ್ತಿರುವರು. ಒಂದನೆಯದಾಗಿ ಅವಳಿಜವಳಿ ಮಕ್ಕಳ ಪರೀಕ್ಷೆ. ಎರಡನೆಯದಾಗಿ ಪ್ರಾಣಿಗಳಲ್ಲಿ ಆನುವಂಶಿಕ ಪ್ರಯೋಗಗಳನ್ನು ನಡಸುವುದು

ಮೇಲೆ ಹೇಳಿರುವ ರೀತಿಯಲ್ಲಿ, ಮಗು ಗಂಡು ಹೆಣ್ಣು ಪ್ರಜನನ ಜೀವಾಣುಗಳ ಸಂಯೋಗದಿಂದ ಉತ್ಪನ್ನವಾಗುವುದು. ಕೆಲವು ಸಮಯಗಳಲ್ಲಿ ಅವಳಿ ಮಕ್ಕಳು ಹುಟ್ಟುವುದನ್ನು ನಾವು ನೋಡಿದ್ದೇವೆ. ಈ ಅವಳಿ ಮಕ್ಕಳಲ್ಲಿ ಎರಡು ವಿಧಗಳುಂಟು. ಗರ್ಭಕಟ್ಟಿದ ಸಮಯದಲ್ಲಿ ಒಂದೇ ಬಾರಿಗೆ ಎರಡು ತತ್ತಿಗಳು ಗರ್ಭಕಟ್ಟಿದರೆ ಬೇರೆ ಬೇರೆಯಾಗಿ ಎರಡು ಅವಳಿ ಮಕ್ಕಳು ಹುಟ್ಟುವುವು. ಇವರಿಬ್ಬರೂ ಗಂಡು ಮಕ್ಕಳಾಗಿರಬಹುದು, ಇಬ್ಬರೂ ಹೆಣ್ಣುಮಕ್ಕಳಾಗಿರಬಹುದು, ಇಲ್ಲವೆ ಒಂದು ಗಂಡು, ಮತ್ತೊಂದು ಹೆಣ್ಣುಮಗುವಾಗಿರಬಹುದು. ಈ

ಮಕ್ಕಳು ನಿಜವಾಗಿಯೂ ಒಂದೇ ಸಮಯದಲ್ಲಿ ಜನ್ಮತಾಳಿದ ಸಹೋದರರು. ಇವರಿಗೂ ಬೇರೆ ಅಣ್ಣತಮ್ಮಂದಿರಿಗೂ ಇದೇ ವ್ಯತ್ಯಾಸ. ಬೇರೆ ಸಹೋದರರು ಬೇರೆ ಬೇರೆ ಸಮಯದಲ್ಲಿ ಜನ್ಮವೆತ್ತುವರು. ಇವರಾದರೋ ಒಂದೇ ಸಮಯದಲ್ಲಿ ಜನ್ಮತಾಳಿದವರಾಗಿರುವರು. ಆದುದರಿಂದ ಹುಟ್ಟುಗುಣಗಳಲ್ಲಿ ಇಬ್ಬರು ಸಹೋದರರಲ್ಲಿ ಎಷ್ಟು ತಾರತಮ್ಯವಿರುವುದೋ ಅಷ್ಟರವುಟ್ಟಿನ ತಾರತಮ್ಯವು ಈ ಅವಳಿ ಮಕ್ಕಳಲ್ಲಿರುವುದು.

ಆದರೆ ಕೆಲವು ಸಮಯಗಳಲ್ಲಿ ಒಂದೇ ತರಹದ ಲಕ್ಷಣಗಳನ್ನುಳ್ಳ ಅವಳಿ ಮಕ್ಕಳು ಹುಟ್ಟುವರು. ಇವರಲ್ಲಿ ವ್ಯತ್ಯಾಸವನ್ನು ಕಂಡು ಹಿಡಿಯುವುದು ಬಹಳ ಕಷ್ಟ. ಇದಕ್ಕೆ ಕಾರಣವೇನೆಂದರೆ ಒಂದು ಗರ್ಭಕಟ್ಟಿದ ತತ್ತಿ ಬೆಳೆದು ಎರಡು ಮರಿಕಣಗಳಾಗುವುವು. ಸಾಧಾರಣವಾಗಿ ಒಂದು ಕಣವು ಮಗುವಿನ ಶರೀರದ ಬಲಭಾಗವಾಗಿಯೂ ಇನ್ನೊಂದು ಎಡಭಾಗವಾಗಿಯೂ ಆಗಿ ಬೆಳೆಯುವುದು. ಆದರೆ ಬಹಳ ಅಪರೂಪವಾಗಿ ಈ ಎರಡು ಮರಿಕಣಗಳೂ ಬೇರೆ ಬೇರೆಯಾಗಿ ಹೋಗುವುವು. ಆಗ ಒಂದೊಂದು ಮರಿಕಣವೂ ಒಂದೊಂದು ಮಗುವಾಗಿ ಬೆಳೆಯುವುದು. ಇಲ್ಲಿ ನಾವು ಗಮನಿಸಬೇಕಾದ ಸಂಗತಿ ಏನೆಂದರೆ, ಈ ಎರಡು ಮಕ್ಕಳೂ ಒಂದೇ ತತ್ತಿಯ ವಿಭಾಗದಿಂದ ಹುಟ್ಟಿರುವರು. ಆದುದರಿಂದ ಆ ಒಂದು ತತ್ತಿಯೊಳಗಿದ್ದ ವರ್ಣರೇಖೆಗಳೊಂದೊಂದೂ ಸಮಭಾಗವಾಗಿ ಸೀಳಿ[1] ಈ ಎರಡು ಮರಿಕಣಗಳಲ್ಲಿ ಸೇರಿರುವುದರಿಂದ ಈ ಎರಡು ಮಕ್ಕಳೂ ಒಂದೇ ರೀತಿಯ ಜೀನುಗಳ ಸೇರುವಿಕೆಯಿಂದ ಉಂಟಾಗಿರುವರು. ಇವರಿಬ್ಬರ ಹುಟ್ಟುಗುಣಗಳಲ್ಲಿ ಯಾವ ವ್ಯತ್ಯಾಸವಿರುವುದೂ ಅಸಾಧ್ಯ. ಇವು ಅನನ್ಯ ಅವಳಿ ಮಕ್ಕಳು. ಇಬ್ಬರೂ ಗಂಡು ಮಕ್ಕಳಾಗಿರಬೇಕು. ಇಲ್ಲವೇ ಇಬ್ಬರೂ ಹೆಣ್ಣುಮಕ್ಕಳಾಗಿರಬೇಕು. ಸಾಮಾನ್ಯ ಅವಳಿ ಮಕ್ಕಳ ಹಾಗೆ ಒಂದು ಗಂಡು ಮತ್ತೊಂದು ಹೆಣ್ಣಾಗುವುದು ಅಸಾಧ್ಯ.

---

1. ೩೧ನೇ ಪುಟ ನೋಡಿ

ಸಾಧಾರಣವಾಗಿ ಈ ಅನನ್ಯ ಅವಳಿ ಮಕ್ಕಳು ಒಂದೇ ತತ್ತಿಯಿಂದ ಉದ್ಭವಿಸಿ, ತಾಯಿಯ ಹೊಟ್ಟೆಯೊಳಗೆ ಒಂದೇ ಸಮಯದಲ್ಲಿ ಬೆಳೆದು, ಅನಂತರ ಒಂದೇ ಮನೆಯಲ್ಲಿ ವಾಸಿಸುವರು. ಇವರಲ್ಲಿ ನೈತಿಕ ಮಾನಸಿಕ ಲಕ್ಷಣಗಳಲ್ಲಿ ಅಷ್ಟೊಂದು ತಾರತಮ್ಯಗಳು ಕಂಡುಬರುವುದಿಲ್ಲ. ಇದರಿಂದಲೇ ಒಬ್ಬನನ್ನು ನೋಡಿ ಅವನು ಮತ್ತೊಬ್ಬನೆಂದು ಭ್ರಮೆಗೊಳ್ಳುತ್ತೇವೆ.

ಅಪರೂಪವಾಗಿ ಕೆಲವು ಸಂದರ್ಭಗಳಲ್ಲಿ ಕಾರಣಾಂತರಗಳಿಂದ ಈ ಅನನ್ಯ ಅವಳಿ ಮಕ್ಕಳು ಬೇರೆ ಬೆಳೆಯಬಹುದು. ಬೇರೆ ಊರುಗಳಲ್ಲಿ, ಬೇರೆ ಬೇರೆ ಕುಟುಂಬಗಳಲ್ಲಿ ಬೆಳೆಯಬಹುದು. ಇವರು ಬೇರೆ ಬೇರೆ ಸನ್ನಿವೇಶಗಳಲ್ಲಿ ಬೆಳೆದರೂ, ಅವರ ಬುದ್ಧಿಶಕ್ತಿ, ನೈತಿಕ ಗುಣಗಳು ಒಂದೇ ಆಗಿರುವುವೆಂದು ಕೆಲವು ವೈಜ್ಞಾನಿಕರು ವಾದಿಸಿದರು. ಆನುವಂಶಿಕ ನಿಯಮಗಳು ಮನುಷ್ಯನ ಮಾನಸಿಕ ಗುಣಗಳಲ್ಲಿ ಯಾವ ವಿಧದಲ್ಲಿ ಕೆಲಸಮಾಡುವುವೆಂದು ಪರೀಕ್ಷಿಸುವುದಕ್ಕೋಸ್ಕರ ಈ ಅವಳಿ ಮಕ್ಕಳಲ್ಲಿ ಸಂಶೋಧನೆಗಳನ್ನು ಈಚೀಚೆಗೆ ಹೆಚ್ಚಾಗಿ ನಡಸಿರುವರು.

ಅನನ್ಯ ಅವಳಿ ಮಕ್ಕಳು ಹುಟ್ಟಿದಂದಿನಿಂದ ಒಂದೇ ಮನೆಯಲ್ಲಿ ಬೆಳೆದಿದ್ದರೆ ಅವರ ಮಾನಸಿಕ ಗುಣಗಳು ಯಾವ ರೀತಿ ಹೋಲುವುವು ಎಂಬುದನ್ನು ಪರೀಕ್ಷಿಸಿರುವರು. ಇವರಲ್ಲಿ ಮೊದಲ ಗುಂಪಿನ ಮಕ್ಕಳು ಒಂದೇ ಆನುವಂಶಿಕ ಪ್ರಕೃತಿಯನ್ನು ಪಡೆದು, ಒಂದೇ ಆವರಣದಲ್ಲಿ ಬೆಳೆದರೆ ಅವರ ಗುಣಗಳಲ್ಲಿ ಕಂಡುಬರುವ ತಾರತಮ್ಯಗಳೇನು? ಮತ್ತೊಂದು ಗುಂಪಿನ ಮಕ್ಕಳು, ಅತಿ ಚಿಕ್ಕವಯಸ್ಸಿನಲ್ಲಿಯೇ, ಅಂದರೆ, ಹುಟ್ಟಿದ ಒಂದು ವರ್ಷದೊಳಗೆ, ಬೇರೆ ಮನೆಗಳಲ್ಲಿ ಬೆಳೆದರೆ ಅವರ ಗುಣಗಳಲ್ಲಿ ಏನು ಅಂತರ? ಎಂಬುದನ್ನು ಕಂಡುಹಿಡಿಯಲು ಅಮೆರಿಕ, ಇಂಗ್ಲೆಂಡ್ ಮತ್ತು ರಷ್ಯಾದೇಶಗಳಲ್ಲಿ ಅನೇಕ ಸಂಶೋಧನೆಗಳು ನಡೆದಿವೆ.

ಸಾಧಾರಣ ಅವಳಿ ಮಕ್ಕಳು ಬೇರೆ ಬೇರೆ ತತ್ತಿಗಳಿಂದ ಉತ್ಪನ್ನವಾದ ಕಾರಣ ಅವರ ಹುಟ್ಟುಗುಣಗಳಲ್ಲಿ ವ್ಯತ್ಯಾಸಗಳಿರುವುವು.

ಹಾಗಿದ್ದರೂ, ತಾಯಿಯ ಹೊಟ್ಟೆಯಲ್ಲಿ ಒಂದೇ ಕಾಲದಲ್ಲಿ ಬೆಳೆದು, ಒಂದೇ ಮನೆತನದಲ್ಲಿ ದೊಡ್ಡವರಾದರೆ ಅವರಲ್ಲಿ ಎಷ್ಟು ಅಂತರವಿರುವುದು ಎಂಬುದನ್ನು ನೋಡಲಾಗಿದೆ.

ಈ ಸಂಶೋಧನೆಗಳನ್ನೆಲ್ಲಾ ನಡೆಸಿದ ನ್ಯೂಮನ್ ಫ್ರೀಮನ್ ಮತ್ತು ಹೋಲ್ಜಿಂಗರ್ ಇವರು ಕಂಡುಹಿಡಿದಿರುವ ಮುಖ್ಯಾಂಶಗಳನ್ನು ಕೆಳಗಿನ ಪಟ್ಟಿಯಲ್ಲಿ ತೋರಿಸಲಾಗಿದೆ

## ಪಟ್ಟಿ ೧.

## ಅವಳಿ ಮಕ್ಕಳ ಅಂತರದ ಸರಾಸರಿ

| ಗುಣ | ಅನನ್ಯ ಅವಳಿ ಒಟ್ಟಿಗೆ ಬೆಳೆವದ್ದು | ಅನನ್ಯ ಅವಳಿ ಬೇರೆ ಬೇರೆ ಬೆಳೆದದ್ದು | ಸಾಧಾರಣ ಅವಳಿ ಒಟ್ಟಿಗೆ ಬೆಳೆದದ್ದು |
|---|---|---|---|
| ಎತ್ತರ | ೦·೬೫'' | ೦·೭'' | ೧ ೭'' |
| ತೂಕ | ೪·೧ ಪೌಂ | ೯·೯ ಪೌಂ | ೧೦·೦ ಪೌಂ |
| ಐ. ಕ್ಯೂ. | ೫·೯ | ೮ ೨ | ೯·೯ |
| ವಿದ್ಯಾಯು | ೬·೪ ತಿಂಗಳು | ೧೬·೩ ತಿಂಗಳು | ೧೧·೬ ತಿಂಗಳು |

ಈ ಮೇಲಿನ ಅಂಕಿಗಳನ್ನು ಒಂದು ಅವಳಿಯ ವ್ಯಕ್ತಿಗೂ ಮತ್ತೊಂದು ವ್ಯಕ್ತಿಗೂ ನಾಲ್ಕು ಲಕ್ಷಣಗಳಲ್ಲಿ ಇರುವ ವ್ಯತ್ಯಾಸವನ್ನು ಅಳತೆಮಾಡಿ ಪಡೆದಿರುವರು. ಮೊದಲು ಎತ್ತರವನ್ನು ತೆಗೆದುಕೊಂಡರೆ ಅನನ್ಯ ಅವಳಿ ಮಕ್ಕಳು ಒಟ್ಟಿಗೆ [1]ಬೆಳೆದರೂ, ಬೇರೆ ಬೇರೆಯಾಗಿ ಬೆಳೆದರೂ ಒಂದೇ ರೀತಿಯಾಗಿರುವುದು. ಅಂದರೆ ಈ ಲಕ್ಷಣವು ಆವರಣದ ಪ್ರಭಾವಕ್ಕೆ ಒಳಪಟ್ಟಿಲ್ಲ ಎಂದು ಸ್ಪಷ್ಟಪಡುವುದು. ಸಾಧಾರಣ ಅವಳಿ ಮಕ್ಕಳು ಒಂದೇ ಮನೆಯಲ್ಲಿ ಬೆಳೆದರೂ ಬೇರೆ ಬೇರೆ ಅನುವಂಶಿಕ ಪ್ರಕೃತಿಯುಳ್ಳವರಾದುದರಿಂದ ಅವರಲ್ಲಿ ಎತ್ತರದಲ್ಲಿ ೨॥ ಯಷ್ಟು

1. ಅತಿ ಚಿಕ್ಕವಯಸ್ಸಿನಲ್ಲಿ ಬೇರೆಯಾದ ಅನನ್ಯ ಅವಳಿ ಮಕ್ಕಳ ಪರೀಕ್ಷೆಯು ಬಹು ಮುಖ್ಯ. ಒಂದು ಮಗುವಿನ ಮೊದಲಿನ ೫ ವರ್ಷಗಳು, ಅದರಲ್ಲಿಯೂ ಮೊದಲಿನ ೨ ವರ್ಷಗಳು ಬೆಳವಣಿಗೆಗೆ ಬಹಳ ಮುಖ್ಯವಾದುವು. ಈ ವಿಷಯವು ಮುಂದಿನ ಅಧ್ಯಾಯಗಳಲ್ಲಿ ವಿಶದವಾಗುವುದು. ಬಾಲ್ಯಾವಸ್ಥೆಯನ್ನು ಜೊತೆಯಲ್ಲಿ ಕಳೆದು ಆಮೇಲೆ ಬೇರೆಯಾದರೆ ಆವರಣದ ಪ್ರಭಾವವು ಕಡಿಮೆ.

ವ್ಯತ್ಯಾಸವಿರುವುದು. ಎತ್ತರವು ಅನುವಂಶಿಕವೆಂಬುದನ್ನು ದೃಢೀಕರಿಸುತ್ತದೆ.

ಈಗ ತೂಕವನ್ನು ತೆಗೆದುಕೊಳ್ಳೋಣ. ತೂಕವು ಆನುವಂಶಿಕವಾದುದಲ್ಲವೆಂಬುದನ್ನು ಮೇಲಿನ ಅಂಕಿಗಳಿಂದ ನಾವು ಊಹಿಸಬಹುದು. ಒಂದೇ ತತ್ತಿಯಿಂದ ಉತ್ಪನ್ನವಾದರೂ, ಅನನ್ಯ ಅವಳಿ ಮಕ್ಕಳು ಒಂದೇ ಮನೆತನದಲ್ಲಿ ಬೆಳೆದರೆ ಅವರಲ್ಲಿ ತೂಕದ ವ್ಯತ್ಯಾಸವು ೪ ಪೌಂಡು ಮಾತ್ರವಿರುವುದು. ಆದರೆ ಬೇರೆ ಬೇರೆ ಮನೆಗಳಲ್ಲಿ ಬೆಳೆದರೆ ಆಗ ಇದಕ್ಕೆ ಎರಡರಷ್ಟಕ್ಕಿಂತಲೂ ಹೆಚ್ಚಾಗಿ ವ್ಯತ್ಯಾಸವು ಕಂಡುಬರುವುದು. ಆದರೆ ತೂಕವು ಆವರಣದ ಪ್ರಭಾವಕ್ಕೆ ಹೆಚ್ಚಾಗಿ ಒಳಪಟ್ಟಿರುವುದು. ಆಹಾರದ ವ್ಯತ್ಯಾಸದಿಂದ ಈ ವ್ಯತ್ಯಾಸವು ಉಂಟಾಗಿರಬಹುದು. ಮೂರನೆಯದಾಗಿ ಐ. ಕ್ಯೂ. ಅನ್ನು ತೆಗೆದುಕೊಳ್ಳೋಣ. ಐ. ಕ್ಯೂ ಎಂದರೆ ಬುದ್ಧಿಶಕ್ತಿಯ ಮಾನ. (ಇಂಟೆಲಿಜೆನ್ಸ್ ಕೋಷಂಟ್) ಮುಂದಿನ ಅಧ್ಯಾಯದಲ್ಲಿ[1] ವಿವರಿಸುವ ಹಾಗೆ ಬುದ್ಧಿಶಕ್ತಿಯನ್ನು ಅಳೆಯಲು ಈಗ ಎಷ್ಟೋ ಪರೀಕ್ಷಣಗಳು ಉಪಯೋಗದಲ್ಲಿವೆ. ಒಂದು ಮಗುವಿನ ಬುದ್ಧಿಶಕ್ತಿಯನ್ನು ಅಳೆದು ಫಲಿತಾಂಶವನ್ನು ಆ ಮಗುವಿನ ವಯಸ್ಸಿನಿಂದ ಭಾಗಾಹಾರಮಾಡಿ ಶೇಕಡ ಕಂಡು ಹಿಡಿದರೆ ಬರುವ ಸಂಖ್ಯೆಯೇ ಐ. ಕ್ಯೂ.

$$\text{ಐ. ಕ್ಯೂ.} = \frac{\text{ಬುದ್ಧಿಶಕ್ತಿಯ ವಯಸ್ಸು}}{\text{ಮಗುವಿನ ವಯಸ್ಸು}} \times ೧೦೦$$

ಗಾಲ್ಟನ್, ಕಾರ್ಲ್ ಪಿಯರ್ಸನ್ ಮುಂತಾದವರು ಆನುವಂಶಿಕ ಪರಿಶೋಧನೆಗಳನ್ನು ಮಾಡಿದ ಸಮಯದಲ್ಲಿ ಈ ರೀತಿಯ ಪರೀಕ್ಷಣಗಳಿರಲಿಲ್ಲ. ಅದರಿಂದಲೇ ಅವರ ಪರಿಶೋಧನೆಗಳ ಫಲಿತಾಂಶವು ದೋಷಯುಕ್ತವಾಯಿತು. ನ್ಯೂಮನ್ ಮುಂತಾದವರು ಈ ಪರೀಕ್ಷಣಗಳನ್ನು ನಡಸಿ ಬುದ್ಧಿಶಕ್ತಿಯನ್ನು ಅಳೆದಿರುವರು.

ಒಂದು ಮಗುವಿನಲ್ಲಿ ಐದು ವರ್ಷಗಳನಂತರ ಈ ಐ. ಕ್ಯೂ. ಒಂದೇ ಮಟ್ಟದಲ್ಲಿರುವುದು. ಅದು ಬದಲಾವಣೆಯನ್ನು ಹೊಂದುವು

1. ೮ನೆಯ ಅಧ್ಯಾಯವನ್ನು ನೋಡಿ.

ದಿಲ್ಲ. ಹತ್ತು ವರ್ಷ ವಯಸ್ಸಿನ ಮಗುವಿನ ಐ. ಕ್ಯೂ. ೧೦೦ ಪಾಯಿಂಟ್ ಎನ್ನೋಣ. ಈ ಹುಡುಗನಿಗೆ ಹನ್ನೆರಡು ವರ್ಷ ವಯಸ್ಸಾದಾಗ ಅವನ ಬುದ್ಧಿಶಕ್ತಿಯು ಬೆಳೆದರೂ ಅದು ವಯಸ್ಸಿನ ಬೆಳವಣಿಗೆಯನ್ನು ಹೊಂದಿಕೊಂಡಿರುವುದು. ಆದುದರಿಂದ ಈಗಲೂ ಅವನ ಐ. ಕ್ಯೂ. ೧೦೦ ಪಾಯಿಂಟುಗಳೇ ಆಗಿರುವುದು. ಅದರಿಂದಲೇ ಬುದ್ಧಿಶಕ್ತಿಯು ಆನುವಂಶಿಕವಾದುದೆಂದು ಕೆಲವರು ವಾದಿಸುವರು.

ಈಗ ನಾವು ಅವಳಿ ಮಕ್ಕಳಲ್ಲಿ ಬುದ್ಧಿಶಕ್ತಿಯಲ್ಲಿರುವ ತಾರತಮ್ಯಗಳನ್ನು ಪರಿಶೀಲಿಸೋಣ. ಒಟ್ಟಿಗೆ ಇರುವ ಅನನ್ಯ ಮಕ್ಕಳ ಐ. ಕ್ಯೂ. ವಿನ ಅಂತರವು ೫.೯ ಪಾಯಿಂಟುಗಳು. ಎರಡು ತತ್ತಿಗಳಿಂದ ಉತ್ಪನ್ನವಾದ ಸಾಧಾರಣ ಅವಳಿ ಮಕ್ಕಳಲ್ಲಿ, ಇವರು ಜೊತೆಯಲ್ಲಿಯೇ ಬೆಳೆದರೂ ಐ. ಕ್ಯೂ. ವಿನ ಅಂತರವು ೯.೯ ಪಾಯಿಂಟುಗಳು, ಸುಮಾರು ಎರಡರಷ್ಟಿದೆ. ಇದರಿಂದ ನಮಗೆ ಗೊತ್ತಾಗುವುದೇನೆಂದರೆ, ಆನುವಂಶಿಕ ಪ್ರಕೃತಿಯು ಒಂದೇ ಆಗಿ ಮಕ್ಕಳಿಬ್ಬರೂ ಒಂದೇ ಮನೆತನದಲ್ಲಿ ಬೆಳೆದರೆ ಅವರ ಬುದ್ಧಿಶಕ್ತಿಯ ಅಂತರವು ಕಡಿಮೆಯಾಗಿರುವುದು. ಒಂದೇ ಮನೆತನದಲ್ಲಿ ಬೆಳೆದರೂ, ಆನುವಂಶಿಕ ಪ್ರಕೃತಿಯು ಬೇರೆಯಾದರೆ ಅವರ ಬುದ್ಧಿಶಕ್ತಿಯ ಅಂತರವು ಹೆಚ್ಚಾಗಿರುವುದು. ಈ ಎರಡು ವಿಧವಾದ ಅವಳಿ ಮಕ್ಕಳ ಹೋಲಿಕೆಯಿಂದ ಬುದ್ಧಿಶಕ್ತಿ ಆನುವಂಶಿಕ ಪ್ರಕೃತಿಯಿಂದ ಜನಿತವಾದುದೆಂದು ನಮಗೆ ತೋರುವುದು.

ಈಗ ಒಟ್ಟಿಗೆ ಬೆಳೆದ ಅನನ್ಯ ಅವಳಿ ಮಕ್ಕಳಿಗೂ, ಬೇರೆ ಬೇರೆ ಮನೆಗಳಲ್ಲಿ ಬೆಳೆದ ಅನನ್ಯ ಅವಳಿ ಮಕ್ಕಳಿಗೂ ಬುದ್ಧಿಶಕ್ತಿಯಲ್ಲಿರುವ ಅಂತರವನ್ನು ಪ್ರಸ್ತಾಪಿಸೋಣ. ಒಟ್ಟಿಗೆ ಬೆಳೆದರೆ ಅವರ ಅಂತರವು ೫.೯ ಪಾಯಿಂಟುಗಳು. ಬೇರೆ ಬೇರೆ ಮನೆಗಳಲ್ಲಿ ಬೆಳೆದರೆ ಅಂತರವು ೮.೨ ಪಾಯಿಂಟ್—ಅಂದರೆ ಸುಮಾರು ಒಂದೂವರೆಯಷ್ಟಿದೆ. ಬುದ್ಧಿಶಕ್ತಿಯು ಪೂರ್ಣವಾಗಿ ಆನುವಂಶಿಕ ಜನಿತವಾಗಿದ್ದಲ್ಲಿ ಈ ಅಂತರವು ಇರುತ್ತಲೇ ಇರಲಿಲ್ಲ. ಬುದ್ಧಿಶಕ್ತಿಯ ಮೇಲೆ ಆವರಣದ ಪ್ರಭಾವವು ಇರುವುದೆಂದು ಈ ವ್ಯತ್ಯಾಸವು ತೋರಿಸುತ್ತದೆ. ನ್ಯೂಮನ್ ಮುಂತಾದವರು ಅದೇ ಗ್ರಂಥದಲ್ಲಿ ಆವರಣವನ್ನು ಮೂರು ವಿಧವಾಗಿ ಭಾಗಿಸಿ

ರುವರು. ಭೌತಿಕ ವಾತಾವರಣ, ಎಂದರೆ ಆ ಊರಿನ ಎತ್ತರ, ಶೀತೋಷ್ಣ ಮುಂತಾದುವು. ಎರಡನೆಯದು ಸಾಮಾಜಿಕ ಆವರಣ, ಎಂದರೆ ಆ ಮನೆತನದ ನಡೆನುಡಿ, ಆರ್ಥಿಕಸ್ಥಿತಿ, ಇತ್ಯಾದಿ. ಮೂರನೆಯದಾಗಿ ವಿದ್ಯೆಯ ಆವರಣ, ಎಂದರೆ ಆ ಮನೆತನದವರ ಓದು ಬರೆಹದ ಮಟ್ಟ, ಶಾಲೆಯ ಸನ್ನಿವೇಶ, ಮನೆಯಲ್ಲಿ ಪುಸ್ತಕ, ವರ್ತಮಾನ ಪತ್ರಿಕೆಗಳ ಬಳಕೆ ಮುಂತಾದುವು. ಒಂದೊಂದು ಹುಡುಗನ ಆವರಣವೂ ಯಾವ ರೀತಿಯದೆಂದು ಅವರು ಕಂಡುಹಿಡಿದರು. ಒಂದೊಂದು ಮಗುವಿನ ಸಾಮಾಜಿಕ ಆವರಣದ ಸ್ಥಿತಿಗೂ, ಅವನ ಐ. ಕ್ಯೂ. ವಿಗೂ ಇರುವ ಸಂಬಂಧವನ್ನು ಕಂಡುಹಿಡಿದರೆ ೦.೫೦೭ ಎಂದು ತಿಳಿಯ ಬಂದಿತು. ವಿದ್ಯೆಯ ಆವರಣದ ಸ್ಥಿತಿಗೂ, ವಿದ್ಯಾಯುವಿಗೂ ೦.೭೯೧ ಸಂಬಂಧವಿದೆಯೆಂದು ಗೊತ್ತಾಯಿತು. ಅಂದರೆ ಮಗುವು ಬೆಳೆಯುವ ಸಾಮಾಜಿಕ ಸ್ಥಿತಿ ಮತ್ತು ಆ ಮನೆತನದ ವಿದ್ಯೆಯ ಮಟ್ಟ ಇವುಗಳಿಗೂ ಆ ಮನೆಯಲ್ಲಿ ಬೆಳೆಯುತ್ತಿರುವ ಮಕ್ಕಳ ಬುದ್ಧಿಶಕ್ತಿಗೂ ನಿಕಟ ಸಂಬಂಧ ವಿರುವುದೆಂದು ತಿಳಿದುಬಂದಿತು.

ಈ ಪ್ರಯೋಗವು ಬುದ್ಧಿಶಕ್ತಿಗೂ, ಆವರಣಕ್ಕೂ ಇರುವ ಸಂಬಂಧ ವನ್ನು ನಮಗೆ ತೋರಿಸಿಕೊಡುವುದು. ಒಂದೇ ತತ್ತಿಯಿಂದ ಉತ್ಪನ್ನ ವಾದರೂ ಅನನ್ಯ ಅವಳಿ ಮಕ್ಕಳು ಬೇರೆ ಬೇರೆ ಸಾಮಾಜಿಕ ಆರ್ಥಿಕ ಮತ್ತು ವಿದ್ಯಾಸಂಬಂಧವಾದ ಆವರಣಗಳಲ್ಲಿ ಬೆಳೆದರೆ ಅವರ ಬುದ್ಧಿಶಕ್ತಿ ಯಲ್ಲಿ ಹೆಚ್ಚಿನ ವ್ಯತ್ಯಾಸವು ತೋರಿಬರುವುದು.

ಒಬ್ಬ ಹುಡುಗನು ಶಾಲೆಯಲ್ಲಿ ತೇರ್ಗಡೆಹೊಂದುತ್ತಿರುವ ಮಟ್ಟ ವನ್ನು ಹೊಸ ಪರೀಕ್ಷಣಗಳಿಂದ ಕಂಡುಹಿಡಿದು ಅವನ ವಿದ್ಯಾಯು ವನ್ನು ಈಗ ನಿರ್ಧರಿಸಲು ಸಾಧ್ಯ. ಈ ವಿದ್ಯಾಯುವಿನಲ್ಲಿ ಒಟ್ಟಿಗಿರುವ ಅನನ್ಯ ಅವಳಿ ಮಕ್ಕಳ ಅಂತರವು ಬಹಳ ಕಡಿಮೆ—ಕೇವಲ ೬ ತಿಂಗಳು ಮಾತ್ರ. ಆದರೆ ಇವರ ಆನುವಂಶಿಕ ಪ್ರಕೃತಿಯು ಒಂದೇ ಆದರೂ, ಅವರು ಬೇರೆ ಬೇರೆ ಮನೆತನಗಳಲ್ಲಿ ಬೆಳೆದರೆ ಅವರ ಅಂತರವು ೧೬ ತಿಂಗಳಿಗೆ ಹೆಚ್ಚುವುದು. ಅಂದರೆ ೨॥ ಯಷ್ಟು ಅಧಿಕವಾಗಿರುವುದು. ಆದುದರಿಂದ ಒಂದು ಮಗುವಿನ ಹುಟ್ಟುಗುಣವು ಏನಾ

ದರೂ ಸರಿಯೆ, ಅದಕ್ಕೆ ತಕ್ಕಷ್ಟು ವಿದ್ಯಾಭ್ಯಾಸದ ಅನುಕೂಲ್ಯಗಳನ್ನು ಕಲ್ಪಿಸಿಕೊಡದೆ ಹೋದರೆ ಆದರೆ ವಿದ್ಯಾಯುವು ಹೆಚ್ಚಲಾರದು.

ಈ ಪರಿಶೋಧನದ ಮುಖ್ಯಾಂಶಗಳೇನೆಂದರೆ :—ಬೇರೆ ಬೇರೆ ಅನುವಂಶಿಕ ಪ್ರಕೃತಿಯಿಂದ ಜನಿತವಾದಮಕ್ಕಳು ಒಂದೇ ಆವರಣ ದಲ್ಲಿ ಬೆಳೆದರೂ ವ್ಯತ್ಯಾಸಗಳನ್ನು ತೋರಿಸುವರು. ಒಂದೇ ಅನು ವಂಶಿಕ ಪ್ರಕೃತಿಯಿಂದ ಜನಿತವಾದ ಮಕ್ಕಳು, ಬೇರೆ ಬೇರೆ ಆವರಣಗಳಲ್ಲಿ ಬೆಳೆದರೆ ಆಗಲೂ ವ್ಯತ್ಯಾಸಗಳನ್ನು ತೋರಿಸುವರು. ಆದುದರಿಂದ ಒಬ್ಬ ಮನುಷ್ಯನ ಗುಣಗಳು ಅನುವಂಶಿಕವಾದರೂ ಅವು ಆವರಣದ ಪ್ರಭಾವಕ್ಕೆ ಒಳಪಡುವುವು. ನಾವು ಸುಮ್ಮನೆ ಈ ಗುಣ ಅನುವಂಶಿಕವಾದುದು, ಆ ಗುಣ ಆವರಣದಿಂದುಂಟಾದುದು ಎಂದು ಹೇಳಿದರೆ ಈ ಮಾತುಗಳಿಗೆ ಅರ್ಥವಿಲ್ಲ. ಯಾವ ಗುಣವೇ ಸರಿ, ಅದು ಚೆನ್ನಾಗಿ ವಿಕಾಸಹೊಂದಬೇಕಾದರೆ ಅನುವಂಶಿಕ ತಳಹದಿಯೂ ಇರಬೇಕು, ಆವರಣದ ಪ್ರೋತ್ಸಾಹವೂ ಇರಬೇಕು. ನಾವು ಎಷ್ಟೋ ಹಣ ವೆಚ್ಚಮಾಡಿ, ಒಳ್ಳೆಯ ಬೀಜಗಳನ್ನು ತಂದು, ಬಂಜರು ಭೂಮಿ ಯಲ್ಲಿ ಹಾಕಿ ಅದು ಒಳ್ಳೆಯ ಫಲವನ್ನು ಬಿಡುವುದಿಲ್ಲವೆಂದರೆ ಇದಕ್ಕೆ ಯಾರುತಾನೆ ಏನು ಮಾಡಲಾದೀತು? ಅಥವಾ ಯಾವುದೋ ಒಂದು ಕೆಲಸಕ್ಕೆ ಬಾರದ ಬೀಜವನ್ನು ತಂದು, ಒಳ್ಳೆಯ ಶ್ರೇಷ್ಠವಾದ ಭೂಮಿ ಯಲ್ಲಿ ನೆಟ್ಟು, ಮೇಲ್ತರದ ಗೊಬ್ಬರವನ್ನು ಕೊಟ್ಟು, ವ್ಯವಸಾಯ ಮಾಡಿ, ಬೆಳೆಯು ಚೆನ್ನಾಗಿ ಆಗಲಿಲ್ಲ ಎಂದರೆ ಅದಕ್ಕೆ ಹೊಣೆ ಯಾರು?

## ಅಭ್ಯಾಸವು ಅನುವಂಶಿಕವೇ?

ಸಾಧಾರಣವಾಗಿ ಅಭ್ಯಾಸಗಳು ಅನುವಂಶಿಕವೆಂದು ನಂಬು ತ್ತೇವೆ. ಹಲವಾರು ತಲೆಮಾರುಗಳಿಂದ ಒಂದು ಕೆಲಸವನ್ನು ಒಂದು ಕುಟುಂಬವು ಮಾಡುತ್ತಾಬಂದರೆ, ಆ ಕೆಲಸದಲ್ಲಿ ಆ ಕುಟುಂಬದ ಜನ ರೆಲ್ಲರೂ ನಿಪುಣರಾಗುವರೆಂದು ನಾವು ನಂಬುತ್ತೇವೆ. ಈ ಪ್ರಶ್ನೆಯು ಜೀವನಶಾಸ್ತ್ರದಲ್ಲಿ ತೀವ್ರವಾದ ತರ್ಕಕ್ಕೆ ಕಾರಣವಾಗಿರುವುದು. ಇದನ್ನು ಸ್ಥಾಪಿಸಲು ನೂರಾರು ಪ್ರಯೋಗಗಳನ್ನು ನಡಸಿದರು. ಸದ್ಯದಲ್ಲಿ ಬಹು ಮತದ ಅಭಿಪ್ರಾಯವೇನೆಂದರೆ—ಅಭ್ಯಾಸಗಳು ಅನುವಂಶಿಯಲ್ಲ.

ಯಾವ ಪ್ರಾಣಿಯೇ ಆಗಲಿ ಉತ್ಪನ್ನವಾಗುವುದು ಗರ್ಭ ಕಟ್ಟಿದ ತತ್ತಿಯೊಂದರಿಂದಲೇ ; ಯಾವ ಜೀವಿಯೇ ಸರಿ ಒಂದು ಜೀವಾಣುವಿನಿಂದಲೇ ತನ್ನ ಬದುಕನ್ನು ಪ್ರಾರಂಭಿಸುವುದು. ಅಭ್ಯಾಸಗಳ ಪರಿಣಾಮವು ಆನುವಂಶಿಕವಾಗಬೇಕಾದರೆ, ಈ ಪ್ರಜನನ ಜೀವಕಣಗಳಲ್ಲಿ ಪರಿವರ್ತನೆಯನ್ನುಂಟುಮಾಡಬೇಕು. ಈ ಸಿದ್ಧಾಂತವನ್ನು ನಾವು ಸ್ಪಷ್ಟವಾಗಿ ತಿಳಿದಿರಬೇಕು. ಇಲ್ಲದಿದ್ದರೆ ಅನೇಕ ತಪ್ಪು ಅಭಿಪ್ರಾಯಗಳಿಗೆ ಅವಕಾಶವಾಗುವುದು.

ಲಾಮಾರ್ಕ್ ಎಂಬ ಫ್ರೆಂಚ್ ವೈಜ್ಞಾನಿಕನು ಜೀವನ ವಿಕಾಸ (ಎವೊಲ್ಯೂಷನ್)ಕ್ಕೆ ಈ ಅಭ್ಯಾಸದ ಆನುವಂಶೀಯತೆಯೇ ಕಾರಣವೆಂದು ವಾದಿಸಿದನು. ಇದಕ್ಕೆ ಉದಾಹರಣೆಯಾಗಿ, ಜಿರಾಫೆಗಳು ಅಭ್ಯಾಸ ಬಲದಿಂದ ತಮ್ಮ ಕತ್ತನ್ನು ಉದ್ದವಾಗಿ ಪರಿವರ್ತಿಸಿಕೊಂಡಿವೆ ಎಂದು ಹೇಳಿದನು. "ಒಂದಾನೊಂದು ಕಾಲದಲ್ಲಿ ಜಿಂಕೆಗಳಿಗೆ ಭೂಮಿಯ ಮೇಲೆ ಹುಲ್ಲು ಸಿಕ್ಕದ ಕಾರಣ ತಮ್ಮ ಕತ್ತನ್ನೆತ್ತಿ ತಮಗೆ ಎಟುಕುವ ಮರದ ಎಲೆಗಳನ್ನು ತಿನ್ನತೊಡಗಿದುವು. ಆ ಎತ್ತರದ ಎಲೆಗಳು ಮುಗಿದ ಮೇಲೆ ಇನ್ನೂ ಎತ್ತರದಲ್ಲಿರುವ ಎಲೆಗಳನ್ನು ತಿನ್ನಲು ಪ್ರಯತ್ನಿಸಿದುವು. ಅವುಗಳ ಮರಿಗಳು ತಮ್ಮ ತಾಯಿತಂದೆಗಳಿಗಿಂತ ಎತ್ತರವಾಗಿ ನೀಡುವ ಕತ್ತನ್ನು ಪಡೆದುವು. ಈ ರೀತಿ ನೂರಾರು, ಸಾವಿರಾರು ತಲೆಮಾರುಗಳನಂತರ ನಾವು ಇಂದಿನ ಜಿರಾಫೆಯನ್ನು ನೋಡುತ್ತೇವೆ" ಇದು ಆತನ ಮತ. ಸುಪ್ರಸಿದ್ಧ ವೈಜ್ಞಾನಿಕನಾದ ಡಾರ್ವಿನ್ ಸಹ ಈ ಮತದಲ್ಲಿ ಸ್ವಲ್ಪ ಸತ್ಯಾಂಶವಿದೆ ಎಂದು ನಂಬಿದ್ದನು. ವೈಸ್‌ಮಾನ್ ಎಂಬಾತನು ಈ ವಾದವನ್ನು ವಿರೋಧಿಸಿ ಅಭ್ಯಾಸಗಳು ಎಂದಿಗೂ ಆನುವಂಶಿಕವಾದುವಲ್ಲವೆಂದು ಹೇಳಿದನು. ಈತನು ಒಂದು ಸುಪ್ರಸಿದ್ಧ ಪ್ರಯೋಗವನ್ನು ಸಹ ನಡಸಿದನು. ಇಪ್ಪತ್ತೆರಡು ತಲೆಮಾರುಗಳು ಇಲಿಗಳ ಬಾಲಗಳನ್ನು ಕತ್ತರಿಸಿ ಬಾಲವಿಲ್ಲದ ಅಥವಾ ಮೊಂಡುಬಾಲದ ಇಲಿಗಳು ಹುಟ್ಟುತ್ತವೆಯೇ ಎಂದು ಪರೀಕ್ಷಿಸಿದನು. ಇಪ್ಪತ್ತೆರಡು ತಲೆಮಾರುಗಳವರೆಗೆ ಬಾಲವನ್ನು

ಕತ್ತರಿಸುತ್ತ ಬಂದನು; ಕಡೆಗೂ ಇಲಿಗಳು ಬಾಲಸಹಿತವಾಗಿಯೇ ಹುಟ್ಟಿದುವು!

ನೂರಾರು ತಲೆಮಾರುಗಳಿಂದ ಕೆಲವು ಜಾತಿಯ ನಾಯಿಗಳ ಬಾಲಗಳನ್ನು ಕತ್ತರಿಸುತ್ತ ಬಂದರೂ, ಮರಿಗಳ ಬಾಲದ ಉದ್ದವು ಸ್ವಲ್ಪವೂ ಕಡಿಮೆಯಾಗಲಿಲ್ಲವೆಂದು ನಮ್ಮೆಲ್ಲರಿಗೂ ಗೊತ್ತಿರುವವಿಷಯ. ಚೀಣಾ ದೇಶದಲ್ಲಿ ಸಾವಿರಾರು ವರ್ಷಗಳಿಂದ ಹೆಂಗಸರ ಕಾಲುಗಳನ್ನು ಕಟ್ಟಿ ಸೌಂದರ್ಯಕ್ಕಾಗಿ ಚಿಕ್ಕದಾಗಿ ಮಾಡಿದರೂ ಹುಟ್ಟಿದ ಮಗುವಿನ ಕಾಲು ಮಾತ್ರ ಸ್ವಭಾವಸಿದ್ಧವಾದ ಪ್ರಮಾಣದಲ್ಲಿಯೇ ಇರುವುದು. ನಮ್ಮ ದೇಶದಲ್ಲಿ ಸಾವಿರಾರು ವರ್ಷಗಳಿಂದ ಕಿವಿ ಚುಚ್ಚಿದರೂ ರಂಧ್ರ ವನ್ನುಳ್ಳ ಕಿವಿಗಳೊಡನೆ ಮಕ್ಕಳು ಹುಟ್ಟಿಲ್ಲವಷ್ಟೆ!

ಭಾಷೋಚ್ಚಾರಣೆಯು ಆನುವಂಶಿಕವಾದುದೆಂದು ಕೆಲವರು ಭಾವಿಸುವರು. ವಂಗದೇಶದವರ ಉಚ್ಚಾರಣೆ, ಮಲೆಯಾಳದೇಶ ದವರ ಉಚ್ಚಾರಣೆ, ನಮ್ಮ ಹಳ್ಳಿ ಜನರ ಉಚ್ಚಾರಣೆ ಇವುಗಳನ್ನು ಎಷ್ಟು ತಿದ್ದಿದರೂ 'ನಾಯಿ ಬಾಲ ಡೊಂಕು' ಎಂಬಂತೆ ಬದಲಾಯಿಸು ವುದಿಲ್ಲ ಎಂದು ಹೇಳುವರು. ಇದಕ್ಕೆ ಕಾರಣ ಆನುವಂಶಿಕವಲ್ಲ. ಆ ಮಕ್ಕಳು ಚಿಕ್ಕಂದಿನಲ್ಲಿ ಅಭ್ಯಸಿಸುವ ಉಚ್ಚಾರಣೆಯ ವೈಚಿತ್ರ್ಯ. ಹಳ್ಳಿಯ ಕುಟುಂಬದವರು ಪಟ್ಟಣಕ್ಕೆ ಬಂದು ಸುಸಂಸ್ಕೃತರ ಮಧ್ಯೆ ನೆಲಸಿದಮೇಲೆ ಅವರ ಮಕ್ಕಳ ಉಚ್ಚಾರಣೆಯು ಪಟ್ಟಣಿಗರ ಉಚ್ಚಾ ರಣೆಯಂತೆಯೇ ಇರುವುದೆಂಬುದನ್ನು ನಾವೆಲ್ಲರೂ ಬಲ್ಲೆವು.

ಬಲ್ಲವರು ಸಹ ಇನ್ನೊಂದು ಕುರುಡು ನಂಬಿಕೆಯನ್ನು ಇಟ್ಟು ಕೊಂಡಿರುವರು. ಗರ್ಭಿಣಿ ಸ್ತ್ರೀಯರಿಗೆ ಯಾವುದಾದರೊಂದು ಘಟ ನೆಯು ಸಂಭವಿಸಿದರೆ, ಹೊಟ್ಟೆಯಲ್ಲಿರುವ ಮಗುವಿನ ಮೇಲೆ ಅದರ ಪರಿಣಾಮವು ಉಂಟಾಗುವುದೆಂದು ನಂಬಿರುವರು. ಮುಖ್ಯವಾಗಿ ಸೂರ್ಯ ಚಂದ್ರ ಗ್ರಹಣ ಕಾಲದಲ್ಲಿ ಗರ್ಭಿಣಿ ಸ್ತ್ರೀಯರು ಹೊರಗೆ ಬಂದರೂ, ಒಳಗಡೆಯೆ ಇದ್ದು ಕೆಲಸಮಾಡುತ್ತಿದ್ದರೂ, ಹೊಟ್ಟೆಯಲ್ಲಿ ರುವ ಮಗುವಿಗೆ ಗ್ರಹಣ ತಾಕಿ, ಅದರ ಕೈಕಾಲುಗಳು ಸೊಟ್ಟಾಗುವು ವೆಂದು ಹೇಳುವರು. ಈ ಮೂಢನಂಬಿಕೆಯಿಂದ ಗ್ರಹಣದ ಸಮಯ

ದಲ್ಲಿ ಗರ್ಭಿಣಿ ಸ್ತ್ರೀಯರನ್ನು ಕತ್ತಲು ಕೋಣೆಯಲ್ಲಿ ಕೂಡಿಹಾಕುವರು. ಇದು ಶುದ್ಧ ಭ್ರಮೆ! ನಮ್ಮ ದೇಶದಲ್ಲಿ ಇದನ್ನು ನಂಬದೆ ಇರುವವರಲ್ಲಿಯೂ, ಈ ನಂಬಿಕೆಯಿಲ್ಲದಿರುವ ಕೋಟ್ಯಂತರ ಇತರ ದೇಶದವರಲ್ಲಿಯೂ, ಗರ್ಭಿಣಿ ಸ್ತ್ರೀಯರು ಗ್ರಹಣಕಾಲದಲ್ಲಿ ಹೊರಗೆ ಬಂದರೂ ಅವರ ಮಕ್ಕಳಿಗೆ ಯಾವ ವಿಧವಾದ ಹಾನಿಯೂ ಉಂಟಾಗಿರುವುದಿಲ್ಲ. ಮುಖ್ಯವಾಗಿ ಗಮನಿಸಬೇಕಾದ ಅಂಶವೇನೆಂದರೆ, ತಾಯಿಯ ನರಮಂಡಲಕ್ಕೂ, ಮಗುವಿನ ನರಮಂಡಲಕ್ಕೂ ಯಾವ ವಿಧವಾದ ಸೇರಿಕೆಯೂ ಇಲ್ಲ[1] ಆದುದರಿಂದ ತಾಯಿಯ ಮನೋಭಾವಗಳು ಮಗುವಿನ ಮೇಲೆ ಯಾವ ಪರಿಣಾಮವನ್ನೂ ಮಾಡಲಾರವು.

ಕೆಲವು ರೋಗಗಳು ಆನುವಂಶಿಕವೆಂದು ಶಾಸ್ತ್ರಜ್ಞರೂ ಸಾಧಾರಣ ಜನಗಳೂ ವಾದಿಸುವರು. ದೈಹಿಕ ರೋಗಗಳು ನೇರವಾಗಿ ಸಂತಾನವನ್ನು ತಾಕುವುದಿಲ್ಲ. ಕ್ಷಯ ಮುಂತಾದ ರೋಗಗಳು ಮಕ್ಕಳು ಹುಟ್ಟಿದ ಮೇಲೆ ರೋಗಿಯಾಗಿರುವ ತಾಯಿಯ ಸಂಪರ್ಕದಲ್ಲಿ ಅನಾರೋಗ್ಯ ರೀತಿಯಿಂದ ಬೆಳೆಯುತ್ತ ಬಂದರೆ ಆಗ ಉಂಟಾಗುವುವು. ರೋಗಿಯಾದ ತಾಯಿಯು ಮಗುವನ್ನು ಜಾಗ್ರತೆಯಿಂದ ನೋಡಿಕೊಂಡರೆ ಮಗುವಿಗೆ ರೋಗವು ಅಂಟುವುದಿಲ್ಲ. ಸಿಫಿಲಿಸ್ ಮುಂತಾದ ರೋಗಗಳು ಪ್ರಜನನ ಜೀವಾಣುವನ್ನು ತಾಕಿ ಮಗುವನ್ನು ರೋಗಗ್ರಸ್ತವಾಗಿ ಮಾಡುವುದು. ಈ ರೋಗಗಳು ಮೆಂಡೆಲ್, ಮಾರ್ಗನ್ ಮುಂತಾದವರು ಕಂಡುಹಿಡಿದಿರುವ ಪ್ರಮಾಣಗಳಲ್ಲಿ ಸಂತಾನದಲ್ಲಿ ಕಾಣಿಸಿಕೊಳ್ಳುವುದಿಲ್ಲ. ಆದುದರಿಂದ ಇವು ಆನುವಂಶಿಕವಲ್ಲ.

ಒಂದು ವಲಯದಿಂದ ಮತ್ತೊಂದು ವಲಯಕ್ಕೆ ಗಿಡಮರಗಳನ್ನು ತಂದು ಬೆಳಸಿದರೆ, ಅವುಗಳು ಈ ಹೊಸ ವಾಯುಗುಣಕ್ಕೆ ಹೊಂದಿಕೊಂಡು ಜೀವಿಸುವುವು. ಇದು ಅಭ್ಯಾಸಗಳ ಆನುವಂಶೀಯತೆಗೆ ಉದಾಹರಣೆ ಎಂದು ಕೆಲವರು ವಾದಿಸುವರು. ಆದರೆ ಮತ್ತೆ ಕೆಲವರು ಇದು ಸ್ವಭಾವಸಿದ್ಧವಾದ ಆಯ್ಕೆ (ನ್ಯಾಚುರಲ್ ಸೆಲೆಕ್ಷನ್) ಯಿಂದ

---

1. ೪ನೇ ಅಧ್ಯಾಯವನ್ನು ನೋಡಿ

ಉಂಟಾದುದೆಂದು ವಾದಿಸುವರು. ಇವರ ಪ್ರಕಾರ ಯಾವ ಸಸ್ಯಗಳಲ್ಲಿ ಈ ಹೊಸ ವಾಯುಗುಣವನ್ನು ಹೊಂದಿಕೊಳ್ಳಲು ಸಾಮರ್ಥ್ಯವಿಲ್ಲವೋ ಅವು ಸತ್ತುಹೋಗಿ, ಹೊಂದಿಕೊಳ್ಳಲು ಸಾಮರ್ಥ್ಯವುಳ್ಳವು ಮಾತ್ರ ಬದುಕುವುವು.

ನಾವು ಇದುವರೆಗೆ ನೋಡಿದ ಹಾಗೆ ಅಭ್ಯಾಸದಿಂದ ಉಂಟಾದ ದೈಹಿಕ ಲಕ್ಷಣಗಳು ಸಂತಾನದಲ್ಲಿ ಕಾಣಿಸಿಕೊಂಡರೆ ಕೆಲವರು ಇದು ಆನುವಂಶಿಕವೆಂದು ಭಾವಿಸುವರು. ಮತ್ತೆ ಕೆಲವರು ಇದಕ್ಕೆ ಎರಡು ಮಾರ್ಗಗಳಿಂದ ಸಮಾಧಾನ ಕೊಡುವರು. ಇದು ಪ್ರಜನನ ಜೀವಾಣುವಿನಲ್ಲಿ ಉಂಟಾದ ಪರಿವರ್ತನದ ಪರಿಣಾಮವು—ಎಂದು ಹೇಳುವರು. ಅಥವಾ ಸ್ವಭಾವ ಸಿದ್ಧವಾದ ಆಯ್ಕೆಯಿಂದ ಉಂಟಾದ ಪರಿಣಾಮ ಎನ್ನುವರು.

ಅಭ್ಯಾಸಗಳು ಆನುವಂಶಿಕವೆಂದು ವಾದಿಸಿದಾಗ, ಲಾಮಾರ್ಕನು, ಒಂದು ಜೀವಿಯು ತನ್ನ ಆವರಣಕ್ಕೆ ಹೊಂದಿಕೊಂಡು ಬೆಳೆಯುವ ಅಭ್ಯಾಸಗಳನ್ನು ಕುರಿತು ಒತ್ತಿ ಹೇಳಿದನು. ಇತ್ತೀಚೆಗೆ ಮುಖ್ಯವಾಗಿ ಇಲಿಗಳಿಗೆ ಪರಂಪರೆಯಾಗಿ ಅಭ್ಯಾಸವೊಂದನ್ನು ಕಲಿಸಿ ಈ ಅಭ್ಯಾಸದ ಪರಿಣಾಮವಾಗಿ, ಮುಂದಿನ ಪೀಳಿಗೆಯ ಇಲಿಗಳ ವರ್ತನೆಯಲ್ಲಿ ಏನಾದರೂ ಪರಿವರ್ತನವುಂಟಾಗುವುದೇ ಎಂದು ಪ್ರಯೋಗಗಳನ್ನು ನಡಸಲಾಯಿತು. ೧೯೨೩ ನೆಯ ಇಸವಿಯಲ್ಲಿ 'ಪ್ಯಾವ್ ಲಾಫ್' ಎಂಬ ರಷ್ಯದ ವೈಜ್ಞಾನಿಕನು[1] ಇಲಿಗಳಿಗೆ ಗಂಟೆ ಹೊಡೆದ ತಕ್ಷಣವೇ ಊಟಕ್ಕೆ ಬರುವ ಹಾಗೆ ಒಂದು ಅಭ್ಯಾಸವನ್ನು ಕಲಿಸಿದನು. ಮೊದಲ ಸಂತತಿಯ ಇಲಿಗಳು ೩೦೦ ಪಾಠಗಳಾದ ಮೇಲೂ, ಎರಡನೆಯ ಸಂತತಿಯ ಇಲಿಗಳು ೧೦೦ ಪಾಠಗಳಾದ ಮೇಲೂ, ಮೂರನೆಯ ಸಂತತಿಯ ಇಲಿಗಳು ೩೦ ಪಾಠಗಳಾದ ಮೇಲೂ, ನಾಲ್ಕನೆಯ ಸಂತತಿಯ ಇಲಿಗಳು ೧೦ ಪಾಠಗಳಲ್ಲಿಯೂ, ಐದನೆಯದು ೫ ಪಾಠಗಳಲ್ಲಿಯೂ ಕಲಿತವೆಂದು ಪ್ರಕಟನೆ ಮಾಡಿದನು. ಈ ಪ್ರಯೋಗವು

1. ಪ್ಯಾವ್‌ಲಾಫ್—ಕಂಡಿಷನ್ಡ್ ರಿಫ್ಲೆಕ್ಸಸ್.

ವೈಜ್ಞಾನಿಕರಲ್ಲಿ ಒಂದು ದೊಡ್ಡ ವಿಸ್ಮಯವನ್ನುಂಟುಮಾಡಿತು. ಕೂಡಲೇ ನಾನಾ ದೇಶಗಳಲ್ಲಿ ಇದೇ ಪ್ರಯೋಗವನ್ನು ನಡಸಿ ನೋಡಿದರು. ಆದರೆ ಮೇಲೆ ಹೇಳಿದ ಫಲಿತಾಂಶವು ದೊರೆಯಲಿಲ್ಲ. ೧೯೨೭ರಲ್ಲಿ 'ಪ್ಯಾವ್‌ಲಾವ್' ನು ಮೊದಲು ಪ್ರಕಟಿಸಿದ ಪ್ರಯೋಗದಲ್ಲಿ ನಾಲ್ಕಾರು ತಪ್ಪುಗಳಿವೆಯೆಂದು ಹೇಳಿಕೆಯನ್ನು ವಾಪಸ್ಸು ತೆಗೆದುಕೊಂಡಿರುವೆನೆಂದು ಪ್ರಕಟಿಸಿದನು.

೧೯೨೦ ನೆಯ ಇಸವಿಯಲ್ಲಿ 'ಮೆಕ್‌ಡೂಗಲ್'[1] ಇನ್ನೊಂದು ಪ್ರಯೋಗವನ್ನು ಪ್ರಾರಂಭಿಸಿ ೪೪ ಪೀಳಿಗೆಯ ಇಲಿಗಳಿಗೆ ಒಂದು ಅಭ್ಯಾಸವನ್ನು ಕಲಿಸಿದನು. ಇಲಿಗಳನ್ನು ನೀರಿನಲ್ಲಿ ಬಿಟ್ಟನು. ಇವು ನೀರಿನಿಂದ ಹೊರಗೆ ಬರಬೇಕಾದರೆ ಎರಡು ದಾರಿಗಳಿದ್ದುವು. ಒಂದು ದಾರಿಯು ಚೆನ್ನಾಗಿ ಬೆಳಕಿರುವ ದಾರಿ; ಇನ್ನೊಂದು ಸ್ವಲ್ಪ ಕತ್ತಲೆಯಾದುದು. ಬೆಳಕಿರುವ ದಾರಿಯಲ್ಲಿ ಹೋದರೆ ಇಲಿಗಳಿಗೆ ಎಲೆಕ್ಟ್ರಿಕ್ ಷಾಕ್ ಹೊಡೆಯುವುದು. ಕತ್ತಲೆಯ ದಾರಿಯಲ್ಲಿ ಹೋದರೆ ಏನೂ ಇಲ್ಲ. ಈ ಪ್ರಯೋಗದಲ್ಲಿ ಇಲಿಗಳು ಮಾಡುವ ತಪ್ಪುಗಳ ಸಂಖ್ಯೆ ಕ್ರಮೇಣ ಇಳಿದು ಹೋಗುವುದೆಂದು ಪ್ರಕಟಿಸಲಾಯಿತು. ಪ್ರತಿಯೊಂದು ಪೀಳಿಗೆಯಲ್ಲಿಯೂ ಪ್ರಯೋಗವನ್ನು ಪ್ರಾರಂಭಿಸುವುದಕ್ಕೆ ಮುನ್ನ ಎಲೆಕ್ಟ್ರಿಕ್ ಷಾಕ್ ಇಲ್ಲದೆ ಮೊದಲನೆಯ ದಿವಸ ತಮ್ಮಷ್ಟಕ್ಕೆ ತಾವೇ ಕತ್ತಲ ದಾರಿಯನ್ನು ಎಷ್ಟು ಸಲ ಹಿಡಿಯುವುವು, ಬೆಳಕಿನ ಹಾದಿಯನ್ನು ಎಷ್ಟು ಸಲ ಹಿಡಿಯುವುವು ಎಂಬುದನ್ನು ಪರೀಕ್ಷಿಸಲಾಯಿತು. ಇದರ ಫಲಿತಾಂಶಗಳು ಸಹ ಅಭ್ಯಾಸಗಳು ಅನುವಂಶಿಕವೆಂದು ಸ್ಥಾಪಿಸುವುದು ಎಂದು ಮೆಕ್‌ಡೂಗಲ್ ವಾದಿಸಿದನು. ಆದರೆ ಈ ೪೪ ಪೀಳಿಗೆಗಳಲ್ಲಿ ೬ ಪೀಳಿಗೆಗಳು ಮಾತ್ರ ಅಭ್ಯಾಸಮಾಡಿಸುವುದಕ್ಕೆ ಮೊದಲು ಶೇಕಡ ೭೦–೭೫ ರಷ್ಟು ಕಪ್ಪು ಮಾರ್ಗವನ್ನು ಹಿಡಿದುವು. ೪೪ ಸಂತತಿಗಳು ಒಟ್ಟು ಶೇಕಡ ೫೪ ಸಲ ಸರಿಯಾದ ದಾರಿಯನ್ನು ಹಿಡಿದುವು. ಆದುದರಿಂದ ಈ ಪ್ರಯೋಗಗಳು 'ಅಭ್ಯಾಸಗಳು ಅನುವಂಶಿಕ'

---

1. ಮೆಕ್‌ಡ್ಯೂಗಲ್—ಬ್ರಿಟಿಷ್ ಜರ್ನಲ್ ಆಫ್ ಸೈಕಾಲಜಿ.

ಎಂದು ಸ್ಥಾಪಿಸಲಿಲ್ಲವೆಂದು ಧಾರಾಳವಾಗಿ ಹೇಳಬಹುದು. ಈ ಪ್ರಯೋಗವನ್ನು ಸ್ಕಾಟ್ಲೆಂಡ್ ದೇಶದ 'ಕ್ರ್ಯೂ' ಎಂಬುವರೂ ಆಸ್ಟ್ರೇಲಿಯಾದ 'ಅಗರ್' ಎಂಬುವರೂ ಮತ್ತೆ ನಡಸಿ ಮೆಕ್‌ಡೂಗಲಿನ ಫಲಿತಾಂಶಗಳು ಒಪ್ಪಲರ್ಹವಾದುವಲ್ಲವೆಂದು ಸಾರಿದರು.

ಮೈಸೂರು ದೇಶದ ಡಾ|| ಗೋಪಾಲಸ್ವಾಮಿಯವರು ೧೯೨೪ ರಲ್ಲಿ ಒಂದು ಪ್ರಯೋಗವನ್ನು ಪ್ರಾರಂಭಿಸಿದರು. ಇಲಿಗಳು ನೀರಿನೊಳಗೆ



ಚಿತ್ರ ೭

'W' ಆಕಾರದಲ್ಲಿ ಇಲಿ ಈಜಲು ಮಾಡಿರುವ ತೊಟ್ಟಿ.

N ಪ್ರಕಾರ ಈಜಿಕೊಂಡು ಹೋಗಿ ಕಾಳುಗಳನ್ನು ತಿನ್ನುವ ಅಭ್ಯಾಸವನ್ನು ಕಲಿಸಿದರು. ೩ ತಲೆ ಮಾರುಗಳ ನಂತರ ಅಭ್ಯಾಸಕಾಲವು ಕಡಮೆಯಾದುದರಿಂದ ಈ ಮಾರ್ಗವನ್ನು ಮುಂದುವರಿಸಬೇಕೆಂದು ಮತ್ತೊಂದು ಪ್ರಯೋಗವನ್ನು ಪ್ರಾರಂಭಿಸಿದರು. ಈ ಪ್ರಯೋಗವನ್ನು ಗ್ರಂಥಕರ್ತರು ಮುಂದುವರಿಸಿದರು.[1] ಇಲಿಗಳು ದಿನವೂ ತಮ್ಮ ಆಹಾರಕ್ಕೋಸ್ಕರ ನೀರಿನಲ್ಲಿ ಮುಳುಗಿ W ರೀತಿಯಲ್ಲಿ ಈಜಿಕೊಂಡು ಹೊರಗೆ ಬಂದು ತಮ್ಮ ಆಹಾರವನ್ನು ಪಡೆಯಬೇಕಿತ್ತು. ಈ ರೀತಿ ಹತ್ತು ಪೀಳಿಗೆಗಳಿಗೆ ಕ್ರಮವಾಗಿ ಶಿಕ್ಷಣ ಕೊಡಲಾಯಿತು. ಅಭ್ಯಾಸಗಳು ಆನುವಂಶಿಕವಾದರೆ ಮೊದಲನೆಯ ಪೀಳಿಗೆಗಳಿಗಿಂತ ಮುಂದಿನ ಪೀಳಿಗೆಗಳು ಅಭ್ಯಾಸವನ್ನು ಶಿಕ್ಷಣವಿಲ್ಲದೆಯೇ ಪಡೆಯಬೇಕು. ಅಥವಾ ಅತಿ ಶೀಘ್ರದಲ್ಲಾದರೂ ಪಡೆಯಬೇಕು. ಪ್ರಯೋಗವನ್ನು ದೃಢೀಕರಿಸುವುದಕ್ಕೋಸ್ಕರ ಆಗಾಗ ವಂಶಪರಂಪರೆಗೆ ಸೇರದ ಕೆಲವು ಇಲಿಗಳಿಗೆ ಅದೇ ಅಭ್ಯಾಸವನ್ನು ಕಲಿಸಿ ಅವುಗಳ ಶಿಕ್ಷಣಕ್ಕೂ ಪ್ರಾಯೋಗಿಕ ಗುಂಪುಗಳ ಶಿಕ್ಷಣಕ್ಕೂ ಇರುವ ವ್ಯತ್ಯಾಸಗಳನ್ನು ಕಂಡುಹಿಡಿಯಲಾಯಿತು. ಶಿಕ್ಷಣ ಪಡೆದ ತಾಯಿತಂದೆ, ತಾತ ಮುತ್ತಾತಂದಿರುಗಳ ಮಕ್ಕಳು ಮೊಮ್ಮಕ್ಕಳೂ, ಶಿಕ್ಷಣವಿಲ್ಲದ ತಾಯಿತಂದೆಗಳ ಮಕ್ಕಳೂ ಒಂದೇ ಅಭ್ಯಾಸವನ್ನು ಒಂದೇ ಕಾಲಪ್ರಮಾಣದಲ್ಲಿ ಕಲಿತರೆ, ಆಗ ಅಭ್ಯಾಸಗಳು ಆನುವಂಶಿಕವಲ್ಲ ಎಂದು ಹೇಳಿದಂತಾಗುವುದು. ಕಲಿತ ತಾಯಿತಂದೆಗಳ ಮಕ್ಕಳು, ಕಲಿಯದ ತಾಯಿತಂದೆಗಳ ಮಕ್ಕಳಿಗಿಂತಲೂ ಶೀಘ್ರವಾಗಿ ಶಿಕ್ಷಣವನ್ನು ಪಡೆದರೆ ಆಗ ಅಭ್ಯಾಸಗಳು ಆನುವಂಶಿಕವೆಂದು ಹೇಳಬಹುದು. ಆದುದರಿಂದ ಈ ಆನುವಂಶಿಕ ಪ್ರಯೋಗಗಳಲ್ಲಿ ನಾಲ್ಕಾರು ತಲೆ ಮಾರುಗಳಿಗೆ ಅಭ್ಯಾಸವನ್ನು ಕಲಿಸಿಕೊಡುವುದೇ ಅಲ್ಲದೆ, ಆಗಾಗ ಅದೇ ಕ್ರಮದಲ್ಲಿ ಈ ತರಹದ ಅಭ್ಯಾಸಗಳನ್ನು ಕಲಿಯದಿರುವ ತಾಯಿತಂದೆಗಳ ಹೊಟ್ಟೆಯಲ್ಲಿ ಹುಟ್ಟಿರುವ ಮಕ್ಕಳಿಗೂ ಕಲಿಸಬೇಕು.

---

1 ಬಿ. ಕುಪ್ಪುಸ್ವಾಮಿ—ಲೆಕ್ಚರ್ಸ್ ಆನ್ ಮೆಂಟಲ್ ಹೆರಿಡಿಟಿ.

## ಪಟ್ಟಿ ೨
## ಇಲಿಗಳ ಮುಳುಗುವಿಕೆಯ ಸರಾಸರಿ ಸಂಖ್ಯೆ

| ಪ್ರಯೋಗದ ಗುಂಪು | | ಪರೀಕ್ಷಣದ ಗುಂಪು | |
|---|---|---|---|
| ಗುಂಪು | ಸರಾಸರಿ | ಗುಂಪು | ಸರಾಸರಿ |
| ೧ ನೆಯ ಪೀಳಿಗೆ | ೨.೬ | ೧ ನೆಯ ಪರೀಕ್ಷಣ | ೨.೭ |
| ೨ ,, | ೩.೦ | | |
| ೩ ,, | ೩.೭ | ೨ ,, | ೩.೩ |
| ೪ ,, | ೪.೪ | | |
| ೫ ,, | ೩.೫ | ೩ ,, | ೩.೪ |
| ೬ ,, | ೨.೧ | | |
| ೭ ,, | ೩.೦ | ೪ ,, | ೩.೮ |
| ೮ ,, | ೨.೬ | | |
| ೯ ,, | ೨.೦ | | |
| ೧೦ ,, | ೨.೪ | | |

ಮೈಸೂರಿನಲ್ಲಿ ನಡಸಿದ ಈ ಪ್ರಯೋಗದಲ್ಲಿ ಹತ್ತು ತಲೆಮಾರುಗಳಿಗೆ ಈಜುವುದನ್ನು ಒಂದು ಕ್ರಮದಲ್ಲಿ ಕಲಿಸಿದ್ದೇ ಅಲ್ಲದೆ, ಪರೀಕ್ಷಣಕ್ಕಾಗಿ, ಬೇರೆ ಕಲಿಯದ ವಂಶದ ನಾಲ್ಕು ಗುಂಪುಗಳಿಗೆ 'ಅದೇ ಅಭ್ಯಾಸವನ್ನು ಕಲಿಸಲಾಯಿತು. ಮೇಲಿನ ಪಟ್ಟಿಯಲ್ಲಿ ಒಂದೊಂದು ಗುಂಪಿನ ಇಲಿಗಳೂ ಒಂದು ದಿವಸದಲ್ಲಿ ಸರಾಸರಿ ಎಷ್ಟಾವರ್ತಿ ನೀರಿನಲ್ಲಿ'ಮುಳುಗಿದುವೆಂಬುದನ್ನು ತೋರಿಸಿದೆ. ಮೊದಲನೆಯ ಗುಂಪಿನಿಂದ ನಾಲ್ಕನೆಯ ತಲೆಮಾರಿನವರೆಗೂ ಸರಾಸರಿ ಕ್ರಮವಾಗಿ ಹೆಚ್ಚುತ್ತ ಹೋಗುವುದು. ಆಮೇಲೆ ಹೆಚ್ಚು ಕಡಿಮೆಯಾಗಿ ಬದಲಾವಣೆಯನ್ನು ಹೊಂದುವುದು. ಅಂದರೆ ತಲೆಮಾರು ತಲೆಮಾರಿಗೂ ಅಭ್ಯಾಸವನ್ನು ಕಲಿಸುತ್ತ ಹೋದರೆ ಕೊನೆಯ ತಲೆಮಾರುಗಳ ಇಲಿಗಳು ಹೆಚ್ಚಾವರ್ತಿ ನೀರಿನಲ್ಲಿ ಮುಳುಗಲಿಲ್ಲವೆಂದಾಯಿತು. ಇದೂ ಅಲ್ಲದೆ, ಪ್ರಾಯೋಗಿಕ

ಗುಂಪಿನ ಇಲಿಗಳಿಗೂ ಇತರ ಪರೀಕ್ಷಣದ ಗುಂಪಿನ ಇಲಿಗಳಿಗೂ ವ್ಯತ್ಯಾಸವು ಅಷ್ಟೇನು ಕಂಡುಬರುವುದಿಲ್ಲ. ಪ್ರಾಯೋಗಿಕ ಗುಂಪುಗಳ ಉತ್ತಮ ಇಲಿಗಳು ೪·೪ ಸಲ ಈಜುತ್ತವೆ; ಪರೀಕ್ಷಣದ ಗುಂಪಿನ ಇಲಿಗಳು ೩.೮ ಸಲ ಈಜುತ್ತವೆ.

ಪಟ್ಟಿ ೩

ಇಲಿಗಳು ಅಭ್ಯಾಸವನ್ನು ಕಲಿತ ಕಾಲದ ಅವಧಿ

| ಪ್ರಯೋಗದ ಗುಂಪು | | ಪರೀಕ್ಷಣದ ಗುಂಪು | |
|---|---|---|---|
| ಗುಂಪು | ಸರಾಸರಿ | ಗುಂಪು | ಸರಾಸರಿ |
| ೧ ನೆಯ ಪೀಳಿಗೆ | ೧೮ ದಿನಗಳು | ೧ ನೆಯ ಪರೀಕ್ಷಣ | ೧೬ ದಿನಗಳು |
| ೨ ,, | ೨೩ ,, | | |
| ೩ ,, | ೧೪ ,, | ೨ ,, | ೧೫ ,, |
| ೪ ,, | ೧೧ ,, | | |
| ೫ ,, | ೧೪ ,, | ೩ ,, | ೧೬ ,, |
| ೬ ,, | ೧೬ ,, | | |
| ೭ ,, | ೧೪ ,, | ೪ ,, | ೧೨ ,, |
| ೮ ,, | ೧೭ ,, | | |
| ೯ ,, | ೨೦ ,, | | |
| ೧೦ ,, | ೧೫ ,, | | |

೩ನೆಯ ಪಟ್ಟಿಯಲ್ಲಿ ಒಂದೊಂದು ಗುಂಪಿನ ಇಲಿಗಳೂ ತಪ್ಪಿಲ್ಲದೆ ನೀರಿನಲ್ಲಿ ಈಜುವುದಕ್ಕೆ ಎಷ್ಟು ದಿನಗಳನ್ನು ತೆಗೆದುಕೊಂಡವೆಂಬುದನ್ನು ತೋರಿಸಲಾಗಿದೆ ಪ್ರಾಯೋಗಿಕ ಗುಂಪುಗಳ ಇಲಿಗಳಲ್ಲಿ ತಲೆಮಾರುಗಳು ಕಳೆದಹಾಗೆಲ್ಲ ಯಾವ ವಿಧವಾದ ಹೆಚ್ಚು ಕುಶಲತೆಯೂ ಕಂಡುಬರಲಿಲ್ಲ. ಪ್ರಾಯೋಗಿಕ ಗುಂಪುಗಳಲ್ಲಿ ಉತ್ತಮ ಗುಂಪಿನ ಇಲಿಗಳು ೧೧ ದಿನಗಳಲ್ಲಿ ತಪ್ಪಿಲ್ಲದೆ ಈಜುವುದನ್ನು ಕಲಿತುವು. ಶಿಕ್ಷಣ

ವಿಲ್ಲದ ಗುಂಪಿನ ಉತ್ತಮ ಇಲಿಗಳು ೧೨ ದಿನಗಳಲ್ಲಿ ಕಲಿತುವು. ಅದೂ ಅಲ್ಲದೆ ಪ್ರಾಯೋಗಿಕ ಗುಂಪಿನ ಇಲಿಗಳೆಲ್ಲದರ ಸರಾಸರಿಯು ೧೫·೩೩ ದಿನಗಳೂ, ಶಿಕ್ಷಣವಿಲ್ಲದ ಗುಂಪಿನ ಇಲಿಗಳ ಸರಾಸರಿ ೧೪·೫೨ ದಿನಗಳೂ ಆಗಿವೆ. ಈ ಪ್ರಯೋಗದಲ್ಲಿ ಅಭ್ಯಾಸವು ಆನುವಂಶಿಕವಲ್ಲವೆಂಬುದು ಕಂಡುಬಂದಿತು. ನಾವು ಇದುವರೆಗೂ ಪರೀಕ್ಷಿಸಿರುವ ಬೇರೆ ಪ್ರಯೋಗಗಳ ಫಲಿತಾಂಶಗಳಿಗೂ ಈ ಪ್ರಯೋಗದ ಫಲಿತಾಂಶಗಳಿಗೂ ಏನೂ ವ್ಯತ್ಯಾಸವಿಲ್ಲ.

ನಮಗೀಗ ಒದಗಿರುವ ಜ್ಞಾನದ ಬಲದಿಂದ, ಒಬ್ಬ ಮನುಷ್ಯನು ಒಂದು ವಂಶದಲ್ಲಿ ಹುಟ್ಟಿರುವುದರ ಕಾರಣ ಅವನ ಮಾನಸಿಕ ಗುಣಗಳು ಉನ್ನತವೆಂದಾಗಲೀ ಹೀನವೆಂದಾಗಲೀ ಹೇಳುವುದರಲ್ಲಿ ಯಾವ ಅರ್ಥವೂ ಇಲ್ಲ ಈ ತರಹದ ನಂಬಿಕೆಗಳು ಬರೀ ಮೂಢನಂಬಿಕೆಗಳು. ಇದರಿಂದ ಎಷ್ಟೋ ಜನರಿಗೆ ಈಗ ಅನ್ಯಾಯವಾಗುತ್ತಿದೆ. ಈ ನಂಬಿಕೆಯನ್ನು ನಾವು ಬಿಟ್ಟರೆ ಆಗ ಒಂದೊಂದು ವ್ಯಕ್ತಿಯನ್ನೂ ಗೌರವಿಸಿ ಅವನಿಗೆ ಅರ್ಹವಾದ ಪದವಿಯನ್ನು ಕೊಡಬಹುದು.

ಈ ವಿಷಯವಾಗಿ ನಮ್ಮ ಸಮಾಜದಲ್ಲಿ ಬಹಳ ವಿಚಿತ್ರವಾದ ಒಂದು ಪ್ರಯೋಗವು ನಡೆದಿರುವುದು. ನಮ್ಮ ದೇಶದಲ್ಲಿ ಸಾವಿರಾರು ವರ್ಷಗಳಿಂದಲೂ ಉನ್ನತ ಜಾತಿಗಳಲ್ಲಿ ಓದು ಬರಹ ಕಲಿಯುತ್ತಿರುವರು. ನಿಮ್ನವರ್ಗದವರು ಸಾವಿರಾರು ವರ್ಷಗಳಿಂದಲೂ ಓದು ಬರಹವನ್ನು ಕಲಿತವರೇ ಅಲ್ಲ. ಈ ಎರಡು ಗುಂಪಿನವರೂ ಇತ್ತೀಚೆಗೆ ಸಹಜವಾಗಿ ನಮ್ಮ ಶಾಲೆಗಳಲ್ಲಿ ಒದುತ್ತಿರುವರಷ್ಟೆ. ಈ ಎರಡು ಗುಂಪಿನವರ ಕಲಿಯುವಿಕೆಯನ್ನು ಗಮನಿಸಿದರೆ, ಸಾವಿರಾರು ವರ್ಷಗಳಿಂದಲೂ ತಲೆಮಾರು ತಲೆಮಾರುಗಳ ಮೇಲೆ ಕ್ರಮವಾಗಿ ವಿದ್ಯಾಭ್ಯಾಸವನ್ನು ಮಾಡುತ್ತಿರುವ ಗುಂಪುಗಳ ಮಕ್ಕಳಿಗೂ, ಎಂದೂ ಶಾಲೆಯನ್ನು ಕಂಡರಿಯದ ಗುಂಪುಗಳ ಮಕ್ಕಳಿಗೂ ಶಾಲೆಗಳಲ್ಲಿ ಅಷ್ಟೊಂದು ವ್ಯತ್ಯಾಸವು ಕಂಡುಬರುವುದಿಲ್ಲ. ಇರುವ ವ್ಯತ್ಯಾಸಗಳೂ ಆನುವಂಶಿಕವಲ್ಲ. ಅವರ ಸಾಮಾಜಿಕ, ಆರ್ಥಿಕ ಮತ್ತು ವಿದ್ಯೆಯ ಆವರಣಗಳ ಪ್ರಭಾವದಿಂದ ಉಂಟಾದುವು. ಈ ವ್ಯತ್ಯಾಸವು ನಿಜವಾಗಿಯೂ ಆನುವಂಶಿಕವಾದರೆ

ನಡೆದ ಈ ಮಹಾಸಂಗ್ರಾಮದಲ್ಲಿ ಇಪ್ಪತ್ತು ವರ್ಷಗಳ ಹಿಂದೆ ಕೇವಲ ಅಶಿಕ್ಷಿತ ಕೂಲಿಗಳಾಗಿಯೂ, ರೈತರಾಗಿಯೂ ಇದ್ದ ರಷ್ಯಾದ ಸೇನಾನಾಯಕರು ಅತ್ಯದ್ಭುತರೀತಿಯಿಂದ ಜಯವನ್ನು ಗಳಿಸುತ್ತಿದ್ದರೇ? ಅಲ್ಲದೆ ಅವರು ಸೋಲಿಸಿರುವ ಜರ್ಮನ್ ಸೇನಾನಾಯಕರುಗಳಾದರೂ ವಂಶಪರಂಪರಾನುಗತವಾಗಿ ಬಂದ ಸೇನಾನಾಯಕರ ಮಕ್ಕಳು, ಮೊಮ್ಮಕ್ಕಳು!

# ಅಧ್ಯಾಯ ೪.

## ವರ್ತನೆಯ ಮೂಲಾಧಾರ—೨

### ಜನ್ಮಪೂರ್ವ ವಿಕಾಸ

ಹುಟ್ಟುವುದಕ್ಕಿಂತ ಮುಂಚೆ ಜೀವಿಯು ತಾಯಿಯ ಗರ್ಭದಲ್ಲಿ ಬಹು ಮುಖ್ಯವಾದ ಪರಿವರ್ತನೆಗಳನ್ನು ಹೊಂದುತ್ತಿರುವುದು. ಹಿಂದಿನ ಅಧ್ಯಾಯದಲ್ಲಿ ಹೇಳಿದಂತೆ ಜೀವೋತ್ಪತ್ತಿಯು ಗರ್ಭಕಟ್ಟಿದ ತತ್ತಿಯಿಂದ ಪ್ರಾರಂಭವಾಗುವುದು. ಈ ಒಂದು ತತ್ತಿಯು ಭಾಗವಿಭಾಗಗಳಾಗಿ ವಿಕಾಸಹೊಂದಿ ಬೆಳೆದು ಮಗುವಾಗುವುದು. ಇಂತಹ ಅದ್ಭುತವಾದ ಕೆಲಸವು ತಾಯಿಯ ಗರ್ಭದಲ್ಲಿ ಸುಮಾರು ನಲವತ್ತು ವಾರಗಳಲ್ಲಿ ನಡೆಯುವುದು. ಕೆಲವು ವೇಳೆ, ತಾಯಿಯ ದೈಹಿಕ ಸ್ಥಿತಿಯು ಸರಿಯಾಗಿಲ್ಲದುದರಿಂದಲೋ ಅಥವಾ ತಾಯಿಗೆ ಯಾವುದಾದರೂ ಆಕಸ್ಮಿಕ ಸಂಭವಿಸಿದುದರಿಂದಲೋ, ಮಗು ನಿಯಮಿತ ಕಾಲಕ್ಕೆ ಮುಂಚೆಯೇ ಹುಟ್ಟಬಹುದು. ಈ ರೀತಿ, ಆರು ತಿಂಗಳಿಗಿಂತ ಮುನ್ನವೇ ಹುಟ್ಟಿದರೆ ಮಗು ಬದುಕುವುದಿಲ್ಲ. ಸಾಧಾರಣವಾಗಿ ಮಗು ಹುಟ್ಟಿ ಬದುಕಬೇಕಾದರೆ, ಗರ್ಭಕಟ್ಟಿದ ಮೂವತ್ತು ವಾರಗಳ ಮೇಲೆ ನಲವತ್ತೈದು ವಾರಗಳೊಳಗೆ ಜನಿಸಬೇಕು. ಮಗು ಜನಿಸುವುದು ವಿಳಂಬವಾದರೆ, ಅದು ಅತಿಯಾಗಿ ಬೆಳೆದು, ತನಗಾಗಲಿ, ತಾಯಿಗಾಗಲಿ, ಅಪಾಯವಿಲ್ಲದೆ ಹುಟ್ಟುವುದು ಸಾಧ್ಯವಾಗಲಾರದು. ಅಂತಹ ಸ್ಥಿತಿಯು ಒದಗಿದಾಗ ಶಸ್ತ್ರ ಚಿಕಿತ್ಸೆಯನ್ನು ನಡಸಿ, ಮಗುವನ್ನು ಹೊರಕ್ಕೆ ತೆಗೆಯಬೇಕಾಗಬಹುದು. ನಿಯಮಿತ ೪೦ ವಾರಗಳಲ್ಲಿ ಮಗು ಹುಟ್ಟಿದರೆ ತಾಯಿ ಮಕ್ಕಳಿಬ್ಬರಿಗೂ ಕುಶಲ.

ಹುಟ್ಟುವ ಮಕ್ಕಳೆಲ್ಲರೂ ಒಂದೇ ವಯಸ್ಸಿನವರೆಂದು ನಾವು ಸಾಧಾರಣವಾಗಿ ತಿಳಿಯುತ್ತೇವೆ. ಆದರೆ ಈ ನಂಬಿಕೆಗೆ ಆಧಾರವಿಲ್ಲ. ಮೇಲೆ ಹೇಳಿದ ಹಾಗೆ, ಮಗುವು ಗರ್ಭಕಟ್ಟಿದ ಮೂವತ್ತು ವಾರಗಳಿಂದ ಹಿಡಿದು, ನಲವತ್ತೈದು ವಾರಗಳೊಳಗೆ ಯಾವಾಗಲಾದರೂ

ಹುಟ್ಟಬಹುದು. ಈ ಕಾಲವ್ಯತ್ಯಾಸವು ಮಗುವಿನ ಬೆಳವಣಿಗೆಯಲ್ಲಿ ಬಹಳ ಅಂತರವನ್ನುಂಟುಮಾಡುವುದು. ೩೦ ವಾರಗಳಲ್ಲಿ ಹುಟ್ಟಿದ ಮಗುವಿಗಿಂತ ೪೫ ವಾರಗಳಲ್ಲಿ ಹುಟ್ಟಿದ ಮಗುವು ಬೆಳವಣಿಗೆಯಲ್ಲಿ ಒಂದೂವರೆಯಷ್ಟು ದೊಡ್ಡದಾಗಿರಬೇಕಲ್ಲವೇ? ಈ ಇಬ್ಬರು ಮಕ್ಕಳನ್ನೂ "ಹುಟ್ಟಿದ ಮಕ್ಕಳು" ಎಂದು ಸರಿಸಮ ಮಾಡಬಹುದೇ?




ಚಿತ್ರ ೮—ಗರ್ಭಕಟ್ಟಿದ ತತ್ತಿಯ ಬೆಳವಣಿಗೆ

ಒಂದು ಮಗುವಿಗೂ, ಇನ್ನೊಂದು ಮಗುವಿಗೂ, ಇರುವ ವ್ಯತ್ಯಾಸಗಳಿಗೆ ಇದೂ ಒಂದು ಕಾರಣ.

ತಾಯಿಯ ಗರ್ಭದಿಂದ ಈಚೆಗೆ ಬರುವುದಕ್ಕೆ ಮೊದಲೇ ಉಂಟಾಗುವ ಬೆಳವಣಿಗೆಯನ್ನು ಮೂರು ಭಾಗಗಳಾಗಿ ವಿಭಜನೆ ಮಾಡಬಹುದು. ಮೊದಲ ಎರಡು ವಾರಗಳೂ ತತ್ತಿಯ ರೂಪವನ್ನು ತಾಳಿರುವುದು. ಇದಕ್ಕೆ "ಅಂಡಾವಸ್ಥೆ" ಎನ್ನಬಹುದು. ಎರಡನೆಯ ಕಾಲವೇ

"ಭ್ರೂಣಾವಸ್ಥೆ" ಇದು ಎರಡು ವಾರಗಳಿಂದ ಎಂಟು ವಾರಗಳವರೆಗೂ ಇರುವುದು. ಈ ಸ್ಥಿತಿಯಲ್ಲಿ ತತ್ತಿಯ ರೂಪವನ್ನು ಬಿಟ್ಟು ಮನುಷ್ಯ ರೂಪವನ್ನು ತಾಳುವುದು. ಕೊನೆಯದು "ಗರ್ಭಾಂತರ ಶೈಶವಾವಸ್ಥೆ" ಈಗ ಮಗುವು ಇನ್ನೂ ಬೆಳೆದು ದೇಹದ ರಚನೆಯು ವ್ಯವಸ್ಥೆಗೊಳ್ಳುವುದು.

## ಅಂಡಾವಸ್ಥೆ (ಜರ್ಮಿನಲ್ ಪೀರಿಯಡ್)

ಗರ್ಭಕಟ್ಟಿದ ಎರಡು ವಾರಗಳು (ಗರ್ಭಕಟ್ಟಿದ) ತತ್ತಿಯು ತಾಯಿಯ ಶರೀರದೊಳಗಿದ್ದರೂ, ಸ್ವೇಚ್ಛೆಯಾಗಿ ಬೆಳೆಯುವುದು. ಈ




ಚಿತ್ರ ೯—ಭ್ರೂಣದ ಬೆಳವಣಿಗೆ

ಸಮಯದಲ್ಲಿ ತಾಯಿಯಿಂದ ಯಾವ ವಿಧವಾದ ಆಹಾರವನ್ನೂ ತೆಗೆದುಕೊಳ್ಳುವುದಿಲ್ಲವೆಂದು ಊಹಿಸಲಾಗಿದೆ. ಈ ಎರಡು ವಾರಗಳಲ್ಲಿ ಅದರ

ಗಾತ್ರವು ದೊಡ್ಡದಾಗುವುದಿಲ್ಲ. ಆದರೆ ಅದರ ಒಳರಚನೆಯು ಬಹು ಮಟ್ಟಿಗೆ ಬದಲಾವಣೆಯನ್ನು ಹೊಂದುವುದು. ತತ್ತಿಯು ಭಾಗವಿಭಾಗ ಗಳಾಗಿ[1] ಒಂದು ಕಣದ ಉಂಡೆಯಾಗುವುದು[2] ಈ ಜೀವಕಣಗಳು ವಿಭಾಗವಾಗುವಾಗಲೆಲ್ಲಾ ಕಣದೊಳಗಿನ ವರ್ಣರೇಖೆಗಳು ಸೀಳಿ ಸರಿ ಸಮವಾಗಿ ಒಂದೊಂದು ಹೊಸ ಜೀವಕಣದಲ್ಲಿಯೂ ಇಪ್ಪತ್ತುನಾಲ್ಕು ಜೊತೆಯಿರುವ ಹಾಗೆ ಹಂಚಿಕೊಳ್ಳುವುವು.

ತತ್ತಿಯ ಒಳಗೆ ಮೇಲೆ ಕೊಟ್ಟಿರುವ ಚಿತ್ರದಲ್ಲಿ ತೋರಿಸಿರುವಂತೆ ಬದಲಾವಣೆಗಳು ನಡೆಯುವುವು. ತತ್ತಿಯ ಸುತ್ತಲೂ ಒಂದು ಕಣಗಳ ಪೊರೆಯುಂಟಾಗುವುದು. ಒಳಗಿನ ಕಣಗಳೆಲ್ಲವೂ ಒಂದು ಕಡೆ ಗುಂಪಾಗಿ ಉಳಿದ ಭಾಗವು ಟೊಳ್ಳಾಗಿರುವುದು.[3] ಕ್ರಮೇಣ ಒಳಗಿನ ಕಣಗಳ ಗುಂಪಿನಲ್ಲಿ ಮತ್ತೆರಡು ಟೊಳ್ಳುಗಳಾಗಿ ಈ ಎರಡು ಟೊಳ್ಳುಗಳ ಮಧ್ಯೆ ಒಂದು ಜೀವಕಣಗಳ ಬಿಲ್ಲೆ[4]ಯುಂಟಾಗುವುದು. ಇದಕ್ಕೆ 'ಮೊಳಕೆಯಬಿಲ್ಲೆ'(ಜರ್ಮಿನಲ್ ಡಿಸ್ಕ್) ಎಂದು ಹೆಸರು. ಇದೇ ಮುಂದೆ ಮಗುವಾಗಿ ಬೆಳೆಯುವುದು. ಇನ್ನುಳಿದ ಭಾಗಗಳೆಲ್ಲವು ಭ್ರೂಣವನ್ನು ಕಾಪಾಡುವ ಹೊದಿಕೆಯಾಗುವುದು. ಎರಡನೆಯ ವಾರದ ಕೊನೆಯಲ್ಲಿ ತತ್ತಿಯು ತಾಯಿಯ ಗರ್ಭಕೋಶದ ಭಾಗಕ್ಕೆ ಅಂಟಿಕೊಳ್ಳುವುದು. ಇದಾದ ಮೇಲೆ ಭ್ರೂಣವು ತಾಯಿಯನ್ನು ಅವಲಂಬಿಸಿದ ಉಪಜೀವಿ ಯಾಗುವುದು. ತಾಯಿಯಿಂದ ಆಹಾರವನ್ನು ಪಡೆದು ಭ್ರೂಣವು ತನ್ನ ರಚನಾಕ್ರಮದ ನಿಯಮಗಳಿಗನುಸಾರವಾಗಿ ಬೆಳೆಯುವುದು.

## ಭ್ರೂಣಾವಸ್ಥೆ

ಮಗುವಿನ ಬೆಳವಣಿಗೆಯಲ್ಲಿ ಇದು ಎರಡನೆಯ ಅವಧಿ. ಇದು ಎರಡನೆಯ ವಾರದ ಕಡೆಯಿಂದ ಹತ್ತನೆಯ ವಾರದ ಕೊನೆಯವರೆಗೂ ಇರುವುದು. ಈ ಸಮಯದಲ್ಲಿ, ಗಾತ್ರ ಮತ್ತು ಸ್ವರೂಪಗಳಲ್ಲಿ ಮಹ ತ್ತರ ವಾದ, ಬೆಳವಣಿಗೆಯುಂಟಾಗುವುದು. ಈ ಎಂಟು ವಾರಗಳೊಳಗೆ

1. ಚಿತ್ರ ೮ A. 2. ಚಿತ್ರ ೮ B. C.
3. ಚಿತ್ರ ೮ D. 4. ಚಿತ್ರ ೮ E.

ಚಿಕ್ಕ ಮೊಳಕೆ ಬಿಲ್ಲೆಯಿಂದ ಮನುಷ್ಯರೂಪವನ್ನು ತಾಳುವುದು. ಈ ಬಿಲ್ಲೆಯಲ್ಲಿ ಜೀವಾಣುಗಳು ಮೂರು ಪದರಗಳಲ್ಲಿರುವುವು. ಒಂದು ಪದರವು ಹೊರ-ಪದರ (ಎಕ್ಟೊಡರ್ಮ್) ಇದು ಮುಂದೆ ನರಮಂಡಲ ಮತ್ತು ಚರ್ಮವಾಗಿ ಬೆಳೆಯುವುದು. ಇನ್ನೊಂದು ಪದರವು ಒಳಪದರ (ಎಂಡೋಡರ್ಮ್) ಇದು ಭ್ರೂಣಕಾಲದಲ್ಲಿ ಆಹಾರಪಚನದ ಕೆಲಸ ವನ್ನು ಮಾಡಿ ಮುಂದೆ ಜೀರ್ಣೇಂದ್ರಿಯ ಶ್ವಾಸೇಂದ್ರಿಯಗಳಾಗಿ ಪರಿ ಣಮಿಸುವುದು. ಮೂರನೆಯ ಪದರವು ಮಧ್ಯಪದರ (ಮೆಸೊಡರ್ಮ್) ಇದರಿಂದ ಅಸ್ಥಿಪಂಜರ ಮತ್ತು ಮಾಂಸಖಂಡಗಳ ರಚನೆಯಾಗುವುದು.

ಈ ಸಮಯದಲ್ಲಿ ತಲೆಯು ಉಳಿದ ಭಾಗಗಳಿಗಿಂತ ಬಹಳ ದೊಡ್ಡದಾಗಿರುವುದು. ಹೃದಯವೂ ದೊಡ್ಡದಾಗಿ ಕಾಣಿಸುವುದು.



ಚಿತ್ರ ೧೦—ದೇಹದ ಅಂಗಗಳ ಬೆಳವಣಿಗೆ ಮತ್ತು ಪ್ರಮಾಣ

ಮೂರನೆಯ ವಾರದಿಂದ ಹೃದಯವು ತನ್ನ ಕಾರ್ಯವನ್ನು ಪ್ರಾರಂಭಿಸು ವುದು. ನಾಲ್ಕನೆಯ ವಾರದ ನಂತರ ಕೈಕಾಲುಗಳು ಕಾಣಿಸಿಕೊಳ್ಳು

ವುವು. ಎಂಟನೆಯ ವಾರದೊಳಗೆ ಭ್ರೂಣವು ತತ್ತಿಯ ಗಾತ್ರಕ್ಕಿಂತ ಮೂವತ್ತು ಸಾವಿರದಷ್ಟು ಹೆಚ್ಚಾಗಿ ಗಾತ್ರದಲ್ಲಿ ಬೆಳೆಯುವುದು. ಆದರೂ ಇದರ ಉದ್ದವು ಒಂದು ಒಂದೂಕಾಲು ಅಂಗುಲದಷ್ಟಿರುವುದು. ತೂಕವು ಸುಮಾರು ೨ ಗ್ರ್ಯಾಮ್ (ಕಾಲು ತೊಲ) ನಷ್ಟಿರುವುದು. ಇಷ್ಟು ಪುಟ್ಟದಾದರೂ, ಮಾನವಭ್ರೂಣವೆಂದು ಯಾರು ಬೇಕಾದರೂ ನಿಸ್ಸಂದೇಹವಾಗಿ ಹೇಳಿಬಿಡಬಹುದು.[1]

ಒಂದು ತತ್ತಿಯು ಭಾಗ ವಿಭಾಗಗಳಾಗಿ ಮನುಷ್ಯಾಕಾರವನ್ನು ಹೇಗೆ ಪಡೆಯುವುದೆಂಬುದನ್ನು ವೈಜ್ಞಾನಿಕರು ಇನ್ನು ಕಂಡುಹಿಡಿಯ ಲಾರದವರಾಗಿರುವರು. ಮರಿಜೀವಕಣಗಳು ಬೇರೆ ಬೇರೆ ಅಂಗಗಳ ರೂಪನ್ನು ಹೇಗೆ ಪಡೆಯುವುವು ಎಂಬ ವಿಷಯವು ಇಂದಿಗೂ ಮಾನವನ ಅರಿವಿಗೆ ದೂರವಾಗಿರುವುದು. ಆದರೆ ಒಂದು ಅಂಶವು ಮಾತ್ರ ಗೊತ್ತಿರುವುದು. ಅದೇನೆಂದರೆ— ಕಣಸಮೂಹದಲ್ಲಿನ ಜೀವಕಣಗಳು ಆಕ್ರಮಿಸಿರುವ ಪ್ರತ್ಯೇಕಸ್ಥಾನಕ್ಕೂ, ಅವುಗಳ ಮುಂದಿನ ರಚನಾರೂಪಕ್ಕೂ ಒಂದು ನಿಕಟ ಸಂಬಂಧವಿದೆ. ಈ ಕಣಗಳನ್ನು ಕಣಸಮೂಹದ ಒಂದು ಭಾಗದಿಂದ ಮತ್ತೊಂದು ಭಾಗಕ್ಕೆ ತೆಗೆದಿಟ್ಟರೆ ಅದು ಆ ಭಾಗವನ್ನು ಅನ್ವಯಿಸಿ ಬೆಳೆಯುವುದು. ಉದಾಹರಣೆಗಾಗಿ ಒಂದು ಭಾಗದಲ್ಲಿರುವ ಕಣಗಳು ಮುಂದೆ ಚರ್ಮವಾಗಿ ಬೆಳೆಯುವುದೆನ್ನೋಣ. ಭ್ರೂಣಕಾಲದಲ್ಲಿ ಆ ಭಾಗದ ಕಣಗಳನ್ನು ತೆಗೆದು ಮುಂದೆ ಕಣ್ಣುಗಳಾಗುವ ಭಾಗದಲ್ಲಿ ಇಟ್ಟರೆ ಅದು ಬೆಳೆದಾಗ ಕಣ್ಣಾಗಿಯೇ ಪರಿಣಮಿಸುವುದು. ಅಂದರೆ ಕಣಗಳು ಯಾವ ಅಂಗವಾಗಿ ಬೆಳೆಯುವುದೆನ್ನುವ ಸೂಚನೆಯು ಅವುಗಳು ನೆಲೆಸಿರುವ ಸ್ಥಾನದ ಮೇಲೆ ಆಧಾರಪಟ್ಟಿರುವುದೆಂದು ಹೇಳಬಹುದು. ಕಣಗಳ ಗುಣಗಳಲ್ಲಿ ವ್ಯತ್ಯಾಸವಿಲ್ಲ, ಅವುಗಳ ರಚನಾಕ್ರಮದಲ್ಲಿ ವ್ಯತ್ಯಾಸವಿಲ್ಲ. ಸ್ಥಾನದಲ್ಲಿರುವ ವ್ಯತ್ಯಾಸವು ಮಾತ್ರ ಮುಂದೆ ವಿವಿಧ ಅಂಗಗಳ ರಚನೆಗೆ ಕಾರಣವಾಗುವುದು. ಮೇಲಿನ ವಿಷಯಗಳನ್ನು ಕೆಳದರ್ಜೆಯ ಪ್ರಾಣಿ

---

[1] ಚಿತ್ರ ೯ ನೋಡಿ

ಗಳ ಭ್ರೂಣಗಳ ಮೇಲೆ ಮಾಡಲಾಗಿರುವ ಪ್ರಯೋಗಗಳಿಂದ ಸಂಗ್ರಹಿಸಲಾಗಿದೆ.

ಹೀಗೆ ಭ್ರೂಣದಲ್ಲಿ ಒಂದು ಭಾಗದಿಂದ ಮತ್ತೊಂದು ಭಾಗಕ್ಕೆ ಕಣಗಳನ್ನು ಬದಲಾಯಿಸುವುದು ಕೀಳ್ತರಗತಿಯ ಪ್ರಾಣಿಗಳಲ್ಲಿ, ಅದರಲ್ಲಿಯೂ, ಭ್ರೂಣವು ಪ್ರಾರಂಭದೆಸೆಯಲ್ಲಿದ್ದಾಗ ಮಾತ್ರ ಸಾಧ್ಯ. ಭ್ರೂಣವು ಬಲಿತ ಮೇಲೆ ಈ ಪ್ರಯೋಗಗಳಿಂದ ಅದರ ರೂಪವು ವಿಕಾರವಾಗಬಹುದು ಅಥವಾ ಭ್ರೂಣವು ನಾಶವಾಗಬಹುದು. ಮೇಲ್ದರ್ಜೆಯ ಪ್ರಾಣಿಗಳಲ್ಲಿ ಈ ಪ್ರಯೋಗಗಳನ್ನು ನಡಸಲು ಸಾಧ್ಯವಿಲ್ಲ.

### ಗರ್ಭಾಂತರ ಶೈಶವಾವಸ್ಥೆ

ಗರ್ಭದೊಳಗಿನ ಬೆಳವಣಿಗೆಯ ಕೊನೆಯ ಮೂವತ್ತು ವಾರಗಳಲ್ಲಿ ದೇಹದ ನಾನಾ ಅಂಗಗಳು ಬೆಳೆಯುವುವು. ಅಂಗಗಳೆಲ್ಲವೂ



ಚಿತ್ರ ೧೧—ಸ್ಯಾಲಮ್ಯಾಂಡ್ರ ಭ್ರೂಣದ ಚಲನದ ಬೆಳವಣಿಗೆ

ಇಡೀ ದೇಹವನ್ನು ಅನ್ವಯಿಸಿಕೊಂಡು ಬೆಳೆಯುವುವು. ಹೀಗೆ ಬೆಳೆಯಬೇಕಾದರೆ, ಅಂಗಗಳ ಮೇಲೆ ಪೂರ್ಣದೇಹದ ಹತೋಟಿಯುಂಟಾಗಲು

ಒಂದು ವ್ಯವಸ್ಥೆ ಇರಬೇಕಾದುದು ಅಗತ್ಯ. ಈ ವ್ಯವಸ್ಥೆಯು ನರ ಮಂಡಲದಿಂದ ನಡೆಯುವುದು. ಮೊದಲಿನಿಂದಲೂ, ಪೂರ್ಣದೇಹವು ಪ್ರತಿಯೊಂದು ಅಂಗದ ಬೆಳವಣಿಗೆಯನ್ನು ಪ್ರಚೋದಿಸುವುದು. ಈ ಪ್ರಚೋದನೆಯು ನರಗಳ ಮೂಲಕ ಆಗುವುದು. ಆದುದರಿಂದ ತಾಯಿಯ ಗರ್ಭದಲ್ಲಿ ಮಗುವು ಬೆಳೆಯುತ್ತಿರುವಾಗ ನರಮಂಡಲವು ಮೊಟ್ಟಮೊದಲು ಬೆಳೆಯುವುದು. ಅಲ್ಲದೆ ನರಮಂಡಲದ ಬೆಳವಣಿಗೆಯು ಬೇರೆ ಅಂಗಗಳ ಬೆಳವಣಿಗೆಗಿಂತ ಮುನ್ನವೇ ಆಗಿ ಒಂದೊಂದು ಅಂಗಕ್ಕೂ ಅದರ ಬೆಳವಣಿಗೆಗೆ ತಕ್ಕಂತೆ ಪ್ರಚೋದನೆಯನ್ನುಂಟು ಮಾಡುವುದು. ಆದುದರಿಂದಲೇ ಭ್ರೂಣದ ಇತರ ಅಂಗಗಳಿಗಿಂತ ತಲೆಯು ದಪ್ಪನಾಗಿರುವುದು[1] ಈಚೀಚಿಗೆ ಗರ್ಭದೊಳಗಿನ ಶಿಶುವು ಹೇಗೆ ವರ್ತಿಸುವುದೆಂದು ಪರೀಕ್ಷಿಸಲಾಗಿದೆ. ಭ್ರೂಣವನ್ನು ಪ್ರಚೋದಿಸಿದರೆ ಯಾವ ವಿಧವಾದ ಪ್ರತಿಕ್ರಿಯೆಯುಂಟಾಗುವುದೆಂದು ಬಹಳ ಜಾಗರೂಕತೆಯಿಂದ ಕಂಡುಹಿಡಿದಿರುವರು. ಈ ವಿಚಾರವಾದ ಜ್ಞಾನವು ಮೂರು ವಿಧವಾದ ಅನ್ವೇಷಣಗಳಿಂದ ಮುಂದುವರಿದಿದೆ. ಅವಧಿಗೆ ಮುನ್ನವೇ ಹುಟ್ಟಿದ ಮಗುವನ್ನು ಪರೀಕ್ಷಿಸಿ ಅದು ಹೇಗೆ ವರ್ತಿಸುವುದೆಂದು ತಿಳಿಯಲಾಗಿದೆ ಗರ್ಭಕಟ್ಟಿದ ಮೂರು ತಿಂಗಳಿನ ಅನಂತರ ಹುಟ್ಟಿದ ಮಗು ಹೇಗೆ ವರ್ತಿಸುವುದೆಂಬುದನ್ನೂ, ನಾಲ್ಕು, ಐದು, ಆರು ಮತ್ತು ಏಳು ತಿಂಗಳಾದ ಮೇಲೆ ಹುಟ್ಟಿದ ಮಕ್ಕಳು ಹೇಗೆ ವರ್ತಿಸುವುವೆಂಬುದನ್ನೂ ಪರೀಕ್ಷಿಸಲಾಗಿದೆ. ಗರ್ಭದಲ್ಲಿ ಮಗು ಬೆಳೆಯುತ್ತಿರುವಾಗ ಕೆಲವು ಸಂದರ್ಭಗಳಲ್ಲಿ ತಾಯಿಯ ಜೀವಕ್ಕೆ ಹಾನಿಯುಂಟಾಗುವ ಸಂಭವ ಒದಗುವುದುಂಟು. ಆಗ ತಾಯಿಯ ಪ್ರಾಣವನ್ನುಳಿಸಲು ಶಸ್ತ್ರಚಿಕಿತ್ಸೆಮಾಡಿ ಹೊಟ್ಟೆಯೊಳಗಿನ ಮಗುವನ್ನು ಹೊರಕ್ಕೆ ತೆಗೆಯುವರು. ಇದಕ್ಕೆ 'ಸಿಸೇರಿಯನ್ ಆಪರೇಷನ್" ಎಂದು ಹೇಳುವರು. ಮಿನ್‌ಕೌಸ್ಕಿ ಎಂಬ ಶಾಸ್ತ್ರಜ್ಞನು ಹಲವಾರು ಭ್ರೂಣಗಳನ್ನು ಆಪರೇಷನ್‌ಮಾಡಿ ತೆಗೆದು ಅವುಗಳ

[1] ಚಿತ್ರ ೧೦

ವರ್ತನೆಯನ್ನು ಪರೀಕ್ಷಿಸಿ, ಹೆಚ್ಚಿನ ಜ್ಞಾನವನ್ನು ಒದಗಿಸಿರುವನು. ಈ ಎರಡು ವಿಧಾನಗಳಿಗಿಂತ ಮುಂದೆ ಹೇಳುವ ಮೂರನೆಯ ಪ್ರಾಯೋಗಿಕ ವಿಧಾನವು ಇನ್ನೂ ಹೆಚ್ಚಿನ ಜ್ಞಾನವನ್ನು ದೊರಕಿಸಿಕೊಟ್ಟಿರುವುದು. ಕಾಗ್‌ಹಿಲ್, ಪ್ರೇಯರ್ ಮುಂತಾದ ಭ್ರೂಣ ಶಾಸ್ತ್ರಜ್ಞರು ಸ್ಯಾಲಮ್ಯಾಂಡರ್, ಮೀನು, ಬೆಕ್ಕು ಮುಂತಾದ ಪ್ರಾಣಿಗಳಲ್ಲಿ ಪ್ರಯೋಗಗಳನ್ನು ನಡೆಯಿಸಿರುವರು. ಗರ್ಭ ಕಟ್ಟಿದ ಗೊತ್ತಾದ ಕಾಲದನಂತರ ಭ್ರೂಣವನ್ನು ಗರ್ಭದಿಂದ ಹೊರಕ್ಕೆ ತೆಗೆದು ಅದರ ವರ್ತನೆಯನ್ನು ಪರೀಕ್ಷಿಸಿದರು; ಮೊಟ್ಟೆಯ ಚಿಪ್ಪನ್ನು ಕೆಳಭಾಗದಲ್ಲಿ ಸ್ವಲ್ಪ ತೆಗೆದು ಒಳಗಿನ ಭ್ರೂಣದ ಚಲನೆಯನ್ನು ಪರೀಕ್ಷಿಸಿದರು. ಈ ಅಧ್ಯಾಯದಲ್ಲಿ ಈ ಪ್ರಯೋಗಗಳ ಸಾರಾಂಶವನ್ನು ಮಾತ್ರ ಕೊಡಲಾಗಿದೆ.

ಭ್ರೂಣದ ಚಲನೆಯನ್ನೂ ವರ್ತನದ ಮೂಲವನ್ನೂ ಪ್ರೇಯರ್‌ನು ಮೊಟ್ಟಮೊದಲನೆಯದಾಗಿ ಪರೀಕ್ಷಿಸಿದನು. ಈತನು ಅನೇಕ ಪ್ರಾಣಿಗಳ ಗುಣಗಳನ್ನು ಬಹು ಜಾಗರೂಕತೆಯಿಂದ ಪರೀಕ್ಷಿಸಿದನು. ಮುಖ್ಯವಾಗಿ ಟ್ರ್ರಾಟ್ ಎಂಬ ಒಂದು ಜಾತಿಯ ಮೀನನ್ನು ಪರಿಶೀಲಿಸಿ ಈತನು ಕಂಡು ಹಿಡಿದ ತತ್ವಗಳನ್ನು ಇಲ್ಲಿ ಕೊಡಲಾಗಿದೆ. ಗರ್ಭಕಟ್ಟಿದ ಸ್ವಲ್ಪ ಕಾಲದಮೇಲೆ, ಮೊಟ್ಟೆಯೊಳಗಿನ ಟ್ರ್ರಾಟು ಭ್ರೂಣದ ನಡುವಿನ ಚಲನವನ್ನು ನೋಡಿದನು. ನಡುವಿನ ಚಲನವು ಕಂಡು ಬಂದ ಮೂರನೆಯ ದಿನದ ನಂತರ ಭ್ರೂಣದಲ್ಲಿ ತಲೆಯು ಅಲುಗಾಡಿತು. ಆಮೇಲೆ ದೇಹವೆಲ್ಲವೂ ಚಲಿಸತೊಡಗಿತು. ಈ ಭ್ರೂಣವನ್ನು ಮೊಟ್ಟೆಯಿಂದ ಹೊರಗೆ ತೆಗೆದಮೇಲೆ ದೇಹದ ಯಾವ ಭಾಗದಲ್ಲಿ ಪ್ರಚೋದನೆ ಮಾಡಿದರೂ ಇಡೀ ದೇಹದಲ್ಲಿ ಚಲನೆಯುಂಟಾಗುವುದು. ಈ ಸಮಯದಲ್ಲಿ ಪ್ರತ್ಯೇಕ ಅಂಗಗಳ ಚಲನೆಯು ಕಂಡು ಬರುವುದಿಲ್ಲ. ಭ್ರೂಣವು ಬೆಳೆಯುತ್ತ ಹೋದಂತೆಲ್ಲ ಯಾವ ಅಂಗವನ್ನು ಪ್ರಚೋದಿಸಲಾಗುವುದೋ, ಆ ಅಂಗವು ಪ್ರತ್ಯೇಕವಾಗಿ ಚಲಿಸುವುದು.

ಕಾಗ್‌ಹಿಲ್‌ನು ಸ್ಯಾಲಮ್ಯಾಂಡ್ರ ಎಂಬ ದ್ವಿಚರ ಪ್ರಾಣಿಯ ಭ್ರೂಣವನ್ನು ಬಹು ಎಚ್ಚರಿಕೆಯಿಂದ ಪರಿಶೀಲಿಸಿದನು. ಈ ಭ್ರೂಣದ ಮೊದಲಿನ ಚಲನವು ತಲೆಯಿಂದ ಪ್ರಾರಂಭವಾಗುವುದು. ಇನ್ನು ಸ್ವಲ್ಪ

ಗಂಟೆಗಳಾದ ಮೇಲೆ ದೇಹವೆಲ್ಲವೂ ಅರ್ಧ ಚಂದ್ರಾಕಾರದಲ್ಲಿ ಬಗ್ಗು ವುದು.[1] ಈತನು ಕಂಡು ಹಿಡಿದಿರುವ ಮುಖ್ಯ "ಜನ್ಮಪೂರ್ವ ವರ್ತನಾ ನಿಯಮ" ವೇನೆಂದರೆ, ಚಲನೆಯು ತಲೆಯಿಂದ ಪ್ರಾರಂಭವಾಗಿ ಕ್ರಮೇಣ ಅವಯವಗಳ ಚಲನವುಂಟಾಗುವುದು. ಒಂದೊಂದು ಅವ ಯವವೂ ಮೊದಲು ಪೂರ್ಣದೇಹವನ್ನು ಅನ್ವಯಿಸಿ ಚಲಿಸುವುದು. ಆಮೇಲೆ ಬೆಳೆದನಂತರ, ಸ್ವತಂತ್ರವಾಗಿ ಚಲಿಸತೊಡಗುವುದು. ಒಂದೊಂದು ಅವಯುವದ ಚಲನೆಯಲ್ಲಿಯೂ ಮೊದಲು ಅವಯುವ ವೆಲ್ಲವೂ ಚಲಿಸುವುದು. ಆನಂತರ ಕ್ರಮೇಣ ಅವಯವದ ಭಾಗಗಳು ಪ್ರತ್ಯೇಕವಾಗಿ ಚಲಿಸುವುವು.

ಕ್ಯೊ ವೊ ಎಂಬಾತನು ಕೋಳಿಯ ಭ್ರೂಣವನ್ನು ಪರಿಶೀಲಿಸಿರು ವನು. ಈತನು ಗರ್ಭಕಟ್ಟಿದ ಕೋಳಿಯ ಮೊಟ್ಟೆಯನ್ನು ತೆಗೆದುಕೊಂಡು, ಅದರ ಚಿಪ್ಪಿನ ಒಂದು ಭಾಗವನ್ನು ತೆಗೆದು, ಒಳಗಿನ ಭ್ರೂಣದ ಬೆಳ ವಣಿಗೆಯನ್ನು ಪರಿಶೀಲಿಸಿದನು. ಮೊಟ್ಟೆಯೊಳಗಿನ ಕೋಳಿಮರಿಯ (ಭ್ರೂಣ) ಹೃದಯುವು ಮೊಟ್ಟೆಯಿಟ್ಟ ಮೂವತ್ತಾರು ಗಂಟೆಗಳಾದ ನಂತರ ಹೊಡೆದುಕೊಳ್ಳಲಾರಂಭಿಸುವುದು. ದೇಹದ ಅಲುಗಾಟವು ಅರವತ್ತಾರು ಗಂಟೆಗಳ ನಂತರವೂ, ತಲೆಯನ್ನು ಎತ್ತುವಿಕೆಯು ಅರ ವತ್ತೆಂಟು ಗಂಟೆಗಳಮೇಲೂ, ನಡುವಿನ ಚಲನವು ಎಂಭತ್ತುನಾಲ್ಕು ಗಂಟೆಗಳನಂತರವೂ, ತಲೆಯನ್ನು ತಿರುಗಿಸುವಿಕೆಯೂ ಕಾಲುಗಳ ಅಲುಗಾಟವೂ ತೊಂಭತ್ತು ಗಂಟೆಗಳಾದ ಮೇಲೆಯೂ ನಡೆಯುವು ವೆಂದು ಕಂಡುಹಿಡಿದನು.

ಕರೋನಿಯೋ ಎಂಬ ಮನಶ್ಶಾಸ್ತ್ರಜ್ಞನು ಬೆಕ್ಕಿನ ಭ್ರೂಣವನ್ನು ಪರೀಕ್ಷಿಸಿ ಈ ಕೆಳಗೆ ಸೂಚಿಸಿರುವ ಕ್ರಮವನ್ನು ಕಂಡು ಹಿಡಿದನು. ಹುಟ್ಟುವುದಕ್ಕೆ ಮುಂಚೆ, ಬೆಕ್ಕಿನ ಮರಿಯ ವರ್ತನೆಯು ಅದರ ತಾಯಿಯ ಹೊಟ್ಟೆಯೊಳಗಡೆಯೇ ನಿರಂತರವಾಗಿ ಬೆಳವಣಿಗೆಯನ್ನು ಹೊಂದುತ್ತಿರುವುದು. ಭ್ರೂಣದ ವರ್ತನೆಯು ಮೊಟ್ಟ ಮೊದಲು ದೇಹಾ

---

[1] ಚಿತ್ರ ೧೧

ದ್ಯಂತವಾದುದು; ಒಟ್ಟು ದೇಹವು ಅಲುಗುವುದು. ಕ್ರಮೇಣ ಒಂದೊಂದು ಭಾಗದ ಚಲನೆಯೂ ಪ್ರಾರಂಭವಾಗುವುದು. ಕ್ರಮೇಣ ಒಂದು ಭಾಗದ ಚಲನಕ್ಕೂ ಮತ್ತೊಂದು ಭಾಗದ ಚಲನಕ್ಕೂ ಹೊಂದಾವಣೆಯಿರುವುದು. ಇಲ್ಲಿಯೂ ತಲೆಯಿಂದ ಪ್ರಾರಂಭವಾದ ಚಲನಾಶಕ್ತಿಯು ಕ್ರಮೇಣ ಬಾಲದವರೆಗೂ ವ್ಯಾಪಿಸುವುದು. ಮತ್ತೊಂದು ತತ್ತ್ವವೇನೆಂದರೆ—ವರ್ತನೆಯು ಮೊದಮೊದಲು ದೊಡ್ಡದೊಡ್ಡ ಮಾಂಸಖಂಡಗಳಮೇಲೆ ಆಧಾರವಾಗಿದ್ದು ಭ್ರೂಣವು ಬೆಳೆದ ಹಾಗೆಲ್ಲಾ ಸಣ್ಣಸಣ್ಣ ಮಾಂಸಖಂಡಗಳ ಚಲನೆಯ ಮೇಲೆ ಆಧಾರವಾಗಿರುವುದು. ಕಾಲುಗಳು ಮೊದಲು ಪೂರ್ಣವಾಗಿ ಚಲಿಸಿ, ಅನಂತರ ಕೀಲುಗಳೂ, ನಖಗಳೂ, ಪ್ರತ್ಯೇಕವಾಗಿ ಚಲಿಸುವುವು.

ಮೇಲೆ ವಿವರಿಸಿರುವ ಪ್ರಯೋಗಗಳು ವರ್ತನದ ಬೆಳವಣಿಗೆಯು ಮೊಟ್ಟೆಯೊಳಗಾಗಲೀ, ತಾಯಿಯ ಹೊಟ್ಟೆಯೊಳಗಾಗಲಿ, ಬೆಳೆಯುತ್ತಿರುವ ಭ್ರೂಣಗಳಲ್ಲಿ ಯಾವ ಕ್ರಮವನ್ನು ಅನುಸರಿಸುವುದೆಂದು ತೋರಿಸಿಕೊಟ್ಟಿವೆ. ನೀರಿನಲ್ಲಿರುವ ಮೀನು, ದ್ವಿಚರಪ್ರಾಣಿಸ್ಯಾಲಮ್ಯಾಂಡ್ರ, ಹಾರಾಡುವ ಕೋಳಿ, ತಿರುಗಾಡುವ ಬೆಕ್ಕು, ಇವುಗಳೆಲ್ಲದರಲ್ಲಿಯೂ ಭ್ರೂಣದ ವರ್ತನದ ಬೆಳವಣಿಗೆಯು ಒಂದೇ ಕ್ರಮವನ್ನು ಅನುಸರಿಸಿ ನಡೆಯುತ್ತಿರುವುದೆಂಬ ವಿಷಯವು ಸ್ಪಷ್ಟವಾಗಿದೆ. ಈಗ ಮಾನವಗರ್ಭದಲ್ಲಿರುವ ಮಗು ಯಾವ ಕ್ರಮವನ್ನು ತೋರಿಸುವುದೆಂಬುದನ್ನು ನೋಡೋಣ.

ತಾಯಿಯ ಹೊಟ್ಟೆಯಲ್ಲಿರುವ ಮಗು ಚಲಿಸುವುದೆಂದು ಮನುಷ್ಯನಿಗೆ ಆದಿಯಿಂದ ಗೊತ್ತಿರುವ ವಿಷಯವೇ ಸರಿ. ಹಳೆಯ ಕತೆಗಳಲ್ಲಿ ಅನಾಗರಿಕರಾದ ಕಾಡುಮನುಷ್ಯರಲ್ಲಿ ಮತ್ತೆ ಎಲ್ಲರಲ್ಲಿಯೂ ಈ ತಿಳಿವಳಿಕೆಯಿರುವುದು. ಮತ್ತೊಂದು ಹಳೆಯ ನಂಬಿಕೆಯೇನೆಂದರೆ—ತಾಯಿಯ ಅನುಭವಗಳೂ, ಆಶೆ-ನಿರಾಶೆಗಳೂ ಹೊಟ್ಟೆಯಲ್ಲಿರುವ ಮಗುವಿನ ಮೇಲೆ ಪರಿಣಾಮವನ್ನುಂಟುಮಾಡುವುವು ಎಂದು ತಿಳಿದಿರುವರು. ಅಲ್ಲದೆ, ಭ್ರೂಣದಲ್ಲಿ ಗರ್ಭಕಟ್ಟಿದ ಅನಂತರ ಆತ್ಮವು ಪ್ರವೇಶಿಸುವುದು ಎಂದು ನಂಬಿ, ನಮ್ಮ ದೇಶದಲ್ಲಿಯೂ

ಪಾಶ್ಚಾತ್ಯದೇಶದಲ್ಲಿಯೂ, ಆತ್ಮವು ಎಷ್ಟು ಕಾಲದನಂತರ ಯಾವಾಗ ಪ್ರವೇಶಿಸುವುದೆಂದು ತರ್ಕಿಸುತ್ತಿದ್ದರು. ಪುರಾಣಗಳಲ್ಲಿ ಪ್ರಹ್ಲಾದ ಅಭಿಮನ್ಯು ಮುಂತಾದವರ ವಿಷಯದಲ್ಲಿ, ಗರ್ಭದಲ್ಲಿ ಬೆಳೆಯುತ್ತಿರುವ ಮಗುವಿನ ಜ್ಞಾನೇಂದ್ರಿಯ ಶಕ್ತಿಯನ್ನು ಕುರಿತು ಪ್ರಸ್ತಾಪಿಸಿರುವರು. ಇದರಿಂದ ಗರ್ಭದಲ್ಲಿರುವ ಮಗುವು ಶಾರೀರಿಕ ಬೆಳವಣಿಗೆಯನ್ನು ಪ್ರತ್ಯೇಕವಾಗಿ ಹೊಂದುತ್ತಿರುವುದೇ ಅಲ್ಲದೆ, ಅವರ ಜ್ಞಾನೇಂದ್ರಿಯ ಕರ್ಮೇಂದ್ರಿಯಗಳು ಸಂಪೂರ್ಣ ಬೆಳವಣಿಗೆಯನ್ನು ಗರ್ಭದಲ್ಲಿಯೇ ಪಡೆದಿರುವುವೆಂದೂ, ತಾಯಿಗೆ ಹೇಳುವ ಮಾತುಗಳನ್ನು ಅದು ಕೇಳಿ, ಗ್ರಹಿಸಿ ನಂತರ ಹುಟ್ಟಿ ದೊಡ್ಡವರಾದ ಮೇಲೆ ಆ ಅನುಭವಗಳನ್ನು ಉಪಯೋಗಿಸಿಕೊಳ್ಳುವ ಶಕ್ತಿಯುಳ್ಳವರಾದರೆಂದೂ ತಿಳಿದುಬಂದಿದೆ. ಈ ನಂಬಿಕೆಗಳೆಲ್ಲವೂ ನಿರಾಧಾರವಾದುವುಗಳೆಂದು ಇಂದಿನ ವಿಜ್ಞಾನವು ಸ್ಥಿರಪಡಿಸುವುದು. ಆಧುನಿಕ ಜೀವವಿಜ್ಞಾನವು ಮನುಷ್ಯರಲ್ಲಿಯೂ ಇತರ ಪ್ರಾಣಿಗಳಲ್ಲಿಯೂ, ಭ್ರೂಣವು ಯಾವ ಕ್ರಮವನ್ನನುಸರಿಸಿ ಬೆಳೆಯುವುದೆಂದೂ, ತಾಯಿಗೂ ಗರ್ಭಾಂತರ ಶಿಶುವಿಗೂ ಇರುವ ಪರಸ್ಪರ ಸಂಬಂಧಗಳು ಎಂತಹವೆಂದೂ ನಿರ್ದಿಷ್ಟವಾಗಿ ಕಂಡುಹಿಡಿಯಲು ಪ್ರಯತ್ನಿಸಿರುವುದು. ಈ ಜ್ಞಾನದ ಪ್ರಕಾರ ತಾಯಿಗೂ, ಆಕೆಯ ಗರ್ಭದಲ್ಲಿರುವ ಮಗುವಿಗೂ ಹೊಕ್ಕಳಿನ ಗರ್ಭನಾಳಗಳಿಂದಲೂ, ಶಾರೀರಿಕ ಒತ್ತಡ, ಅಡಚಣೆಗಳಿಂದಲೂ ಸಂಬಂಧವುಂಟಾಗಿದೆಯೆಂದು ತಿಳಿದುಬಂದಿದೆ ಆದುದರಿಂದ ತಾಯಿಯ ಮಾನಸಿಕ ಅನುಭವಗಳು ಮಗುವಿನ ಮೇಲೆ ಯಾವ ಪರಿಣಾಮವನ್ನುಂಟುಮಾಡಲೂ ಸಾಧ್ಯವಿಲ್ಲ.

ಗರ್ಭಾಂತರ ಶಿಶುವಿನ ಬೆಳವಣಿಗೆಯು ಯಾವ ಕ್ರಮದಿಂದ ಆಗುವುದೆಂಬುದನ್ನು ಈಗ ನೋಡೋಣ. ಗರ್ಭಕಟ್ಟಿದ ತತ್ತಿಯ ಎರಡು ವಾರಗಳ ಬೆಳವಣಿಗೆಯನ್ನೂ ಭ್ರೂಣದ ಆರು ವಾರಗಳ ಬೆಳವಣಿಗೆಯನ್ನೂ ಹಿಂದಿನ ಪುಟಗಳಲ್ಲಿ ನೋಡಲಾಗಿದೆಯಷ್ಟೆ. ಮೂರನೆಯ ತಿಂಗಳಿನಿಂದ ಮಗುವಿನ ಬೆಳವಣಿಗೆಯು ತೀವ್ರವಾಗಿ ನಡೆಯುವುದು. ಹತ್ತು ತಿಂಗಳಿನ ಅನಂತರ ಹೊರಗೆ ಬರುವ ಮಗುವಿನ ಎತ್ತರವು ಗರ್ಭದಲ್ಲಿರುವ ಈ ಮೂರು ತಿಂಗಳ ಮಗುವಿನ ಎತ್ತರದ

ಏಳರಷ್ಟಿರುವುದು. ಈ ಬೆಳವಣಿಗೆಯ ತೀವ್ರತೆಯನ್ನು ಮತ್ತೊಂದು ವಿವರಣೆಯಿಂದಲೂ ತೋರಿಸಬಹುದು. ಗರ್ಭದಲ್ಲಿರುವ ಮೂರು ತಿಂಗಳ ಮಗುವಿಗೂ, ನಾಲ್ಕು ತಿಂಗಳ ಮಗುವಿಗೂ, ಬಹಳ ವ್ಯತ್ಯಾಸವು ಕಂಡುಬರುವುದು. ಗರ್ಭದೊಳಗಿನ ನಾಲ್ಕು ತಿಂಗಳ ಮಗು ಮೂರು ತಿಂಗಳ ಮಗುವಿನ ಎರಡರಷ್ಟಿರುವುದು.




ಚಿತ್ರ ೧೨—ಗರ್ಭದಲ್ಲಿನ ಭ್ರೂಣದ ಎತ್ತರದ ಬೆಳವಣಿಗೆ

ಮಕ್ಕಳ ವರ್ತನೆಯಲ್ಲಿ ಆಸಕ್ತಿಯನ್ನಿಟ್ಟಿರುವವರಿಗೆ, ಗರ್ಭದಲ್ಲಿ ನರಮಂಡಲವು ಯಾವ ಕ್ರಮದಲ್ಲಿ ಬೆಳೆಯುವುದೆಂಬ ವಿಷಯವು ಬಹಳ ಮುಖ್ಯವಾದುದು. ಏಕೆಂದರೆ ವರ್ತನೆಯು ನರಮಂಡಲದ ಮೇಲೆ ನಿಂತಿರುವುದು. ನರಮಂಡಲದ ರಚನೆಯು ಭ್ರೂಣಾವಸ್ಥೆಯಲ್ಲಿಯೇ, ಎಂದರೆ, ಗರ್ಭಕಟ್ಟಿದ ಎರಡು ತಿಂಗಳುಗಳೊಳಗೆಯೇ, ಆಗಿರುವುದು. ನರಮಂಡಲವು ಮೊದಲು ನರದ ಕೊಳವೆಯಾಗಿ

ಕಾಣಿಸಿಕೊಳ್ಳುವುದು. ಈ ಕೊಳವೆಯ ಮೇಲ್ಭಾಗವು ಮೆದುಳಾಗುವುದು. ಕೆಳಭಾಗವು ಮೆದುಳು ಬಳ್ಳಿಯಾಗುವುದು. ಗರ್ಭಕಟ್ಟಿದ ಐದನೇ ವಾರದಲ್ಲಿಯೇ ಮೆದುಳಿನ ಭಾಗಗಳು ಸ್ಪಷ್ಟವಾಗಿ ರಚನೆಗೊಳ್ಳುವುವು. ಮೂರು ತಿಂಗಳೊಳಗೆ ಎಲ್ಲಾ ಭಾಗಗಳೂ ಚೆನ್ನಾಗಿ ಬೆಳೆದಿರುವುವು. ನರಮಂಡಲದ ಬೆಳೆವಣಿಗೆಗೂ, ಜ್ಞಾನೇಂದ್ರಿಯ, ಕರ್ಮೇಂದ್ರಿಯಗಳ ಬೆಳೆವಣಿಗೆಗೂ, ಒಂದು ನಿಕಟ ಸಂಬಂಧವಿದೆ ನಾವು ಮೇಲೆ ನೋಡಿದ ಹಾಗೆ ಅಂಗಾಂಗಗಳು ಬೆಳೆವಣಿಗೆಯಾಗಲು ನರಮಂಡಲದಿಂದ ಪ್ರಚೋದನೆಯೂ ಆವಶ್ಯಕ. ಆದುದರಿಂದ ಒಂದು ಅಂಗವೇ ಆಗಲಿ ಅಥವಾ ಒಂದು ಇಂದ್ರಿಯವೇ ಆಗಲಿ ಬೆಳೆಯುವುದಕ್ಕೆ ಮೊದಲು ಅದಕ್ಕೆ ಪ್ರಚೋದನೆಯನ್ನು ಕೊಡುವ ನರಮಂಡಲದ ಭಾಗವು ಬೆಳೆಯಬೇಕಾಗುವುದು.

ಮೀನಿನ ಭ್ರೂಣ, ಸ್ಯಾಲಮಂಡ್ರ ಮೊದಲಾದುವುಗಳಲ್ಲಿ ನಾವು ನೋಡಿದ ಹಾಗೆ, ಮಾನವ ಭ್ರೂಣದಲ್ಲಿ ಸಹ ಬೆಳೆವಣಿಗೆಯು ತಲೆ-ಕಾಲು ಕ್ರಮದಲ್ಲಿ ನಡೆಯುವುದು. ತಲೆಯಿಂದ ಹಿಡಿದು ಕ್ರಮವಾಗಿ ಕತ್ತು, ಭುಜ, ಎದೆ, ಹೊಟ್ಟೆ, ನಡು, ಕೈಕಾಲು, ಮುಂತಾದ ಅಂಗಗಳು ಬೆಳೆಯುವುವು. ಕೈಮೊಗ್ಗುಗಳು ಕಾಲು ಮೊಗ್ಗುಗಳಿಗಿಂತ ಮೊದಲು ಕಾಣಿಸಿಕೊಳ್ಳುವುವು. ಮೊದಲಿನ ಮೂರು ತಿಂಗಳುಗಳಲ್ಲಿ ತಲೆಯು ಬಹಳ ಮಟ್ಟಿಗೆ ಬೆಳೆದಿರುವುದು. ಆದರೆ ಕೈಕಾಲುಗಳು ಬಹಳ ಸಣ್ಣದಾಗಿರುವುವು.

ವೈದ್ಯರು ತಮ್ಮ ಸ್ಟೆತಸ್ಕೋಪಿನ ಸಹಾಯದಿಂದ ತಾಯಿಯ ಗರ್ಭದಲ್ಲಿ ಮಗುವಿನ ಅಲುಗಾಟವನ್ನು ಹದಿನಾಲ್ಕನೆಯ ವಾರದಲ್ಲಿಯೇ ಕಂಡುಹಿಡಿಯಬಲ್ಲರು. ಈ ಅಲುಗಾಟವನ್ನು ತಾಯಿಯು ೧೬-೧೭ನೇ ವಾರದಲ್ಲಿ ಮಾತ್ರ ತಿಳಿಯಬಲ್ಲಳು. ಭ್ರೂಣದ ಮೂರನೆ ವಾರದಲ್ಲಿಯೇ ಹೃದಯವು ಹೊಡೆದುಕೊಳ್ಳಲು ಆರಂಭವಾಗುವುದು ಕ್ರಮೇಣ ಇದರ ಶಬ್ದವು ಹೆಚ್ಚಾಗಿ ೧೮ ನೇ ವಾರದಲ್ಲಿ ವೈದ್ಯನು ತನ್ನ ಸ್ಟೆತಸ್ಕೋಪಿನ ಮೂಲಕ ಕೇಳಲು ಸಾಧ್ಯವಾಗುವುದು.

ಸ್ವಿಟ್ಸರ್ಲೆಂಡಿನ ಮಿರ್ಕೌಸ್ಕಿ, ಅಮೆರಿಕ ದೇಶದ ಹೂಕರ್ ಇವರು

ತಾಯಿಗೆ ಹಾನಿಯಾಗದಂತೆ ಆಪರೇಷನ್ ಮೂಲಕ ಮಗುವನ್ನು ಹೊರಗೆ ತೆಗೆಯುತ್ತಿದ್ದರು. ಇವರಿಬ್ಬರೂ ಭ್ರೂಣದ ವಯಸ್ಸು, ಅಂಗಾಂಗಗಳ ರಚನೆ, ಎತ್ತರ, ತೂಕ, ಪ್ರಚೋದನೆಗೆ ಪ್ರತಿಕ್ರಿಯೆ, ಮುಂತಾದ ವಿಷಯಗಳನ್ನು ಸಂಗ್ರಹಿಸುತ್ತಿದ್ದರು. ಹೂಕರನು ಭ್ರೂಣವನ್ನು ಹೊರಗೆ ತೆಗೆದ ಸಮಯದಿಂದ ಅದು ಸಾಯುವವರೆಗೂ ಅದರಮೇಲೆ ನಡೆಸಿದ ಪ್ರಯೋಗಗಳನ್ನೆಲ್ಲಾ ಚಲನಚಿತ್ರವನ್ನು ತೆಗೆದು ಆಮೇಲೆ ನಿಧಾನವಾಗಿ ಅವುಗಳನ್ನು ಪರೀಕ್ಷಿಸಿದನು. ಕೆಳಗೆ ವಿವರಿಸಿರುವ ಜ್ಞಾನವು ಈ ರೀತಿ ಯಿಂದ ಒದಗಿದುದೇ ಆಗಿದೆ.

ಮೆತ್ತಗೆ ಮುಟ್ಟಿದರೆ ಎಂಟನೆಯ ವಾರದ ಭ್ರೂಣವು ಪ್ರತಿಕ್ರಿಯೆ ಯನ್ನು ತೋರಿಸುವುದು (ಸ್ವಲ್ಪಮಟ್ಟಿಗೆ ಅಲುಗುವುದು). ಎಂಟು ವಾರಗಳಿಂದ ಹದಿನಾಲ್ಕು ವಾರಗಳೊಳಗೆ ಭ್ರೂಣವು ಅನೇಕ ಪ್ರತಿಕ್ರಿಯೆ ಗಳನ್ನು ತೋರಿಸಲು ಸಾಮರ್ಥ್ಯವುಳ್ಳದ್ದಾಗುವುದು. ಈ ಪ್ರತಿಕ್ರಿಯೆ ಗಳು ರಿಫ್ಲೆಕ್ಸ್ ಪ್ರತಕ್ರಿಯೆಗಳು. ರಿಫ್ಲೆಕ್ಸ್ ಪ್ರತಿಕ್ರಿಯೆಗಳು ದೇಹದ ಒಂದು ಭಾಗವನ್ನು ಪ್ರಚೋದನೆ ಮಾಡಿದರೆ ನರಮಂಡಲದ ಪ್ರಭಾವ ದಿಂದ ತಕ್ಷಣ ವುಂಟಾದ ಪ್ರತಿಕ್ರಿಯೆಗಳು. ಇವು ನಮ್ಮ ಯೋಚನಾ ಸಂವೇದನಗಳಮೇಲೆ ಆಧಾರ ಪಟ್ಟಿರುವ ಪ್ರತಿಕ್ರಿಯೆಗಳಲ್ಲ. ಇವು ನಮ್ಮ ಇಚ್ಛೆಗೆ ಅಧೀನವಾಗಿರುವುದಿಲ್ಲ. ಸಾಧಾರಣವಾಗಿ ಇವು ಮೆದಳು ಬಳ್ಳಿಯು ಮತ್ತು ಮೆದುಳಿನ ಹಿಂಭಾಗದಮೇಲೆ ಆಧಾರವಾಗಿರುವ ಪ್ರತಿ ಕ್ರಿಯೆಗಳು. ಈ ಪ್ರತಿಕ್ರಿಯೆಗಳು ಪ್ರಚೋದನೆಯಾದ ತಕ್ಷಣವೇ ಉಂಟಾಗುವುವು, ಮತ್ತು ಯಾವಾಗಲೂ ಒಂದೇ ವಿಧದಲ್ಲಿ ನಡೆಯುವುವು ಇವು ಕಲಿತಿರುವ ಪ್ರತಿಕ್ರಿಯೆಗಳಲ್ಲ. ಆದುದರಂದಲೇ ಗರ್ಭದೊಳಗಿನ ಭ್ರೂಣದಲ್ಲಿಯೇ ಕಾಣಿಸಿಕೊಳ್ಳುವುವು. ಇವುಗಳ ಮತ್ತೊಂದು ಗುಣ ವೇನೆಂದರೆ ಇವು ಪುನರಾವರ್ತನದಿಂದ ಬದಲಾವಣೆಯನ್ನು ಹೊಂದುವು ದಿಲ್ಲ ಅಂಗಾಲನ್ನು ಮುಟ್ಟಿದರೆ ಬೆರಳುಗಳು ತಕ್ಷಣವೇ ಬಗ್ಗುವುವು. ಮೊಣಕಾಲಿನ ಚಿಪ್ಪಿನಮೇಲೆ ಹೊಡೆದರೆ ಕೂಡಲೆ ಕಾಲು ಬಾಗುವುದು. ಆರು ತಿಂಗಳಿನ ಭ್ರೂಣವು ಬಾಯಿಯನ್ನು ಮುಟ್ಟಿದರೆ ಚೀಪುವ ಪ್ರತಿ ಕ್ರಿಯೆಯನ್ನು ತೋರಿಸುವುದು.

ಉಸಿರಾಡುವ ಪ್ರತಿಕ್ರಿಯೆಯೊಂದನ್ನು ಬಿಟ್ಟು ಇನ್ನುಳಿದ ರಿಫ್ಲೆಕ್ಸ್ ಪ್ರತಿಕ್ರಿಯೆಗಳೆಲ್ಲವನ್ನೂ ೧೪-೧೫ ವಾರದ ಭ್ರೂಣವು ತೋರಿಸುವುದು. ಉಸಿರಾಡುವ ಪ್ರತಿಕ್ರಿಯೆಯು ಹುಟ್ಟಿದನಂತರ ಆರಂಭವಾಗುವುದು. ಮುಖ್ಯವಾಗಿ ಗಮನದಲ್ಲಿಡಬೇಕಾದ ಅಂಶವೇನೆಂದರೆ, ೮ನೆಯ ವಾರದಿಂದ ೧೪ನೆಯ ವಾರದೊಳಗೆ, ಈ ಏಳು ವಾರಗಳಲ್ಲಿ ಭ್ರೂಣವು ನಾನಾವಿಧವಾದ ಪ್ರತಿಕ್ರಿಯೆಗಳನ್ನು ಮಾಡುವಷ್ಟು ಬೆಳವಣಿಗೆಯನ್ನು ಹೊಂದುವುದು.

ಮಾನವ ಭ್ರೂಣದ ಮೊದಲಿನ ಪ್ರತಿಕ್ರಿಯೆಗಳು ಮೇಲೆನೋಡಿದ ಸ್ಯಾಲಮ್ಯಾಂಡ್ರದ ಭ್ರೂಣದ ಪ್ರತಿಕ್ರಿಯೆಗಳನ್ನು ಹೋಲುವುವು. ಕತ್ತಿನ ಹತ್ತಿರ ಒಂದು ಕಡೆ ಪ್ರಚೋದನೆ ಮಾಡಿದರೆ ದೇಹವು ಎದುರುಕಡೆಗೆ ಬಗ್ಗುವುದು. ಕೈ-ಕಾಲುಗಳು ಸ್ವತಂತ್ರವಿಲ್ಲದೆ ದೇಹದ ಚಲನೆಯನ್ನು ಅನುಸರಿಸುವುವು. ಗರ್ಭಕಟ್ಟಿದ ಹತ್ತು ವಾರಗಳಾದ ಮೇಲೆ, ತಲೆಯು ಚಲಿಸುವುದು. ಸೊಂಟ ಬಗ್ಗುವುದು, ಭುಜಗಳು ಅಲುಗುವುವು; ೧೨ ವಾರಗಳ ಅನಂತರ ದೇಹದ ಚಲನೆಯನ್ನನುಸರಿಸಿ, ಮೊಣಕೈ, ಮೊಣಕಾಲುಗಳು ಬಗ್ಗುವುವು. ೧೪ ವಾರಗಳಾದ ಮೇಲೆ ಮುಂಗೈ ಮತ್ತು ಬೆರಳುಗಳು ಹಿಡಿಯುವಹಾಗೆ ಬಗ್ಗುವುವು.

ಮೇಲಿನ ವಿವರಣೆಗಳಿಂದ ವರ್ತನದ ಬೆಳವಣಿಗೆಯು ಒಂದು ಗೊತ್ತಾದ ಕ್ರಮದಿಂದ ನಡೆಯುವುದೆಂದು ತಿಳಿದುಬರುವುದು. ಭ್ರೂಣದ ಚಲನದ ಬೆಳವಣಿಗೆಯು ಕೆಳಗೆ ಸೂಚಿಸಿರುವ ಎರಡು ನಿಯಮಗಳನ್ನು ಅನುಸರಿಸುವುದು.

(೧) ದೇಹಾದ್ಯಂತ ಚಲನವು ಅಂಗಗಳ ಚಲನೆಗಿಂತ ಮೊದಲಾಗುವುದು. ಭ್ರೂಣದ ಪ್ರತಿಕ್ರಿಯೆಗಳು ಪ್ರತ್ಯೇಕ ಪ್ರತಿಕ್ರಿಯೆಗಳಲ್ಲ. ಒಂದು ಕಡೆ ಮುಟ್ಟಿದರೆ ಆ ಭಾಗವೆಲ್ಲ ಚಲಿಸುವುದು. ಭ್ರೂಣವು ಬೆಳೆಯುತ್ತ ಬೆಳೆಯುತ್ತ ಪ್ರತ್ಯೇಕ ಅಂಗಗಳ ಚಲನೆಯು ತಲೆದೋರುವುದು.

(೨) ದೈಹಿಕ ಬೆಳವಣಿಗೆಯು ತಲೆಯಿಂದ ಹಿಡಿದು ಕಾಲಿನವರೆಗೂ ಕ್ರಮವಾಗಿ ಹೇಗೆ ಉಂಟಾಗುವುದೋ ಅದೇ ರೀತಿಯಲ್ಲಿ

ಭ್ರೂಣದ ವರ್ತನೆಯ ಬೆಳವಣಿಗೆಯೂ ತಲೆಯಿಂದ ಪ್ರಾರಂಭಿಸಿ, ಕ್ರಮೇಣ ಕಾಲಿನವರೆಗೂ ವ್ಯಾಪಿಸುವುದು. ಈ ಕ್ರಮುವನ್ನು ಭ್ರೂಣದಲ್ಲಿ ಮಾತ್ರವಲ್ಲದೆ ಹುಟ್ಟಿದಮೇಲೆಯೂ ನೋಡಬಹುದು.[1]

## ಇಂದ್ರಿಯಶಕ್ತಿಯ ಬೆಳವಣಿಗೆ

ಮೇಲೆ ನೋಡಿದಂತೆ, ಭ್ರೂಣವು ಎಂಟನೆಯ ವಾರದಿಂದ, ಮೆತ್ತಗೆ ಮುಟ್ಟಿದರೆ, ಅಲುಗುವುದು. ಅಂದರೆ ಆ ವಯಸ್ಸಿನಲ್ಲಿಯೇ ಸ್ಪರ್ಶೇಂದ್ರಿಯಗಳು ಚಟುವಟಿಕೆಯನ್ನು ತೋರಿಸಲಾರಂಭಿಸುವುವು. ಹುಟ್ಟುವುದಕ್ಕೆ ಮುಂಚೆಯೇ, ಶೀತೋಷ್ಣಗಳಿಂದ ಪ್ರಚೋದಿಸಲ್ಪಡುವ ಶಕ್ತಿಯನ್ನು ಪಡೆದಿರುವುದು. ಸ್ಪರ್ಶೇಂದ್ರಿಯಗಳ ಶಕ್ತಿಯು ಮೊದಲು ತಲೆ ಕತ್ತುಗಳಲ್ಲಿ ಕಾಣಿಸಿಕೊಂಡು ಕ್ರಮೇಣ ದೇಹದ ಇತರ ಭಾಗಗಳಲ್ಲಿ ಗೋಚರಿಸುವುದು ಭ್ರೂಣವು ಸ್ವಲ್ಪ ಬೆಳೆದ ಮೇಲೆ ಸ್ಪರ್ಶದ ಒಂದೊಂದು ತೀವ್ರತೆಗೆ ಒಂದೊಂದು ವಿಧವಾಗಿ ವರ್ತಿಸುವುದು. ಮೆತ್ತಗೆ ಮುಟ್ಟಿದರೆ, ಪ್ರಚೋದನೆಯ ಕಡೆಗೇ ಅಂಗವನ್ನು ವಾಲಿಸುವುದು. ಹೆಚ್ಚು ತೀವ್ರತೆಯಿಂದ ಮುಟ್ಟಿದರೆ ಅಂಗವನ್ನು ಹಿಂತೆಗೆಯುವುದು. ಅಂಗವು ತೀವ್ರತೆಯಿಂದ ಚಲಿಸುವುದು. ಈ ವರ್ತನೆಯು ಮಗು ಹುಟ್ಟಿದ ಮೇಲೆಯೂ ಕಾಣಿಸಿಕೊಳ್ಳುವುದು. ಇದೇ ಆಕರ್ಷಣವರ್ತನೆಗೂ, ನಿರಾಕರಣವರ್ತನೆಗೂ ಅಡಿಗಲ್ಲು. ಪೂರ್ಣವಾಗಿ ಬೆಳವಣಿಗೆಯನ್ನು ಹೊಂದಿರುವ ಮಗು ಸಹ ಹೊಟ್ಟೆಯ ಕೆಳಗೆ ನೋವಿಗೆ ಪ್ರತ್ಯೇಕ ಪ್ರತಿಕ್ರಿಯೆಯನ್ನು ತೋರಿಸುವುದಿಲ್ಲ. ಕಣ್ಣಿನ ಚಲನವು ಹುಟ್ಟುವುದಕ್ಕಿಂತ ಮುಂಚೆಯೇ ಕಾಣಿಸಿಕೊಳ್ಳುವುದು. ಆದರೆ ಈ ಚಲನೆಗೆ ಕಾರಣ ಬೆಳಕಿನಲ್ಲಿ ದೇಹದ ಸ್ಥಾನಪಲ್ಲಟ. ಅವಧಿಗೆ ಮುಂಚೆ ಹುಟ್ಟಿದ ಮಕ್ಕಳು ಬೆಳಕು–ಕತ್ತಲೆಗೆ ಪ್ರತಿಕ್ರಿಯೆಯನ್ನು ತೋರಿಸಬಲ್ಲವು. ಕಣ್ಣಿನ ಪಾಪೆಯು ರಿಫ್ಲೆಕ್ಸ್ ಪ್ರತಿಕ್ರಿಯೆಯನ್ನು ತೋರಿಸಬಲ್ಲುದು. ಅಂದರೆ ಹುಟ್ಟುವುದಕ್ಕಿಂತ ಮುಂಚೆಯೇ ಕಣ್ಣಿನ ರಚನೆಯು ಮುಗಿದಿರುವುದು.

---

1. ಆರನೆಯ ಅಧ್ಯಾಯವನ್ನು ನೋಡಿ.

ವಾಸನೆ ಮತ್ತು ರುಚಿ, ಈ ಇಂದ್ರಿಯಗಳೂ ಪೂರ್ಣರಚನೆಯನ್ನು ಪಡೆದಿರುವುವು. ಆದರೆ ಹುಟ್ಟುವುದಕ್ಕೆ ಮೊದಲು, ಇವುಗಳ ಪ್ರಚೋದನಕ್ಕೆ ಅವಕಾಶವೇ ಇಲ್ಲ. ಗರ್ಭಾಂತರ ಶಿಶು, ಹುಟ್ಟುವುದಕ್ಕೆ ಒಂದು ತಿಂಗಳು ಮುಂಚೆಯೇ, ದೊಡ್ಡ ಶಬ್ದಕ್ಕೆ ಪ್ರತಿಕ್ರಿಯೆಯನ್ನು ತೋರಿಸುವುದು. ಆದರೆ ಈ ಪ್ರತಿಕ್ರಿಯೆಯು ಶ್ರವಣಸಂಬಂಧವಾದುದಲ್ಲ. ಕೇವಲ ಶಬ್ದದ ಅದುರುವಿಕೆಯಿಂದುಂಟಾದುದೆಂದು ಶಾಸ್ತ್ರಜ್ಞರು ಹೇಳುವರು. ತಾಯಿಯ ಗರ್ಭದಲ್ಲಿರುವ ಮಗುವಿನ ಹೊರಕಿವಿ ಮತ್ತು ಒಳಕಿವಿಗಳ ತುಂಬ ಒಂದು ಮಂದವಾದ ರಸವಿರುವುದು. ಆದುದರಿಂದ ಶಬ್ದವು ಕಿವಿಯೊಳಗೆ ಹೋಗಲು ಅವಕಾಶವೇ ಇರುವುದಿಲ್ಲ. ಈ ರೀತಿ ಗರ್ಭಾಂತರ ಶಿಶುವಿನ ಇಂದ್ರಿಯ ಶಕ್ತಿಗಳಲ್ಲಿ ಕೆಲವು ವಿಕಾಸ ಹೊಂದಿಯೂ, ಮತ್ತೆ ಕೆಲವು ವಿಕಾಸಹೊಂದದೆಯೂ ಇರುವುವು.

ಹುಟ್ಟುವುದಕ್ಕಿಂತ ಮೊದಲು, ಮಗು ಯಾವ ವರ್ತನೆಯನ್ನು ತೋರಿಸುವುದು? ವರ್ತನೆಗೆ ಸಂಬಂಧಪಟ್ಟ ನರಮಂಡಲ ಮಾಂಸಖಂಡ ಮತ್ತು ಇಂದ್ರಿಯಗಳ ಬೆಳವಣಿಗೆಯು ಗರ್ಭದಲ್ಲಿ ಹೇಗೆ ಉಂಟಾಗುವುದು? ಎಂಬ ಪ್ರಶ್ನೆಗಳೆಲ್ಲವೂ ಇತ್ತೀಚೆಗೆ ಮುಖ್ಯವಾದುವೆಂದು ಪರಿಗಣಿಸಲ್ಪಟ್ಟಿವೆ. ಇದಕ್ಕೆ ಮುಂಚೆ, ವರ್ತನೆಯ ಉತ್ಪತ್ತಿಯನ್ನು ಕುರಿತು ಶಾಸ್ತ್ರಜ್ಞರು ನಾನಾರೀತಿಯಾಗಿ ತರ್ಕಮಾಡುತ್ತಿದ್ದರು. ಇವುಗಳಲ್ಲಿ ಮುಖ್ಯವಾದ ಎರಡು ವಾದಗಳಿವೆ—ಒಂದು ಸಹಜಪ್ರವೃತ್ತಿವಾದ (ಥಿಯರಿ ಆಫ್ ಇನ್ಸ್ಟಿಂಕ್ಟ್ಸ್) ಮತ್ತೊಂದು ರಿಫ್ಲೆಕ್ಸ್‌ವಾದ. ಈ 'ಸಹಜಪ್ರವೃತ್ತಿವಾದ'ದ ಪ್ರಕಾರ ಮಕ್ಕಳು ಹುಟ್ಟಿದ ಸಮಯದಿಂದ ಕೆಲವು ಸಹಜ ಪ್ರವೃತ್ತಿಗಳನ್ನು ತೋರಿಸುವುವು ಈ ಪ್ರವೃತ್ತಿಗಳ ಆಧಾರದ ಮೇಲೆ ಮಾನಸಿಕ ಬೆಳವಣಿಗೆಯುಂಟಾಗುವುದೆಂದು ನಂಬಿಕೆ ಇರುವುದು. ರಿಫ್ಲೆಕ್ಸ್‌ವಾದದ ಪ್ರಕಾರ ವರ್ತನದ ಉತ್ಪತ್ತಿಯು ದೇಹಕ್ಕೆ ಸಹಜವಾದ ನರಮಂಡಲದ ಪ್ರತಿಕ್ರಿಯೆಗಳಿಂದ ಉಂಟಾದ ಚಲನಾವಿಶೇಷ. ಈ ಬೇರೆ ಬೇರೆ ಪ್ರತಿಕ್ರಿಯೆಗಳು ಒಂದು ಕ್ರಮದಿಂದ ಸೇರಿ ತೊಡಕಾದ ವರ್ತನೆಗೆ ಕಾರಣಭೂತವಾಗುವುದೆಂದು ನಂಬಿದ್ದರು.

ಗರ್ಭಾಂತರ ಶಿಶುವಿನ ಬೆಳವಣಿಗೆಯ ಕ್ರಮದ ಪರಿಶೀಲನವು ಈ ಎರಡು ವಾದಗಳನ್ನೂ ಕೈಬಿಡುವ ಹಾಗೆ ಮಾಡಿವೆ. ಈ ಎರಡು ವಾದಗಳೂ, ಹುಟ್ಟಿದ ಮಗುವನ್ನು ಪರಿಶೀಲಿಸಿ ರಚಿಸಿದ ವಾದಗಳೇ ಹೊರತು ಹುಟ್ಟುವುದಕ್ಕೆ ಮುಂಚೆಯಿಂದಲೂ ಪರಿಶೀಲನೆಮಾಡಿ ವರ್ತನೆಯ ಕ್ರಮುವನ್ನು ಒಳಗೊಂಡ ವಾದಗಳಲ್ಲ. ಇದೇ ಈ ವಾದಗಳಲ್ಲಿ ಕಂಡುಬರುವ ಕೊರತೆ.

ಜನ್ಮಪೂರ್ವ ಬೆಳವಣಿಗೆಯನ್ನು ಪರಿಶೀಲಿಸುವುದರಿಂದ ವರ್ತನೆಯ ಉತ್ಪತ್ತಿಯ ವಿಚಾರಗಳು ಬಹುಮಟ್ಟಿಗೆ ಬದಲಾವಣೆಯನ್ನು ಹೊಂದಿರುವುವು. ಈ ಪರಿಶೋಧನೆಗಳು ಮುಖ್ಯವಾಗಿ ವರ್ತನಾತತ್ತ್ವದ ಎರಡು ಅಂಶಗಳನ್ನು ತೋರಿಸುವುವು. ಮೊದಲನೆಯದು: ವರ್ತನೆಯು ನಿರಂತರವಾಗಿ ಬೆಳವಣಿಗೆಯನ್ನು ಹೊಂದುತ್ತಿರುವುದು. ಒಂದು ವರ್ತನೆಯನ್ನು 'ಇದು ಸಹಜವಾದುದು' ಎಂದು ಹೇಳಿದರೆ, ಅದು ಆ ವರ್ತನೆಯನ್ನು ಪರೀಕ್ಷಿಸಿದಹಾಗಾಗಲಿಲ್ಲ. ಜ್ಞಾನವು ಮುಂದುವರಿಯಬೇಕಾದರೆ, 'ಸಹಜ' ಎಂಬುದನ್ನು ಮರೆತು, 'ಪ್ರಕೃತಿಯಲ್ಲಿ ಒಂದೊಂದು ಘಟನೆಯೂ ಒಂದೊಂದು ಬೆಳವಣಿಗೆಯನ್ನು ಪಡೆದಿರುವುದು, ಈ ಬೆಳವಣಿಗೆಯನ್ನು ಪರಿಶೀಲನೆಮಾಡಬಹುದು' ಎಂಬ ಭರವಸೆಯಿದ್ದರೆ ಆಗ ಸತ್ಯದ ಅರಿವು ಮುಂದುವರಿಯಲು ಅವಕಾಶವಾಗುವುದು. ಇಲ್ಲದಿದ್ದರೆ 'ಈ ಘಟನೆಯು ಸಹಜವಾದುದು' ಎಂದು ಹೇಳಿ ಪರಿಶೀಲಿಸುವ ಇಚ್ಛೆಗೆ ಅಡಚಣೆಯನ್ನು ತಂದು ಜ್ಞಾನಾರ್ಜನೆಗೆ ಅವಕಾಶವಿಲ್ಲದಂತೆ ಮಾಡಿಕೊಳ್ಳುವೆವು.

ಎರಡನೆಯ ಅಂಶವೇನೆಂದರೆ: ಹುಟ್ಟುವುದಕ್ಕೆ ಮುಂಚೆ ಮಗುವಿನ ವರ್ತನೆಯು ಪೂರ್ಣವಾದುದು. ಮೇಲೆ ಹೇಳಿದಂತೆ, ಮನುಷ್ಯೇತರ ಪ್ರಾಣಿಗಳ ಭ್ರೂಣದಲ್ಲಿಯೂ, ಮಾನವ ಭ್ರೂಣದಲ್ಲಿಯೂ ಪ್ರತಿಕ್ರಿಯೆಯು ದೇಹಾದ್ಯಂತವಾದುದು. ಒಟ್ಟು ದೇಹವು ಯಾವ ಪ್ರಚೋದನೆಯಾದರೂ ಚಲಿಸುವುದು. ಭ್ರೂಣವು ಬೆಳೆದಂತೆಲ್ಲಾ ಬೇರೆ ಬೇರೆ ಅಂಗಗಳ ಚಲನವುಂಟಾಗುವುದು. ಈ ಅಂಶವು ರಿಫ್ಲೆಕ್ಸ್ ವಾದಕ್ಕೆ ವಿರೋಧವಾದುದು. ರಿಫ್ಲೆಕ್ಸ್‌ವಾದವು ಮಗುವಿನ ವರ್ತ

ನೆಯು ಬೇರೆ ಬೇರೆ ಪ್ರತಿಕ್ರಿಯೆಗಳು ಒಟ್ಟುಗೂಡಿ ಉಂಟಾಗುವುದೆಂದು ಹೇಳುವುದು. ಆದರೆ ಸತ್ಯಾಂಶವು ಇದಕ್ಕೆ ವಿರೋಧವಾಗಿರುವುದು. ಭ್ರೂಣದಲ್ಲಿ ವರ್ತನೆಯು ಪ್ರತ್ಯೇಕ ಅಂಗಗಳನ್ನು ಅನ್ವಯಿಸಿಲ್ಲ. ದೇಹಾದ್ಯಂತವನ್ನೂ ಒಳಗೊಂಡಿರುವುದು. ಭ್ರೂಣದ ಬೆಳವಣಿಗೆಯಾದಮೇಲೆ ಪ್ರತ್ಯೇಕ ಪ್ರತಿಕ್ರಿಯೆಗಳು ಈ ದೇಹಾದ್ಯಂತ ಚಲನೆಯಿಂದ ಉಂಟಾಗುವುವೇ ಹೊರತು, ಪ್ರತ್ಯೇಕ ಪ್ರತಿಕ್ರಿಯೆಗಳು ಕೂಡಿ ದೇಹಾದ್ಯಂತ ಚಲನೆಯುಂಟಾಗುವುದಿಲ್ಲ.

ಆಧುನಿಕ ಮನಶ್ಶಾಸ್ತ್ರದ ಪ್ರಕಾರ, ಮನುಷ್ಯನು ಅಂಡಾವಸ್ಥೆಯಿಂದ ಹಿಡಿದು, ಸಾಯುವವರೆಗೂ ನಿರಂತರವಾಗಿ ಬೆಳವಣಿಗೆಯನ್ನು ಹೊಂದುತ್ತಿರುವನು. ಈ ಬೆಳವಣಿಗೆಯು ಪೂರ್ಣದಿಂದ ಪ್ರಾರಂಭವಾಗಿ ಪರಿಪೂರ್ಣತೆಯನ್ನು ಹೊಂದುವುದು. ಇಷ್ಟೇ ಹೊರತು, ಶೂನ್ಯದಿಂದ ಪ್ರಾರಂಭವಾಗಿ, ಭಾಗಗಳ ರಚನೆಯಾದನಂತರ ಅವುಗಳ ಸೇರುವಿಕೆಯಿಂದ ಪರಿಪೂರ್ಣತೆಯನ್ನು ಹೊಂದುವುದಿಲ್ಲ. ಮತ್ತು ಈ ಬೆಳವಣಿಗೆಯು, ಹುಟ್ಟುವುದಕ್ಕೆ ಮುಂಚೆಯೂ, ಹುಟ್ಟಿದನಂತರವೂ ದೇಹದ ರಚನಾವಿಶೇಷಗಳನ್ನು ಮತ್ತು ಆವರಣದ ವೈಶಿಷ್ಟ್ಯವನ್ನೂ ಅನುಸರಿಸಿ ನಡೆಯುತ್ತಿರುವುದು.

**ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ ಪೂರ್ಣಮುದಚ್ಯತೆ ।**
**ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವಶಿಷ್ಯತೆ ॥**

# ಅಧ್ಯಾಯ ೫

## ಮಗುವಿನ ಮೊದಲ ತಿಂಗಳು

ಮಗು ಹುಟ್ಟಿದಾಗ ಅದರ ಜೀವನದಲ್ಲಿ ಒಂದು ದೊಡ್ಡ ಪರಿವರ್ತನೆಯುಂಟಾಗುವುದು. ತಾಯಿ ಹೊಟ್ಟೆಯೊಳಗೆ ಸಮ ಉಷ್ಣಾಂಶದಲ್ಲಿ ಬೆಳೆಯುತ್ತ ಬಂದು ಹುಟ್ಟಿದಮೇಲೆ ಬೇರೆ ಆವರಣದಲ್ಲಿ ಶೀತೋಷ್ಣಗಳ ಹೆಚ್ಚುಕಡಮೆಗೆ ಒಳಗಾಗುವುದು. ಆದುದರಿಂದ ಅದರ ಜೀವನಕ್ರಮವು ಹೊಸ ಪರಿಸ್ಥಿತಿಗಳಿಗೆ ಹೊಂದಿಕೊಳ್ಳಬೇಕಾಗುವುದು. ಅಲ್ಲದೆ ತಾಯಿಯ ದೇಹದಿಂದ ಈಚೆಗೆ ಬರುವಾಗ ಎಳೆತ ಮತ್ತು ಒತ್ತಡಗಳಿಗೆ ಸಿಕ್ಕುವುದು. ತಲೆಯು ಬಹಳ ದೊಡ್ಡದಾದರೆ ಉಪಕರಣಗಳ ಮೂಲಕ ಹೊರಗೆ ತೆಗೆಯಬೇಕಾಗುವ ಸಂಭವವೂ ಉಂಟು. ಕೆಲವು ಸಮಯಗಳಲ್ಲಿ ತಲೆಗೂ ಇತರ ಅಂಗಗಳಿಗೂ ಪೆಟ್ಟು ಬೀಳುವುದು. ಹುಟ್ಟುವುದಕ್ಕಿಂತ ಮುಂಚೆ ಮಗುವಿನ ದೇಹದಲ್ಲಿ ಶ್ವಾಸಕೋಶ, ಜೀರ್ಣೇಂದ್ರಿಯಗಳು ಮುಂತಾದ ಅವಯವಗಳು ರಚಿತವಾಗಿದ್ದರೂ, ಅವು ಕೆಲಸ ಮಾಡುತ್ತಿರುವುದಿಲ್ಲ. ಹುಟ್ಟಿದನಂತರವೇ ಈ ಅಂಗಗಳೆಲ್ಲವೂ ಕೆಲಸ ಮಾಡತೊಡಗುವುವು. ಜೀರ್ಣೇದ್ರಿಯಗಳು ಮೊದಲು ಸರಿಯಾಗಿ ಕೆಲಸಮಾಡದೆ ಹೋಗುವುದರಿಂದಲೂ, ದೇಹದಲ್ಲಿನ ನೀರು ಆವಿಯಾಗಿ ಹೋಗುವುದರಿಂದಲೂ, ಹುಟ್ಟಿದ ಕೆಲವು ದಿನಗಳಲ್ಲಿ ಮಗುವಿನ ತೂಕವು ಕಡಿಮೆಯಾಗುವುದು. ೧೦–೧೫ ದಿನಗಳಾದಮೇಲೆ ಮಗುವಿನ ತೂಕವು ಹೆಚ್ಚಲು ಪ್ರಾರಂಭವಾಗುವುದು. ತಾಯಿಯ ಹೊಟ್ಟೆಯೊಳಗೆ ಇಕ್ಕಟ್ಟಿನಲ್ಲಿ ಸಿಕ್ಕಿ ಒಂದೇ ಸ್ಥಿತಿಯಲ್ಲಿದ್ದ ಮಗು ಹುಟ್ಟಿದನಂತರ ಕೈಕಾಲುಗಳನ್ನು ಆಡಿಸಿ ದೇಹವನ್ನು ಅಲುಗಿಸುವ ಅವಕಾಶವನ್ನು ಪಡೆಯುವುದು.

ಇಷ್ಟೊಂದು ಹೊಸ ಪರಿಸ್ಥಿತಿಗಳಿಗೆ ಒಳಪಟ್ಟ ಮಗುವಿನ ಬಾಳು ಹೊಟ್ಟೆಯೊಳಗಿದ್ದ ಕಾಲದ ಮತ್ತು ಮುಂದೆ ಬೆಳೆಯುವ ಕಾಲದ ಬಾಳಿಗಿಂತ ತೀರ ಭಿನ್ನವಾಗಿರುವುದು. ಆದುದರಿಂದ ಶಾಸ್ತ್ರಜ್ಞರು, ಹುಟ್ಟಿದ

ಮೇಲೆ ಒಂದು ತಿಂಗಳಿನ ಬಾಳನ್ನು ಪ್ರತ್ಯೇಕವಾಗಿ ಪರಿಶೀಲಿಸಿರುವರು. ಈ ಮೊದಲ ತಿಂಗಳಿನ ಮಗುವನ್ನು ನವಜಾತ (ನಿಯೋನೇಟ್) ಎಂದು ಹೇಳುವರು ಈ ಕಾಲದಲ್ಲಿ ಬೆಳವಣಿಗೆಯ ಕ್ರಮ ಮತ್ತು ಮಗು ತೋರಿಸುವ ಅಂಗಚೇಷ್ಟೆಗಳನ್ನು ಬಹು ಜಾಗರೂಕತೆಯಿಂದ ಪಾಶ್ಚಾತ್ಯ ದೇಶಗಳಲ್ಲಿ ಪರಿಶೀಲನ ಮಾಡಿರುವರು.

ಮಗು ಹುಟ್ಟಿದಮೇಲೆ ಮೊಟ್ಟಮೊದಲು ಅಳುವುದು ಒಂದಾಗಿದೆ. ಸಾಧಾರಣವಾಗಿ ಈ ಅಳುವು ಮಗು ತಾನು ತಾಯಿಯ ಹೊಟ್ಟೆಯಿಂದ ಹೊರಗೆ ಬರುವಾಗ ಪಟ್ಟ ಕಷ್ಟದ ಸೂಚನೆಯ ಅಳುವೆಂದು ಹೇಳುವುದುಂಟು. ಮತ್ತೆ ಕೆಲವರು ದುಃಖಪೂರ್ಣವಾದ ಈ ಪ್ರಪಂಚದಲ್ಲಿ ಹುಟ್ಟಿದೆನಲ್ಲಾ ಎಂಬ ವ್ಯಸನವನ್ನು ತೋರಿಸುವ ಅಳುವೆಂದೂ ಹೇಳುವರು. ಆದರೆ ವೈಜ್ಞಾನಿಕರು, ಈ ಅಳುವು, ಮೊಟ್ಟಮೊದಲು ಮಗುವಿನ ಶ್ವಾಸಕೋಶಗಳನ್ನು ಹೊಕ್ಕಾಗ ಉಂಟಾದ ರಿಫ್ಲೆಕ್ಸ್ ಪ್ರತಿಕ್ರಿಯೆ ಎನ್ನುವರು. ಕೆಲವು ಸಮಯಗಳಲ್ಲಿ ಶ್ವಾಸ ಕೋಶಗಳಿಗೆ ಹೋಗದೆ ಮಗು ಅಚೇತನವಾಗಿ ಬಿದ್ದಿರುವುದುಂಟು. ಆಗ ಮೈಯನ್ನು ತಟ್ಟಿ ಬೆಚ್ಚಗಿರುವ ನೀರಿನಲ್ಲಿ ಅದ್ದಿ ಮಗು ಉಸಿರಾಡಿ ಅಳುವಂತೆ ಮಾಡುವರು.

ಮಗು ಹುಟ್ಟುವವರೆವಿಗೂ ಅದರ ಶ್ವಾಸ, ಆಹಾರ ಮತ್ತು ಶುದ್ಧೀಕರಣಗಳಿಗೆ ತಾಯಿಯೇ ಅಧಾರ ಹುಟ್ಟಿದ ಮೊದಲ್ಗೊಂಡು ಈ ಕೆಲಸಗಳನ್ನು ಮಗು ತಾನೇ ಮಾಡಲುಪಕ್ರಮಿಸುವುದು. ಹುಟ್ಟಿದ ಮಗುವಿನ ತುಟಿಯನ್ನು ಮುಟ್ಟಿದರೆ ಚೇಪುತ್ತಿರುವ ಅಲುಗಾಟವನ್ನು ಕಾಣಬಹುದು. ಹುಟ್ಟಿದ ಕೆಲವು ಗಂಟೆಗಳೊಳಗೆ ಬದುಕುವುದಕ್ಕೆ ಅಗತ್ಯವಾದ ನಾಲ್ಕು ಕೆಲಸಗಳನ್ನು ಮಾಡಲು ಪ್ರಾರಂಭಿಸುವುದು—ಉಸಿರಾಡುವುದು, ಆಹಾರವನ್ನು ತೆಗೆದುಕೊಳ್ಳುವುದು, ಶುದ್ಧೀಕರಣ ಕೆಲಸಗಳು ಮತ್ತು ನಿದ್ದೆಯನ್ನು ಮಾಡುವುದು. ಈ ಕೆಲಸಗಳನ್ನು ಮಗು ತಾನೇ ಮಾಡಿಕೊಳ್ಳುವುದರಿಂದ ಹುಟ್ಟಿದನಂತರ ಅದು ತನ್ನ ಪ್ರತ್ಯೇಕ ಜೀವನವನ್ನು ನಡಸಲು ಸಾಧ್ಯವಾಗುವುದು.

ಮೊದ ಮೊದಲು ಮಗು ಸುಮಾರು ಶೇಕಡ ೮೦ ರಷ್ಟು ಕಾಲ

ನಿದ್ರೆಮಾಡುವುದು. ಸಾಧಾರಣವಾಗಿ ಒಂದು ಸಾರಿಗೆ ಮೂರು ಗಂಟೆಗಳ ಹೊತ್ತು ನಿದ್ದೆಮಾಡಿ ಏಳುವುದು.[1] ನಿದ್ದೆಯಿಂದ ಏಳುವುದಕ್ಕೆ ಹಸಿವು ಅಥವಾ ಯಾವುದಾದರೂ ಅಸ್ವಸ್ಥತೆ ಕಾರಣವಾಗಿರಬಹುದು. ಕಾರಣ ವನ್ನು ನಿವಾರಿಸಿದರೆ ಮಗು ಮತ್ತೆ ನಿದ್ದೆಮಾಡುವುದು. ಮಗು ಎಚ್ಚರದಿಂದಿರುವಾಗ ಅತ್ಯಂತ ಚಟುವಟಿಕೆಯನ್ನು ತೋರಿಸುವುದು. ಕೈಕಾಲುಗಳನ್ನು ಹೊಸೆದು ಎಳೆಯುವುದು, ನೀಡುವುದು, ತುಟಿ, ಕೈ, ಕಣ್ಣು ಮುತಾದ ಅಂಗಗಳನ್ನು ಆಡಿಸುವುದು. ಮಗು ನಿದ್ದೆ ಮಾಡುತ್ತಿರುವ ಸಮಯದಲ್ಲಿ ಹಾಸಿಗೆಯು ಚುಚ್ಚಿದಾಗ, ಮಲಮೂತ್ರ ವಿಸರ್ಜನೆಯಿಂದ ಒದ್ದೆಯಾದಾಗ ಇಲ್ಲವೆ ಹಸಿವಾದಾಗ ಎಚ್ಚರಗೊಳ್ಳು ವುದು. ಕೆಲವು ಕ್ಷಣಗಳಲ್ಲಿ ಅಳಲಾರಂಭಿಸುವುದು. ಹೀಗೆ ಅಳುವಾಗ ದೇಹಾದ್ಯಂತವನ್ನೂ ಅಲುಗಿಸುವುದು. ಕೈಕಾಲುಗಳನ್ನು ಬಡಿಯು ವುದು. ಈ ರೀತಿಯಾಗಿ ಹುಟ್ಟಿದ ಒಂದೆರಡು ದಿನಗಳಲ್ಲಿಯೇ, ಮಗು ಅನೇಕ ಚಲನವಲನಗಳನ್ನು ಮಾಡುವ ಶಕ್ತಿಯನ್ನು ಪಡೆಯುವುದು.

ಹುಟ್ಟಿದ ೨೦ ನಿಮಿಷಗಳೊಳಗೆ ಈ ಕೆಳಗೆ ಸೂಚಿಸಿರುವ ಪ್ರತಿ ಕ್ರಿಯೆಗಳನ್ನು ತೋರಿಸುವುದು: ಸೀನುವುದು, ಆಕಳಿಸುವುದು, ಕಣ್ಣೀರು ಸುರಿಸುವುದು, ತಾಯಿಯ ಮೊಲೆಯುಣ್ಣುವುದು, ದೀಪವನ್ನು ಎವೆ ಯಿಕ್ಕದೆ ನೋಡುವುದು, ಹೆಬ್ಬೆರಳನ್ನು ಬಾಯೊಳಗೆ ಇಡುವುದು, ದೊಡ್ಡ ಶಬ್ದವಾದರೆ ಬೆಚ್ಚಿ ಬೀಳುವುದು, ಮುಷ್ಟಿಹಿಡಿಯುವುದು, ಮಗುವಿನ ಕಣ್ಣೆದುರಿಗೆ ಕೈಯನ್ನು ಆಡಿಸಿದರೆ ಕೈಚಲನವನ್ನು ದೃಷ್ಟಿಯಿಂದ ಹಿಂಬಾ ಲಿಸುವುದು, ಜೋರಲಾಗಿ ಮಲಗಿಸಿದರೆ ಶ್ವಾಸಕ್ಕೋಸ್ಕರ ತಲೆಯನ್ನು ಪಕ್ಕಕ್ಕೆ ತಿರುಗಿಸುವುದು. ಈ ಎಲ್ಲಾ ಕೆಲಸಗಳನ್ನೂ ಪ್ರತಿಯೊಂದು ಮಗುವೂ ೨೦ ನಿಮಿಷಗಳೊಳಗೆ ಮಾಡುವುದೆಂದು ಹೇಳಲಾಗುವುದಿಲ್ಲ. ಕೆಲವು ಮಕ್ಕಳು ಕೆಲವು ಪ್ರತಿಕ್ರಿಯೆಗಳನ್ನು ಸ್ವಲ್ಪ ನಿಧಾನವಾಗಿ ಮಾಡುವುದೂ ಉಂಟು. ಇದಕ್ಕೆ ಕಾರಣವೇನೆಂದರೆ ಹುಟ್ಟಿದ ಮಕ್ಕ ಳೆಲ್ಲಾ ತಾಯಿಯ ಹೊಟ್ಟೆಯಲ್ಲಿ ಒಂದೇ ಪ್ರಮಾಣದ ಕಾಲವನ್ನು

---

1. ಚಿತ್ರ ೧೩ ಮತ್ತು ೧೪ ನೋಡಿ.

ಕಳೆದವರಲ್ಲ. ಕೆಲವು ಮಕ್ಕಳು ಅವಧಿಯನಂತರ ಹುಟ್ಟಿರುವರು. ಆದುದರಿಂದ ಮಕ್ಕಳ ಬೆಳವಣಿಗೆಯಲ್ಲಿ ವ್ಯತ್ಯಾಸವಿರುವುದು.

ಶಾಸ್ತ್ರಜ್ಞರು ಹುಟ್ಟಿದ ಮಕ್ಕಳ ವರ್ತನೆಯನ್ನು ಪರಿಶೀಲಿಸಲು ಆಸ್ಪತ್ರೆಗಳಲ್ಲಿ ಒಂದು ಪ್ರತ್ಯೇಕ ಮಂಚವನ್ನು ಉಪಯೋಗಿಸುವರು. * ಆದರಲ್ಲಿ ಮಗುವನ್ನಿಟ್ಟು ಅದು ಮಾಡುವ ಪ್ರತಿಯೊಂದು ಅಲುಗಾಟ ವನ್ನು ಗುರುತು ಹಚ್ಚಲು ಸಲಕರಣೆಗಳನ್ನು ಒದಗಿಸುವರು. ಈ ರೀತಿಯ ಪರಿಶೀಲನೆಯಲ್ಲಿ ಕಂಡು ಬಂದಿರುವ ಮುಖ್ಯಾಂಶಗಳನ್ನು ಇಲ್ಲಿ ಕೊಡಲಾಗಿದೆ—ಸಾಧಾರಣವಾಗಿ ಎರಡು ಕ್ಷಣಕ್ಕೊಂದು ಸಲ ಮಗು ತನ್ನ ದೇಹವನ್ನು ಅಲುಗಿಸುವುದು ಜೀವನದ ಮೊದಲ ಹತ್ತು ದಿನಗಳಲ್ಲಿ ದೇಹ ತಲೆ ಕೈ ಕಾಲುಗಳನ್ನು ನಿಮಿಷಕ್ಕೆ ೩೦–೪೦ ಸಲ ಅಲುಗಾಡಿಸುವುದು. ನಿದ್ದೆ ಮಾಡುತ್ತಿರುವಾಗಲೂ, ಈ ಅಲುಗಾಟ ವಿರುವುದು. ಮಗು ದೇಹವನ್ನು ಅಲುಗಾಡಿಸದೆ ನಿದ್ದೆ ಮಾಡುವು ದಿಲ್ಲ. ಈ ಕಾಲದಲ್ಲಿ ಮತ್ತೊಂದು ಮುಖ್ಯ ಕೆಲಸವೇನೆಂದರೆ, ನಾನಾ ವಿಧವಾದ ಶಬ್ದಗಳನ್ನು ಮಾಡುವುದು, ಕಿರಿಚುವುದು, ಕೆಮ್ಮುವುದು, ಸೀನುವುದು, ಚೀಪುವ ಶಬ್ದಮಾಡುವುದು, ಬಿಕ್ಕಳಿಸುವುದು, ಉಸಿರು ಕಟ್ಟಿದ ಹಾಗೆ ಗೊರ ಗೊರ ಸದ್ದುಮಾಡುವುದು, ಹಸಿವಿನಿಂದ ಕೂಗು ವುದು ಮುಂತಾದ ಶಬ್ದಗಳನ್ನೆಲ್ಲಾ ಹುಟ್ಟಿದ ಹತ್ತು ದಿನಗಳೊಳಗೆಯೇ ಮಾಡಬಲ್ಲುದು.

ಈಗ ಮಗುವಿನ ಇಂದ್ರಿಯ ಜ್ಞಾನವನ್ನು ಪರೀಕ್ಷಿಸೋಣ. ಈ ವಿಷಯದಲ್ಲಿ ಸಹ ಓಹಿಯೋ (ಅಮೆರಿಕ) ವಿಶ್ವವಿದ್ಯಾಲಯದ ಪ್ರಾಟ್ ಮುಂತಾದವರು ಬಹಳ ಜಾಗರೂಕತೆಯಿಂದ ಅನೇಕ ಎಳೆಮಕ್ಕಳನ್ನು ಪರೀಕ್ಷಣದ ಪೆಟ್ಟಿಗೆಯಲ್ಲಿಟ್ಟು ಒಂದೊಂದು ಪ್ರಚೋದನೆಗೂ ಮಕ್ಕಳು ಯಾವ ಪ್ರತಿಕ್ರಿಯೆಗಳನ್ನು ತೋರಿಸುವುವೆಂಬುದನ್ನು ಕಂಡು ಹಿಡಿದಿರು ವರು. ಆಗತಾನೆ ಹುಟ್ಟಿದ ಮಗು ಐದು ಕ್ಯಾಂಡಲ್ ಪವರಿನ

* ಓಹಿಯೊ ವಿಶ್ವವಿದ್ಯಾಲಯದ ಪ್ರಾಟ್ ಮುಂತಾದವರು ಈ ಕೆಲಸವನ್ನು ಮಾಡಿರುವರು.

ದೀಪವನ್ನು ತೋರಿಸಿದರೆ ಅದನ್ನು ನೆಟ್ಟದೃಷ್ಟಿಯಿಂದ ನೋಡುವುದು. ಮಗು ಹುಟ್ಟಿದ ಮುವತ್ತು ಗಂಟೆಗಳೊಳಗೆ, ಗಮನವಿಟ್ಟು ದೀಪವನ್ನು ನೋಡುವುದರಲ್ಲಿ ಕುಶಲತೆಯನ್ನು ಪಡೆಯುವುದು. ದೀಪದಿಂದುಂಟಾಗುವ ಪ್ರತಿಕ್ರಿಯೆಯು ಕಣ್ಣುಗಳಿಗೆ ಮಾತ್ರ ಅನ್ವಯಿಸಿದುದಲ್ಲ. ದೀಪವನ್ನು ನೋಡುವುದೊಂದೇ ಅಲ್ಲದೆ ದೇಹದ ಬೇರೆ ಅಂಗಗಳನ್ನೂ ಅಲುಗಾಡಿಸುವುದು. ಮೊದಲ ಒಂದೆರಡು ದಿನಗಳಲ್ಲಿ ದೀಪವನ್ನು ಹೆಚ್ಚು ಹೊತ್ತು ತೋರಿಸಿದರೆ ಮಗು ತಲೆಯನ್ನು ಅತ್ತಿತ್ತ ಆಡಿಸುವುದು. ಕ್ರಮೇಣ ಆಯಾಸಪಟ್ಟು ತಲೆಯನ್ನು ದೀಪದ ಕಡೆಯಿಂದ ಹಿಂತೆಗೆಯುವುದು. ಹುಟ್ಟಿದ ಸ್ವಲ್ಪಕಾಲ ಎರಡು ಕಣ್ಣುಗಳೂ ಜೋಡಿಯಾಗಿ ಆಡುವುದಿಲ್ಲ. ಒಂದು ಕಣ್ಣು ಒಂದು ಕಡೆಗೂ, ಮತ್ತೊಂದು ಕಣ್ಣು ಮತ್ತೊಂದು ಕಡೆಗೂ ನೋಡುವುದು. ಆದರೆ ಆರು ಗಂಟೆಗಳ ವಯಸ್ಸಿಗೆ ಮಗು ಎರಡು ಕಣ್ಣುಗಳಿಂದಲೂ ಒಟ್ಟಿಗೆ ನೋಡುವುದು. ಒಂದೂವರೆ ದಿನದ ವಯಸ್ಸಿನೊಳಗೆ ಈ ಕೆಲಸದಲ್ಲಿ ಹೆಚ್ಚಾದ ನಿಪುಣತೆಯನ್ನು ಪಡೆಯುವುದು. ಅಡ್ಡಡ್ಡಲಾಗಿ ಕೈಯನ್ನು ಆಡಿಸಿದರೆ ಮಗು ತನ್ನ ಕಣ್ಣುಗಳಿಂದ ಕೈಚಲನೆಯನ್ನು ಹಿಂಬಾಲಿಸುವುದು. ಆದರೆ ಮೇಲಿನಿಂದ ಕೆಳಕ್ಕೆ ಮಾಡುವ ಚಲನೆಯನ್ನು ನೋಟದಿಂದ ಹಿಂಬಾಲಿಸಲು ಇನ್ನೂ ಹೆಚ್ಚು ಕಾಲ ಬೇಕಾಗುವುದು. *

ಈಗ ಮಗು ಯಾವ ಶಬ್ದಗಳನ್ನು ಕೇಳುವುದೆಂಬುದನ್ನು ನೋಡೋಣ. ಹುಟ್ಟಿದ ತಕ್ಷಣ, ಮಗುವಿನ ಕಿವಿಯೊಳಗೆ ಒಂದು ವಿಧವಾದ ದ್ರವವು ತುಂಬಿಕೊಂಡಿರುವುದರಿಂದ, ಅದು ಯಾವ ಶಬ್ದವನ್ನೂ ಕೇಳಲಾರದು. ಒಂದು ಶಬ್ದವನ್ನು ಮಗು ಕೇಳುತ್ತಿರುವುದೋ ಇಲ್ಲವೋ ಎಂಬುದನ್ನು ಕಂಡುಹಿಡಿಯುವುದು ಸ್ವಲ್ಪ ಕಷ್ಟ. ದೀಪವನ್ನು ತೋರಿಸಿದರೆ ಕಣ್ಣಿನಲ್ಲಿ ಚಲನೆಯುಂಟಾಗುವುದು. ಆದರೆ ಶಬ್ದವನ್ನು ಕೇಳಿದಾಗ ಈ ರೀತಿಯ ಬಾಹ್ಯ ಸೂಚನೆಯಾಗುವುದು ಕಾಣುವುದಿಲ್ಲ. ಆದುದರಿಂದ ಮಗು ಶಬ್ದವನ್ನು ಕೇಳಿತು ಅಥವಾ

* ಪಟ್ಟಿ ೪ ನ್ನು ನೋಡಿ.

ಇಲ್ಲ ಎಂಬುದನ್ನು ನಿರ್ಣಯಿಸುವುದು ಕಷ್ಟ. ಇನ್ನೊಂದು ತೊಂದರೆ ಯೇನೆಂದರೆ, ನಾವು ಯಾವ ಶಬ್ದಗಳನ್ನು ಮಾಡುತ್ತೇವೆಯೋ ಮತ್ತು ಕೇಳುತ್ತಿರುವೆವೋ ಆ ಶಬ್ದಗಳಿಗೆ ಮಗು ಪ್ರತ್ಯೇಕ ಪ್ರತಿಕ್ರಿಯೆ ಯನ್ನು ತೋರಿಸುವುದಿಲ್ಲ. ಆ ಶಬ್ದವು ಹಿನ್ನೆಲೆಯ ಒಂದು ಅಂಶ ವಾಗುವುದು. ಉದಾಹರಣೆಗಾಗಿ, ರೈಲಿನ ಶಬ್ದವು ಪ್ರಯಾಣಿಕರಿಗೆ ತೊಂದರೆಯನ್ನುಂಟುಮಾಡುವ ಹಾಗೆ ಸದಾ ರೈಲಿನಲ್ಲಿಯೇ ಇರುವ ರೈಲಿನ ಕೆಲಸಗಾರರಿಗೆ ಯಾವ ತೊಂದರೆಯನ್ನೂ ಉಂಟುಮಾಡುವು ದಿಲ್ಲ ಇದೇ ರೀತಿಯಲ್ಲಿ ಗಿರಣಿಗಳಲ್ಲಿ ಕೆಲಸ ಮಾಡುವವರಿಗೆ ಯಂತ್ರ ಗಳ ದೊಡ್ಡ ಶಬ್ದವು ಯಾವ ರೀತಿಯೂ ತೊಂದರೆಪಡಿಸುವುದಿಲ್ಲ, ಮಗುವಿನ ಆವರಣದಲ್ಲಿ ಆಗುತ್ತಿರುವ ಶಬ್ದಗಳು ಮಗುವಿನ ಹಿನ್ನೆ ಲೆಗೆ ಸೇರಿ ಅವು ಪ್ರತ್ಯೇಕವಾಗಿ ಕೇಳಿಸಿಕೊಳ್ಳುವುದಿಲ್ಲ. ಮಗುವು ಹುಟ್ಟಿದ ಐದಾರು ದಿನಗಳೊಳಗೆ ಕಾಗದವನ್ನು ಮುದುರಿ ಸದ್ದು ಮಾಡಿದರೆ ಅದನ್ನು ಗಮನಿಸುವುದೆಂದು ವೈಜ್ಞಾನಿಕರು ಈಗ ಕಂಡು ಹಿಡಿದಿರುವರು. ಆದರೆ ಮೊದಲ ಹತ್ತು ದಿನಗಳವರೆಗೂ ಮೆತ್ತಗೆ ಒಂದು ಸಣ್ಣ ಗಂಟೆಯನ್ನು ಬಾರಿಸಿದರೆ ಅದಕ್ಕೆ ಗಮನ ಕೊಡುವು ದಿಲ್ಲ. ಶಬ್ದಕ್ಕೆ ಗಮನಕೊಡುವುದು ಮಗುವಿನ ಪರಿಸ್ಥಿತಿಯನ್ನು ಹೊಂದಿಕೊಂಡಿರುವುದೆಂದು ತಿಳಿದುಬಂದಿರುವುದು. ಮಕ್ಕಳು ಅಳುತ್ತಿ ದ್ದರೆ ಆಗ ಇತರ ಶಬ್ದಗಳಿಗೆ ಕಡಿಮೆ ಗಮನ ಕೊಡುವರು. ಅವು ಎಚ್ಚರವಾಗಿದ್ದುಕೊಂಡು ಸುಮ್ಮನಿರುವಾಗ ಹೆಚ್ಚು ಗಮನ ವೀಯು ವರು.

ಎರಡು ದಿನಗಳ ವಯಸ್ಸಿನ ಮಗು, ಉಪ್ಪು ನೀರನ್ನು ಬಾಯೊ ಳಗೆ ಹಾಕಿದರೆ ಸ್ಪಷ್ಟವಾಗಿ ಪ್ರತಿಕ್ರಿಯೆಯನ್ನು ತೋರಿಸುವುದು. ಮೊದಲ ವಾರದಲ್ಲಿಯೇ ಉಪ್ಪು, ಸಿಹಿ, ಕಹಿ ಮತ್ತು ಹುಳಿ, ಈ ರುಚಿಗೆ ಯಾವ ಯಾವ ಪ್ರತಿಕ್ರಿಯೆಗಳನ್ನು ತೋರಿಸುವುದೆಂಬುದನ್ನು ಮುಂದಿನ ಪಟ್ಟಿ ಯಿಂದ ವಿಶದೀಕರಿಸಲಾಗಿದೆ.

ಮಗುವಿನ ವಾಸನಾಗ್ರಹಣಶಕ್ತಿಯು ಬಹಳ ನಿಧಾನವಾಗಿ ಬೆಳೆ ಯುವುದು. ಅಮೋನಿಯಾವನ್ನು ಮೂಗಿನ ಹತ್ತಿರ ಹಿಡಿದರೆ ಎರಡು

ದಿನದ ಮಕ್ಕಳು ಕೆಲವು ಸಮಯಗಳಲ್ಲಿ ಪ್ರತಿಕ್ರಿಯೆಯನ್ನು ತೋರಿಸು ವುವು. ಮೊದಲ ಹತ್ತು ದಿನಗಳು ಕಳೆದರೂ ಬೇರೆಬೇರೆ ಹಾಲುಗಳ ವಾಸನೆಯ ಭೇದವನ್ನು ಕಂಡುಹಿಡಿಯುತ್ತಿರಲಿಲ್ಲ. ಬೇರೆ ಜ್ಞಾನೇಂ ದ್ರಿಯಗಳಿಗಿಂತ ವಾಸನೆಯನ್ನು ಕಂಡುಹಿಡಿಯುವ ಶಕ್ತಿಯು ಹಿಂದುಳಿ ದಿರುವುದು.

ಸ್ಪರ್ಶೇಂದ್ರಿಯವು ನಾಲ್ಕು ತರಹದ ತಿಳಿವಳಿಕೆಯನ್ನು ಕೊಡು ವುದು. ಚರ್ಮದಿಂದ ಸ್ಪರ್ಶ (ಮುಟ್ಟುವಿಕೆ) ವೊಂದೇ ಅಲ್ಲದೆ ಶೀತ, ಉಷ್ಣ, ನೋವು ಸಹ ನಮಗೆ ಗೊತ್ತಾಗುವುದು. ಹುಟ್ಟಿದ ಮಗುವಿನಲ್ಲಿ ಶೀತೋಷ್ಣಗ್ರಹಣಶಕ್ತಿಯು ತಕ್ಕಮಟ್ಟಿಗೆ ಇರುವುದು. ದೇಹದ ಉಷ್ಣ ಕ್ಕಿಂತ ಹೆಚ್ಚಾದ ಅಥವಾ ಕಡಿಮೆಯಾದ ಉಷ್ಣವಿದ್ದರೆ ದೇಹದ ಚಲ ನೆಯ ಮೂಲಕ ಪ್ರತಿಕ್ರಿಯೆಯನ್ನು ತೋರಿಸುವುದು ಹುಟ್ಟಿದ ಸಮಯ ದಲ್ಲಿ ಅಥವಾ ಕೆಲವು ಗಂಟೆಗಳನಂತರ ಒಂದು ಸೂಜಿಯಿಂದ ಚುಚ್ಚಿ ದರೆ ನೋವಿಗೆ ಪ್ರತಿಕ್ರಿಯೆಯನ್ನು ತೋರಿಸುವುದು. ಹುಟ್ಟಿದಕೂಡಲೇ ಮುಖವಮೇಲೆ ಚುಚ್ಚಿದರೆ ಪ್ರತಿಕ್ರಿಯೆಯನ್ನು ತೋರಿಸುವುದು. ಆದರೆ ಕಾಲುಗಳನ್ನು ಚುಚ್ಚಿದರೆ ಯಾವ ಪ್ರತಿಕ್ರಿಯೆಯನ್ನೂ ತೋರಿಸುವು ದಿಲ್ಲ. ಸ್ಪರ್ಶೇಂದ್ರಿಯಶಕ್ತಿಯೂ ತಲೆಯಿಂದ ಪ್ರಾರಂಭವಾಗಿ ಕ್ರಮೇಣ ಕಾಲಿನವರೆಗೆ ಬೆಳೆಯುವುದು. ಎಪ್ಪತ್ತೈದು ಗಂಟೆ (ಸುಮಾರು ಮೂರು ದಿನಗಳು) ಗಳಾದನಂತರ ಕಾಲುಗಳನ್ನು ಚುಚ್ಚಿದರೆ ನೋವಿನ ಪ್ರತಿ ಕ್ರಿಯೆಯನ್ನು ತೋರಿಸುವುದು. ಶರೀರದ ಯಾವ ಭಾಗವನ್ನು ಮುಟ್ಟಿ ದರೂ, ಹುಟ್ಟಿದ ತಕ್ಷಣದಿಂದಲೇ ಪ್ರತಿಕ್ರಿಯೆಯನ್ನು ತೋರಿಸಲಾರಂಭಿ ಸುವುದು.

ಮೊದಲನೆಯ ತಿಂಗಳಿನಲ್ಲಿ ಮಗು ದಿನಕ್ಕೆ ಸುಮಾರು ೧೯ ಗಂಟೆಗಳಕಾಲ ನಿದ್ರಿಸುವುದು. ಬೆಳೆಯುತ್ತ ಬೆಳೆಯುತ್ತ ಒಂದು ದಿನದ ಒಟ್ಟು ನಿದ್ರೆಯ ಸಮಯವು ಕ್ರಮೇಣ ಕಡಿಮೆಯಾಗುವುದು. ಮೂರು ತಿಂಗಳ ವಯಸ್ಸಿಗೆ ಬರುವಷ್ಟರಲ್ಲಿ ೧೫ ಗಂಟೆಗಳಿಗೆ ಇಳಿಯುವುದು ಒಂದುವರ್ಷದ ಮಗು ಸಾಧಾರಣವಾಗಿ ದಿನಕ್ಕೆ ಹನ್ನೆರಡು ಗಂಟೆಗಳ ಹೊತ್ತು ನಿದ್ದೆಮಾಡುವುದು. ಆದರೆ ಪ್ರತಿಸಲದ ನಿದ್ರೆಯ ಅವಧಿಯೂ

ವಯಸ್ಸು ಹೆಚ್ಚಿದಂತೆಲ್ಲಾ ಹೆಚ್ಚುವುದು. ಮೊದಲ ತಿಂಗಳಲ್ಲಿ ಎಚ್ಚರ ವಾಗದೆ ನಿರಂತರವಾಗಿ ಒಂದು ಸಮಯದಲ್ಲಿ ನಾಲ್ಕು ಗಂಟೆ ಹೊತ್ತು










ಚಿತ್ರ ೧೩

ಚಲನೆಯ ಬೆಳವಣಿಗೆ

| | ವಯಸ್ಸು | ನಿದ್ರೆ | ಪ್ರತಿಕ್ರಿಯೆ | ಸ್ವಚಲನೆ |
|---|---|---|---|---|
| I | ಹುಟ್ಟಿದ ದಿನ | 89% | 10% | 1% |
| II | ಮೂರು ತಿಂಗಳು | 69% | 20% | 11% |
| III | ಒಂದು ವರ್ಷ | 55% | 14% | 31% |

ನಿದ್ದೆಮಾಡುವುದು. ಕ್ರಮೇಣ ಮೂರು ತಿಂಗಳ ಹೊತ್ತಿಗೆ ಆರು ಗಂಟೆಗಳ ಕಾಲ ನಿರಂತರವಾಗಿ ನಿದ್ರಿಸುವುದು. ಒಂದು ವರ್ಷ ವಯಸ್ಸಿನಲ್ಲಿ

೯–೧೦ ಗಂಟೆಗಳ ಕಾಲ ಎಚ್ಚರವಿಲ್ಲದೆ ನಿದ್ದೆಮಾಡುವುದು.




ಚಿತ್ರ ೧೪

ಒಂದೊಂದು ವಯಸ್ಸಿನಲ್ಲಿಯೂ ನಿರಂತರ ನಿದ್ದೆಯ ಪ್ರಮಾಣ

## ಭಾವನಾ ಪ್ರತಿಕ್ರಿಯೆಗಳು

ಹುಟ್ಟಿದಾಗಿನಿಂದಲೂ ಮಗು ಅತೃಪ್ತಿಯ ಸೂಚನೆಯನ್ನು ಸ್ಪಷ್ಟವಾಗಿ ತೋರಿಸುವುದು. ಮೊದಲಿನಿಂದಲೂ ತನಗೆ ನೋವು ಅಸ್ವಸ್ಥತೆಗಳುಂಟಾದಾಗ ಅಳುವುದರ ಮೂಲಕ ದೇಹ ಮತ್ತು ಕೈಕಾಲುಗಳನ್ನು ಆಡಿಸುವುದರ ಮೂಲಕ ತನ್ನ ಮನೋಭಾವವನ್ನು ಹೊರಪಡಿಸುವುದು. ಇದೇ ರೀತಿಯಲ್ಲಿ ತನಗೆ ಉಂಟಾದ ತೃಪ್ತಿ–ಸೌಖ್ಯಗಳನ್ನೂ ಸ್ಪಷ್ಟವಾಗಿ ತೋರ್ಪಡಿಸುವುದು. ತೃಪ್ತಿಯುಂಟಾದಾಗ ಸಾಮಾನ್ಯವಾಗಿ ಮಗು ಸುಮ್ಮನೆ ವಿಶ್ರಾಂತಿಯಿಂದ ಮಲಗಿರುವುದು. ಅತೃಪ್ತಿ

ಯಿಂದಿದ್ದಾಗ ಕೈಕಾಲುಗಳನ್ನು ಬಿಗಿಹಿಡಿದು ಒದರುವುದು. ತೃಪ್ತಿ-ಅತೃಪ್ತಿಗಳ ಪ್ರಚೋದನವು ಸ್ಪರ್ಶೇಂದ್ರಿಯುಗಳ ಮೂಲಕ ಉಂಟಾಗುವುದು, ಅಥವಾ ಕಾಣುವುದು-ಕೇಳುವುದರ ಮೂಲಕವುಂಟಾಗುವುದು. ಹಸಿವು-ಹೊಟ್ಟೆತುಂಬಿರುವುದು, ದೇಹಾಲಸ್ಯ-ವಿಶ್ರಾಂತಿಗಳೂ ತೃಪ್ತಿ-ಅತೃಪ್ತಿಗಳಿಗೆ ಕಾರಣವಾಗುವುವು.

"ಮಗುವಿಗೆ ಆಲಸ್ಯವಾದಾಗ, ಹಸಿವಾದಾಗ, ಅಥವಾ ನೋವಾದಾಗ ಈ ವಿಷಮ ಸ್ಥಿತಿಗಳಲ್ಲಿ ಬದಲಾವಣೆಯಾಗುವವರೆಗೂ ಮಗು ಪ್ರತಿಕ್ರಿಯೆಯನ್ನು ಮುಂದುವರಿಸುತ್ತಿರುವುದು. ಅಸ್ವಸ್ಥತೆಯು ನಿಲ್ಲುವವರೆಗೂ, ಕೈಕಾಲುಗಳನ್ನು ಆಡಿಸಿ ಅಳುತ್ತಿರುವುದು, ಕೈಕಾಲುಗಳನ್ನು ಒದರುವುದು. ತಾನು ಅಸ್ವಸ್ಥತೆಯಲ್ಲಿದ್ದಾಗ ಹಿಂದೆ ತನಗೆ ತೃಪ್ತಿಯನ್ನುಂಟುಮಾಡಿದ ಸಾಮಗ್ರಿಗಳಲ್ಲಿ ಯಾವುದನ್ನು ಮತ್ತೆ ಕಂಡರೂ ಪುನಃ ತೃಪ್ತಿಯನ್ನು ತೋರಿಸುವುದು. ಹೊಟ್ಟೆ ನೋವಿನಿಂದಲೋ ಅಥವಾ ಹಾಸಿಗೆಯ ಬಟ್ಟೆ, ಒಳಲೆ, ಇವುಗಳು ಚುಚ್ಚುವುದರಿಂದಲೋ ತನಗೆ ಅಸ್ವಸ್ಥತೆಯುಂಟಾದವೇಳೆಯಲ್ಲಿ ತಾಯಿಯು ಬಂದು ಅಸ್ವಸ್ಥತೆಯನ್ನು ನಿವಾರಣೆಮಾಡಿದರೆ ಶಿಶುವಿಗೆ ತೃಪ್ತಿಯುಂಟಾಗುವುದು. ತನಗೆ ಯಾವ ತರಹದ ಅಸ್ವಸ್ಥತೆಯಿಲ್ಲದಿದ್ದರೂ ತಾಯಿಯ ಮುಖವನ್ನೋ ಧ್ವನಿಯನ್ನೋ ಗುರುತಿಸಿದ ಕೂಡಲೇ ತೃಪ್ತಿಯನ್ನು ತೋರಿಸುವುದು. ಇದು ಶಿಶುವಿಗೆ ತಾಯಿಯಲ್ಲಿರುವ ಪ್ರೇಮದ ಸೂಚನೆ. ಪ್ರಾರಂಭದಲ್ಲಿ ಅಸ್ವಸ್ಥತೆಯ ನಿವಾರಣೆಯು ತೃಪ್ತಿಗೆ ಕಾರಣವಾದರೂ, ಕಾಲಕ್ರಮದಲ್ಲಿ ಈ ಅಸ್ವಸ್ಥತೆಯನ್ನು ನಿವಾರಣೆಮಾಡುವ ಸನ್ನಿವೇಶಗಳೆಲ್ಲವೂ ತೃಪ್ತಿಗೆ ಕಾರಣವಾಗುವುವು.

" ಈ ವಯಸ್ಸಿನ ಮಗುವಿನ ವರ್ತನೆಯಲ್ಲಿ ಮತ್ತೊಂದು ವಿಶೇಷವೇನೆಂದರೆ ಹೊರಗಿನಿಂದ ಯಾವ ಪ್ರಚೋದನೆಯೂ ಬಾರದಿದ್ದರೂ ಮಗು ತನ್ನ ಕೈಕಾಲುಗಳನ್ನು ಆಡಿಸುತ್ತಲೇ ಇರುವುದು. ಈ ವರ್ತನೆಗೆ ಬಹುಶಃ ದೇಹದೊಳಗಿನಿಂದ ಬರುವ ಆಂತರಿಕ ಪ್ರಚೋದನೆಗಳೇ ಕಾರಣವಾಗಿರಬೇಕು. ಕಣ್ಣು ಕಿವಿ ಮುಂತಾದ ಇಂದ್ರಿಯಗಳ ಮೂಲಕ ಹೊರಗೆ ನಡೆಯುವ ವಿದ್ಯಮಾನಗಳನ್ನು ತಿಳಿದುಕೊಳ್ಳುವಂ

ತೆಯೇ ದೇಹದೊಳಗಿರುವ ಇಂದ್ರಿಯಗಳ ಮೂಲಕ ಅವಯವಗಳಲ್ಲಿ ಉಂಟಾಗುವ ನೋವು ಬಳಲಿಕೆ ಮುಂತಾದ ವಿಕಾರಗಳನ್ನು ತಿಳಿಯಬಹುದು. ಈ ಇಂದ್ರಿಯಗಳಿಗೆ ಆಂತರಿಕ ಇಂದ್ರಿಯ (ಇಂಟರೋಸೆಪ್ಟಾರ್ಸ್) ಗಳೆಂದು ಹೇಳಬಹುದು. ಇಂತಹವು ನಮ್ಮ ಮಾಂಸಖಂಡಗಳಲ್ಲಿಯೂ, ಕೀಲುಗಳಲ್ಲಿಯೂ ಇರುತ್ತವೆ. ಈ ಆಂತರಿಕ ಇಂದ್ರಿಯಗಳ ಮೂಲಕ ಮಗುವಿನ ವರ್ತನೆಯು ಮಾರ್ಪಡುವುದು. ಮಗುವಿಗೆ ಹಸಿವುಂಟಾದಾಗ ಅಥವಾ ನೋವು ಉಂಟಾದಾಗ ಅದು ತನ್ನ ಕೈಕಾಲುಗಳನ್ನು ಒದರಿಕೊಂಡು ಅಳಲಾರಂಭಿಸುವುದು

"ಮತ್ತೊಂದು ವಿಶೇಷ ಸಂಗತಿ. ಮಗು ತನಗೆ ಬೇಕಾದಷ್ಟು ಹಾಲು ಕುಡಿದಮೇಲೆ ಕುಡಿಯುವುದನ್ನು ನಿಲ್ಲಿಸುವುದು. ಆಗ ಅದರ ತಲೆಗೂದಲನ್ನು ಅಥವಾ ಕಾಲುಬೆರಳುಗಳನ್ನು ಎಳೆದರೆ ಮಗು ಪುನಃ ಹಾಲು ಕುಡಿಯುವಂತೆ ಬಾಯನ್ನು ಆಡಿಸುವುದು. ಹೀಗೆ ಶಿಶು ಯಾವ ಕೆಲಸವನ್ನು ಮಾಡುತ್ತಿರುವುದೋ ಆ ಕೆಲಸವನ್ನು ನಿಲ್ಲಿಸಿದಾಗ ದೇಹದ ಬೇರೆ ಯಾವ ಭಾಗದಲ್ಲಿ ಪ್ರಚೋದನೆಯುಂಟಾದರೂ ಅದು ತಾನು ಮಾಡಿ ಮುಗಿಸಿದ ಕಾರ್ಯವನ್ನು ಮತ್ತೆ ಆರಂಭಿಸುವುದು.

"ತೃಪ್ತಿ-ಅತೃಪ್ತಿಗಳನ್ನಲ್ಲದೆ ಮಗು ಭಯ ಕೋಪ ಮತ್ತು ಪ್ರೀತಿಗಳನ್ನೂ ತೋರಿಸುವುದು ಎಂದು ವಾಟ್ಸನ್ ಅಭಿಪ್ರಾಯಪಡುತ್ತಾನೆ. ಆದರೆ ಈಗ್ಗೆ ಹತ್ತು ಹದಿನೈದು ವರ್ಷಗಳಿಂದೀಚೆಗೆ ಈ ವಿಷಯದಲ್ಲಿ ನಡೆದಿರುವ ಸಂಶೋಧನೆಗಳಿಂದ ವಾಟ್ಸನ್ನನ ಅಭಿಪ್ರಾಯಕ್ಕೆ ಬೆಂಬಲದೊರೆತಿಲ್ಲ. ಈ ಸಂಶೋಧನೆಗಳ ಪ್ರಕಾರ ಹುಟ್ಟಿದ ಶಿಶುವಿನಲ್ಲಿ ತೃಪ್ತಿ ಮತ್ತು ಅಸ್ವಸ್ಥತೆ ಹೊರತು ಮತ್ಯಾವ ಭಾವೋದ್ರೇಕಗಳೂ ಸ್ಪಷ್ಟವಾಗಿ ಕಂಡುಬರುವುದಿಲ್ಲ. ಶಿಶುವಿನಲ್ಲಿ ಬೇರೆ ಯಾವ ಭಾವೋದ್ರೇಕವುಂಟಾದರೂ ಅದು ಇಂಥಾ ಭಾವೋದ್ರೇಕವೆಂದು ಹೇಳಲು ಸಾಧ್ಯವಿಲ್ಲ.* ದೊಡ್ಡವರಲ್ಲಿ ಬೇರೆ ಬೇರೆ ಭಾವಗಳಿಗೆ ಅನುಗುಣವಾದ ಅನುಭಾವಗಳು ಕಂಡುಬರುವಂತೆ ಈ ಸಣ್ಣ ಮಕ್ಕಳಲ್ಲಿ ನಿರ್ದಿಷ್ಟ

* ಏಳನೆಯ ಅಧ್ಯಾಯವನ್ನು ನೋಡಿ.

ವಾದ ಅನುಭಾವಗಳು ಕಂಡುಬರುವುದಿಲ್ಲ. ಉದಾಹರಣೆಗೆ—ಮಗು ಅತ್ತರೆ ಅದರ ಧ್ವನಿಯನ್ನು ಕೇಳಿ ಅದು ಹಸಿವಿನಿಂದ ಹುಟ್ಟಿದ ಅಳುವೋ, ಅಥವಾ ಭಯದಿಂದ ಹುಟ್ಟಿದ ಅಳುವೋ ಎಂಬುದನ್ನು ಊಹಿಸಲಾಗುವುದಿಲ್ಲ. ಷರ್ಮ್ಯಾ ಎಂಬ ಶಾಸ್ತ್ರಜ್ಞನು ಒಂದು ತಿಂಗಳೊಳಗಿನ ಮಕ್ಕಳ ಮೇಲೆ ಬೇರೆ ಬೇರೆ ಭಾವಗಳನ್ನು ಹುಟ್ಟಿಸುವಂತಹ ಪ್ರಚೋದನೆಗಳನ್ನು ಪ್ರಯೋಗಿಸಿದನು. ಆಗ ಮಕ್ಕಳು ತೋರ್ಪಡಿಸಿದ ವರ್ತನೆಯ ಚಲನ ಚಿತ್ರವನ್ನು ತೆಗೆದು ಅವನ್ನು ಮಕ್ಕಳ ವರ್ತನೆಯ ಪರಿಶೀಲನದಲ್ಲಿ ನಿಪುಣರಾದ ಕೆಲವು ಮನಶ್ಶಾಸ್ತ್ರಜ್ಞರಿಗೂ, ವೈದ್ಯರಿಗೂ ಮತ್ತು ದಾದಿಯರಿಗೂ ತೋರಿಸಿ ಯಾವ ಯಾವ ಚಲನವಲನಗಳು ಯಾವ ಯಾವ ಭಾವಗಳನ್ನು ಸೂಚಿಸುವುವು ಎಂದು ಕೇಳಿದನು. ಒಬ್ಬೊಬ್ಬರೂ ಒಂದೊಂದು ವಿಧವಾದ ಉತ್ತರವನ್ನು ಕೊಟ್ಟರು. ಯಾವ ಚರ್ಯೆಯು ಯಾವ ಭಾವವನ್ನು ಸೂಚಿಸುತ್ತದೆ ಎಂಬುದನ್ನು ಹೇಳಲಾಗುವುದಿಲ್ಲವೆಂದು ಈ ಪ್ರಯೋಗದಿಂದ ಸ್ಥಿರಪಟ್ಟಿತು. ಆದರೆ ಮಗುವಿಗೆ ನಾಲ್ಕಾರು ತಿಂಗಳಾದ ಮೇಲೆ ಅದರ ಧ್ವನಿ ಮತ್ತು ವರ್ತನದಿಂದ ಮಗುವಿನಲ್ಲಿ ಉದ್ರೇಕವಾದ ಭಾವವನ್ನು ಕಂಡುಹಿಡಿಯಲು ಸಾಧ್ಯವಿದೆ. ಅದರ ಮುಖ ಚರ್ಯೆಯಿಂದಲೂ, ದೇಹದ ಇತರ ಭಾಗಗಳ ಚಲನವಲನಗಳಿಂದಲೂ ಮಗು ಯಾವ ಭಾವವನ್ನು ತೋರ್ಪಡಿಸುವುದು ಎಂಬುದನ್ನು ಹೇಳಬಹುದು." *

## ವ್ಯಾಪಕ ಮತ್ತು ನಿಶ್ಚಿತ ಪ್ರತಿ ಕ್ರಿಯೆಗಳು

ಆಗತಾನೆ ಹುಟ್ಟಿದ ಮಕ್ಕಳ ವರ್ತನೆಯನ್ನು ಪ್ರಯೋಗಗಳ ಮೂಲಕ ಪರೀಕ್ಷಿಸಿರುವುದರಲ್ಲಿ ಕಂಡುಬಂದಿರುವ ಬಹು ಮುಖ್ಯವಾದ ಫಲಿತಾಂಶವೇನೆಂದರೆ—ಯಾವ ಅಂಗಕ್ಕೆ ಅಥವಾ ಇಂದ್ರಿಯಕ್ಕೇ ಆಗಲಿ ಯಾವುದೇ ಪ್ರಚೋದನೆಯನ್ನುಂಟುಮಾಡಿದರೂ, ಮಗುವಿನ ಪ್ರತಿಕ್ರಿಯೆಯು ದೇಹಾದ್ಯಂತವನ್ನು ವ್ಯಾಪಿಸುವುದು. ಮೊದಲ ಎರಡು ವಾರಗಳಲ್ಲಿ ಒಂದು ನಿಶ್ಚಿತವಾದ ಪ್ರಚೋದನೆಯನ್ನು ಮಾಡಿದರೆ ಪ್ರತಿ

* ಇದೇ ಗ್ರಂಥಕರ್ತರ "ಮಕ್ಕಳ ಭಾವಜೀವನ" ಎಂಬ ಪುಸ್ತಕದಿಂದ.

ಕ್ರಿಯೆಯು ಆ ಅವಯವಕ್ಕೆ ಮಾತ್ರ ನೀಮಿತವಾಗದೆ ಬೇರೆ ಅವಯವ ಗಳಿಗೂ ಹರಡುವುದು. ಪ್ರಚೋದಿಸಿದ ಪ್ರತ್ಯೇಕ ಭಾಗವು ಅಲುಗುವು ದೇನೋ ಸರಿ; ಆದರೆ ಅಲ್ಲಿಗೆ ನಿಲ್ಲದೆ, ಅಕ್ಕಪಕ್ಕದ ಅವಯವಗಳೂ ಅಲುಗುವುವು. ಉದಾಹರಣೆ—ಆಗತಾನೆ ಹುಟ್ಟಿದ ಮಗುವಿಗೆ ದೀಪ ವನ್ನು ತೋರಿದರೆ ಕಣ್ಣಿನ ಪಾಪೆಯು ಅಗಲವಾಗಿಯೂ ಕಿರಿದಾಗಿಯೂ ಆಗುವುದು. ಮತ್ತು ಕಣ್ಣುಗುಡ್ಡೆಯು ಚಲಿಸುವುದು. ಈ ಪ್ರತಿಕ್ರಿಯೆಗಳೇ ಅಲ್ಲದೆ ತಲೆಯ ಅಲುಗಾಟವ್ಯೆ ಕೈ ಕಾಲುಗಳ ಅಲುಗಾಟವೂ ಉಂಟಾಗು ವುವು. ಎರಡು ವಾರಗಳ ವಯಸ್ಸಿಗೆ ಬರುವಹೊತ್ತಿಗೆ ಈ ವ್ಯಾಪಕ ಪ್ರತಿಕ್ರಿಯೆಯು ಕಡಿಮೆಯಾಗುವುದು. ಉದಾಹರಣೆಗೆ—ಬೆಳಕಿನ ಪ್ರಚೋದನೆಗೆ ಶೇಕಡ ೧೧ ರಷ್ಟು ದೇಹಾದ್ಯಂತ ಚಲನೆಯೂ, ಶೇಕಡ ೧೧ ರಷ್ಟು ಕೈ ಕಾಲುಗಳ ಅಲುಗಾಟವೂ, ಶೇಕಡ ೯ ರಷ್ಟು ತಲೆಯ ಅಲುಗಾಟವೂ ಶೇಕಡ ೧ ರಷ್ಟು ಮುಖದ ಮತ್ತು ಬಾಯಿಯ ಚಲ ನವೂ, ಶೇಕಡ ೬೭ ರಷ್ಟು ಕಣ್ಣಿನ ಚಲನವೂ ಉಂಟಾಗುವುದು. ಇದೇ ರೀತಿ ಶಬ್ದ, ರುಚಿ, ವಾಸನೆ ಮತ್ತು ಶೀತೋಷ್ಣಗಳ ಪ್ರಚೋದನೆಗೂ, ಬೇರೆ ಬೇರೆ ಅಂಗಗಳ ಪ್ರತಿಕ್ರಿಯೆಗಳುಂಟಾಗುವುವು.

ಈ ಪ್ರಯೋಗಗಳಿಂದ, ಹುಟ್ಟಿದ ಮಗುವಿನ ವರ್ತನೆಯಲ್ಲಿ ನಿಶ್ಚಿತ ರಿಫ್ಲೆಕ್ಸ್ ಪ್ರತಿಕ್ರಿಯೆಗಳು ಅತ್ಯಲ್ಪವಾಗಿರುವುವೆಂಬುದು ಸ್ಪಷ್ಟವಾಗು ವುದು. ಹುಟ್ಟಿದ ಸಮಯದಲ್ಲಿ ಯಾವ ಪ್ರಚೋದನೆಗೇ ಆಗಲಿ ದೇಹಾ ದ್ಯಂತವನ್ನೂ ವ್ಯಾಪಿಸಿರುವ ಪ್ರತಿಕ್ರಿಯೆಗಳು ಮಗು ಬೆಳೆಯುತ್ತ ಬೆಳೆ ಯುತ್ತ ಪ್ರತ್ಯೇಕ ಅಂಗಗಳ ನಿಶ್ಚಿತ ಪ್ರತಿಕ್ರಿಯೆಗಳಾಗಿ ಕಾಣಿಸಿಕೊಳ್ಳು ವುವು. ಈ ಕ್ರಮವು ಗರ್ಭಾಂತರ ಶೈಶವಾವಸ್ಥೆಯಿಂದಲೂ ನಡೆದುಕೊಂಡು ಬರುವುದು.* ಗರ್ಭದೊಳಗಿನ ಭ್ರೂಣವು, ಮೊದಲು ದೇಹಾದ್ಯಂತ ಚಲನೆಯನ್ನು ಮಾತ್ರ ತೋರಿಸುವುದು. ಆಮೇಲೆ ಗರ್ಭದಲ್ಲಿಯೇ ಬೇರೆ ಅಂಗಗಳ ಪ್ರತ್ಯೇಕ ಚಲನವುಂಟಾಗಲು ಆರಂಭವಾಗುವುದು. ಮಗು ಹುಟ್ಟಿದನಂತರ ಈ ಪ್ರತ್ಯೇಕತ್ವವು ತೀವ್ರವಾಗಿ ಹೆಚ್ಚುತ್ತ

* ನಾಲ್ಕನೆಯ ಅಧ್ಯಾಯವನ್ನು ನೋಡಿ.

ಹೋಗುವುದು. ಇನ್ನೊಂದು ವಿಧವಾಗಿ ಹೇಳಬೇಕಾದರೆ, ವ್ಯಾಪಕ ಪ್ರತಿಕ್ರಿಯೆಯು ಭ್ರೂಣದಲ್ಲಿ ಹೆಚ್ಚಾಗಿದ್ದು, ಭ್ರೂಣವು ಬೆಳೆಯುತ್ತ ಬೆಳೆಯುತ್ತ ಅದು ಕಡಿಮೆಯಾಗುತ್ತ ಬಂದು ಮಗುವು ಜನಿಸಿದ ಮೇಲೆ ಹದಿನೈದು ದಿನಗಳಲ್ಲಿ ಬಹಳಮಟ್ಟಿಗೆ ಕಡಿಮೆಯಾಗುವುದು.

ದೇಹಾದ್ಯಂತ ಚಲನವು ವರ್ತನೆಗೆ ಅಡಿಗಲ್ಲಾದರೂ ಮಗು ಬೆಳೆಯುತ್ತ ಬೆಳೆಯುತ್ತ, ಇದು ಕ್ಷೀಣವಾಗಿ ಪ್ರತ್ಯೇಕ ಅಂಗಗಳ ಚಲನವು ಪ್ರಾಮುಖ್ಯತೆಯನ್ನು ಹೊಂದುವುದು. ಪ್ರತ್ಯೇಕ ಪ್ರತಿಕ್ರಿಯೆಗಳು ಜೀವನವನ್ನು ಸರಾಗವಾಗಿ ನಡೆಸಬೇಕಾದರೆ, ಅತ್ಯಾವಶ್ಯಕ. ಸನ್ನಿವೇಶಕ್ಕೆ ತಕ್ಕಂತೆ ವರ್ತಿಸುವುದು ಬಾಳಿನ ಉಳಿಯುವಿಕೆಗೆ ಅಗತ್ಯ. ಇದಕ್ಕೆ ಅನುಕೂಲವಾಗಿ ನರಮಂಡಲದ ಬೆಳೆವಣಿಗೆಯು ಮುಂದುವರಿಯುವುದು. ಬೆಳೆಯುತ್ತ ಬೆಳೆಯುತ್ತ ಈ ನರಮಂಡಲಗಳ ಆಂತರಿಕ ಸಂಬಂಧಗಳು ವಿವಿಧ ರೂಪದಲ್ಲಿ ವೃದ್ಧಿಯಾಗುವುದರಿಂದ ಮಗು ತನ್ನ ಅಂಗಾಂಗಗಳ ಮೇಲೆ ಹತೋಟಿಯನ್ನು ಹೇಗೆ ಹೆಚ್ಚಿಸಿಕೊಳ್ಳುವುದೆಂಬುದನ್ನು ಮುಂದಿನ ಅಧ್ಯಾಯದಲ್ಲಿ ವಿವರಿಸಲಾಗಿದೆ.

---

# ಅಧ್ಯಾಯ ೬

## ಮಕ್ಕಳ ದೈಹಿಕ ಬೆಳೆವಣಿಗೆ ಮತ್ತು ಅವಯವಗಳ ಮೇಲಿನ ಹತೋಟಿ

### ದೇಹ ಮನಸ್ಸುಗಳ ಸಂಬಂಧ

ಮಕ್ಕಳ ಬೆಳೆವಣಿಗೆಯ ಕ್ರಮವನ್ನು ಪೂರ್ಣವಾಗಿ ಅರಿಯಬೇಕಾದರೆ, ಅವರ ದೈಹಿಕ ಬೆಳೆವಣಿಗೆಯು ಹೇಗೆ ನಡೆಯುವದೆಂಬುದನ್ನು ವಿಚಾರ ಮಾಡುವುದು ಅತ್ಯಾವಶ್ಯಕ. ಮಾನಸಿಕ ಬೆಳೆವಣಿಗೆಗೂ, ದೈಹಿಕ ಬೆಳೆವಣಿಗೆಗೂ, ಒಂದು ನಿಕಟಸಂಬಂಧವಿರುವುದು. ಆದರೆ ಸಾಧಾರಣವಾಗಿ ಸಾಮಾನ್ಯ ಜನರಲ್ಲಿಯೂ, ಕೆಲವು ವೈಜ್ಞಾನಿಕರಲ್ಲಿಯೂ ದೇಹವೇ ಬೇರೆ, ಮನಸ್ಸೇ ಬೇರೆ ಎಂಬ ಅಭಿಪ್ರಾಯವಿರುವುದು. ಹೀಗೆ ಜೀವನವನ್ನು ವಿಂಗಡಿಸುವುದು ಅಸತ್ಯವೆಂದು ಕೆಲವು ಉಪನಿಷತ್ತುಗಳಲ್ಲಿ ಬರೆದಿರುವರು. ತೈತ್ತರೀಯ ಉಪನಿಷತ್ತಿನಲ್ಲಿ ಐದು ಕೋಶಗಳಿವೆಯೆಂದು ಕವಿಯು ಬರೆದಿರುವನು. ಈ ಕೋಶಗಳಲ್ಲಿ ಮೊದಲನೆಯದು ಅನ್ನಮಯ ಕೋಶ. ಅಂದರೆ ದೈಹಿಕ ಕೋಶ ಅಥವಾ ಜಡಾವಸ್ಥೆ. ಎರಡನೆಯದು ಪ್ರಾಣಮಯ ಕೋಶ, ಮೂರನೆಯದು ಮನೋಮಯ ಕೋಶ, ನಾಲ್ಕನೆಯದು ವಿಜ್ಞಾನಮಯ ಕೋಶ; ಐದನೆಯದು ಆನಂದಮಯ ಕೋಶ. ಈ ಮಹಾಕವಿಯ ಪ್ರಕಾರ ಪ್ರಕೃತಿ, ಪ್ರಾಣ, ಮನಸ್ಸು ಇವೆಲ್ಲವೂ ಒಂದನ್ನೊಂದು ಅನುಸರಿಸಿದೆ ಎಂದು ತಿಳಿದುಬರುವುದು. ಆಧುನಿಕ ಪಾಶ್ಚಾತ್ಯ ತತ್ತ್ವಶಾಸ್ತ್ರಜ್ಞರೂ, ವೈಜ್ಞಾನಿಕರೂ, ಇದೇ ಅಭಿಪ್ರಾಯವನ್ನು ವ್ಯಕ್ತಪಡಿಸಿರುವರು. ಮುಖ್ಯವಾಗಿ ಶೈಶವಾವಸ್ಥೆಯಲ್ಲಿ ದೇಹ ಮತ್ತು ಮನಸ್ಸಿನ ಸಂಬಂಧವು ಬಹು ನಿಕಟವಾದುದು. ದೇಹವು ಬೆಳೆಯದೇ ಹೋದರೆ ಮಗುವು ತನ್ನ ಆವರಣಕ್ಕೆ ಸರಿಯಾಗಿ ಜೀವನ

ವನ್ನು ಹೊಂದಿಸಿಕೊಳ್ಳಲು ಅಸಾಧ್ಯ. ಈ ಅನ್ಯೋನ್ಯ ಸಂಬಂಧವು ಎಷ್ಟು ಮುಖ್ಯವಾದುದೆಂಬುದು ಮುಂದೆ ಹೇಳುವ ವಿಷಯಗಳಿಂದ ವಿಶದವಾಗುವುದು.

## ಹೊಸ ಪರಿಸ್ಥಿತಿಯೊಡನೆ ಹೊಂದಿಕೆ

ಮೇಲಿನ ಅಧ್ಯಾಯದಲ್ಲಿ ನೋಡಿದ ಹಾಗೆ ಮಗು ಮೂರು ನಾಲ್ಕು ವಾರಗಳ ವಯಸ್ಸಿನೊಳಗೆ ಬಾಹ್ಯಪ್ರಪಂಚದ ಹೊಸ ಆವರಣಕ್ಕೆ ಅನ್ವಯಿಸಿಕೊಂಡು ಬೆಳೆಯಲು ಆರಂಭಿಸುವುದು. ಈ ಸಮಯಕ್ಕೆ ಮಗುವಿನ ತೂಕವು ಹೆಚ್ಚಾಗಲಾರಂಭಿಸುವುದು. ಆಹಾರವನ್ನು ಚೆನ್ನಾಗಿ ಜೀರ್ಣಿಸಿಕೊಳ್ಳುವ ಶಕ್ತಿಯನ್ನು ಪಡೆಯುವದು. ಮಗುವನ್ನು ಸರಿಯಾಗಿ ನೋಡಿಕೊಂಡರೆ ಅದರ ದಿನಚರಿಯಲ್ಲಿ ಒಂದು ಕ್ರಮ ಬರುವುದು. ರಾತ್ರಿಯವೇಳೆ ಹೆಚ್ಚಾಗಿ ನಿದ್ರೆಮಾಡುವದು. ಹಗಲಿನಲ್ಲಿ ಹೆಚ್ಚಾಗಿ ಎಚ್ಚರದಿಂದಿರುವುದು. ನಿದ್ದೆಯಿಂದ, ಹಾಲು ಕುಡಿಯುವ ಹೊತ್ತಿಗೆ ಸರಿಯಾಗಿ ಎಚ್ಚರಗೊಳ್ಳುವುದು. ಈ ರೀತಿ ಹುಟ್ಟಿದ ೨೦-೩೦ ದಿನಗಳೊಳಗೆಯೇ ಅಭ್ಯಾಸಗಳನ್ನು ಕಲಿಯತೊಡಗುವದು. ಸರಿಯಾಗಿ ನಿದ್ದೆ ಮಾಡದೆ, ಪದೇ ಪದೇ ಆಹಾರಕ್ಕಾಗಿ ಅತ್ತರೆ, ಇದಕ್ಕೆ ಕಾರಣ, ತಾಯಿಯು ಮಗುವನ್ನು ಕ್ರಮಬದ್ಧವಾಗಿ ನೋಡಿಕೊಳ್ಳುತ್ತಿಲ್ಲವೆಂದು ತಿಳಿಯಬೇಕು.

ಮಗುವಿನ ಅಂಗಾಂಗಗಳ ಬೆಳೆವಣಿಗೆಯು ಯಾವ ರೀತಿ ಮುಂದುವರಿಯುವುದೆಂದು ಈಗ ನೋಡೋಣ.

## ಎತ್ತರದ ಬೆಳೆವಣಿಗೆ

ಹುಟ್ಟಿದಾಗ ಮಗುವು ಸಾಧಾರಣವಾಗಿ ೨೦.೫ ಅಂಗುಲಗಳ ಎತ್ತರವಿರುವುದು. ಈ ಎತ್ತರವು ತಾಯಿತಂದೆಗಳ ಎತ್ತರವನ್ನೂ ಅನುಸರಿಸಿ ಹೆಚ್ಚು ಕಡಿಮೆಯಾಗಿರಬಹುದು. ಸಾಮಾನ್ಯವಾಗಿ ಗಂಡು ಮಕ್ಕಳು ಹೆಣ್ಣು ಮಕ್ಕಳಿಗಿಂತ ಸ್ವಲ್ಪ ಹೆಚ್ಚು ಎತ್ತರವಾಗಿರುವರು. ದೇಹದ ಎತ್ತರವು ಶೈಶವಾವಸ್ಥೆಯಲ್ಲಿ ಬಹಳ ವೇಗದಿಂದ ಹೆಚ್ಚುವುದು. ಐದು ವರ್ಷ ವಯಸ್ಸಿನೊಳಗೆ ಹುಟ್ಟಿದಾಗಿದ್ದ ಎತ್ತರದ ಎರಡರಷ್ಟು

ಬೆಳೆಯುವುದು.* ಮುಖ್ಯವಾಗಿ ಮೊದಲ ಎರಡು ವರ್ಷಗಳಲ್ಲಿ ಎತ್ತರದ




ಚಿತ್ರ 15. ಜನನದಿಂದ ೧೨ ವರ್ಷಗಳವರೆಗೂ ಎತ್ತರದಲ್ಲಿ ಬೆಳವಣಿಗೆ.

ಬೆಳವಣಿಗೆಯು ಅತಿ ತೀವ್ರವಾಗಿ ಮುಂದುವರಿಯುವುದು. ಮೇಲೆ ಕೊಟ್ಟಿರುವ ನಕ್ಷೆಯನ್ನು ನೋಡಿದರೆ,† ಮೊದಲನೆಯ ವರ್ಷದಲ್ಲಿ ಶೇಕಡ ೪೦ ರಷ್ಟು ಹೆಚ್ಚು ಎತ್ತರವನ್ನು ಮಗು ಪಡೆಯುವುದು. ಹುಟ್ಟಿದಾಗ ೨೦ ಅಂಗುಲವಿದ್ದ ಮಗುವು ಒಂದು ವರ್ಷಕ್ಕೆ ಸರಿಯಾಗಿ ೨೮ ಅಂಗುಲಗಳ ಎತ್ತರವುಳ್ಳದ್ದಾಗುವುದು. ಒಂದು ವರ್ಷದಿಂದ ಎರಡು ವರ್ಷಗಳೊಳಗೆ ೩೩ ಅಂಗುಲ ಎತ್ತರವಾಗುವುದು. ಅಂದರೆ ಸುಮಾರು ಶೇಕಡ ೧೮ ರಷ್ಟು ಹೆಚ್ಚುವುದು. ಎರಡನೆಯ ವರ್ಷದಿಂದ ಹಿಡಿದು ಆರನೆಯ ವರ್ಷದವರೆವಿಗೂ ವರ್ಷ ವರ್ಷಕ್ಕೂ ಶೇಕಡ ೧೦ ರಷ್ಟು ಹೆಚ್ಚುತ್ತಾ ಹೋಗುವುದು. ಆರು ವರ್ಷಗಳಿಂದ ಹನ್ನೆರಡು ವರ್ಷಗಳ ವರೆವಿಗೆ ಪ್ರತಿ ವರ್ಷವೂ ಶೇಕಡ ೫–೬ ರಷ್ಟು ಮಾತ್ರ

---

* ೧೫ ನೆಯ ಚಿತ್ರವನ್ನು ನೋಡಿ.

† ೧೬ ನೆಯ ಚಿತ್ರವನ್ನು ನೋಡಿ.

ಹೆಚ್ಚುವುದು. ಇದರಲ್ಲಿ ಗಮನಿಸಬೇಕಾದ ಮುಖ್ಯಾಂಶವೇನೆಂದರೆ ಮಗುವಿನ ಎತ್ತರವು ಮೊದಲ ಎರಡು ವರ್ಷಗಳಲ್ಲಿ ಅತಿ ತೀವ್ರವಾಗಿ ಹೆಚ್ಚುವುದು. ಐದು ವರ್ಷಗಳ ವರೆಗೆ ಸುಮಾರಾದ ವೇಗದಿಂದ ಹೆಚ್ಚಿ ಐದು ವರ್ಷದನಂತರ ಬೆಳೆವಣಿಗೆಯ ವೇಗವು ಮಂದಗತಿಯಿಂದ ಮುಂದೆ ಸಾಗುವುದು.*

ಹುಟ್ಟಿದ ಸಮಯದಲ್ಲಿ ಮಗು ಸಾಧಾರಣವಾಗಿ ೬–೮ ಪೌಂಡು




ಚಿತ್ರ 16. ಜನನದಿಂದ ತೂಕದ ಬೆಳವಣಿಗೆ.

ಗಳ ತೂಕವುಳ್ಳದ್ದಾಗಿರುವುದು. ಹುಡುಗರ ತೂಕವು ಹುಡುಗಿಯರ ತೂಕಕ್ಕಿಂತ ಸ್ವಲ್ಪ ಹೆಚ್ಚಾಗಿರುವುದು. ಮಗುವಿನ ತೂಕವು

* ೮ ನೆಯ ಅಧ್ಯಾಯದಲ್ಲಿ ವಿವರಿಸಿರುವ ಬುದ್ಧಿಶಕ್ತಿಯೊಡನೆಹೋಲಿಸಿ.

ಮೊದಲ ಹನ್ನೆರಡು ತಿಂಗಳುಗಳಲ್ಲಿ ಶೇಕಡ ೧೦೦ ಕ್ಕಿಂತಲೂ ಅಧಿಕ ವಾಗಿ ಹೆಚ್ಚುವುದು ; ಅಂದರೆ ಒಂದಕ್ಕೆ ಎರಡರಷ್ಟು ಅಥವಾ ಇನ್ನೂ ಜಾಸ್ತಿಯಾಗಿ ಹೆಚ್ಚುವದು. ಐದು ವರ್ಷಗಳಿಂದ ಹಿಡಿದು ಹನ್ನೊಂದು ವರ್ಷಗಳ ವರೆಗೂ ವರ್ಷ ವರ್ಷಕ್ಕೆ ಸಾಧಾರಣವಾಗಿ ಶೇಕಡ ೧೧ರಷ್ಟು ಹೆಚ್ಚುತ್ತಾ ಹೋಗುವುದು. ತೂಕವು ಹೆಚ್ಚಾಗಲು ವಯಸ್ಸೊಂದೇ ಕಾರಣವಲ್ಲದೆ, ತಂದೆತಾಯಿಗಳ ತೂಕ ಮತ್ತು ಮಗುವಿನ ಆಹಾರ ಮುಂತಾದುವುಗಳ ಪ್ರಭಾವವೂ ಇರುವದು.

## ತಲೆಯ ಬೆಳೆವಣಿಗೆ

ನಾವು ಇದುವರೆವಿಗೂ ವಿವರಿಸಿರುವ ಎತ್ತರ ತೂಕಗಳ ಬೆಳೆವಣಿಗೆಯ ಕ್ರಮವು ಒಟ್ಟು ದೇಹವನ್ನು ಅನುಸರಿಸಿರುವುದು ಮೇಲೆ ನೋಡಿದ ಬೆಳೆವಣಿಗೆಯ ವೇಗವು ಕತ್ತಿನಿಂದ ನಡುವಿನವರೆಗಿನ ಭಾಗ ಮತ್ತು ಕೈ ಕಾಲುಗಳಿಗೆ ಹೆಚ್ಚಾಗಿ ಅನ್ವಯಿಸುವುದು. ಆದರೆ ತಲೆಯ ಬೆಳೆವಣಿಗೆಗೆ ಆಕ್ರಮವು ಅನ್ವಯಿಸುವದಿಲ್ಲ. ತಲೆಯು ದೇಹದ ಬೇರೆ ಭಾಗಗಳಿಗಿಂತ ಕಡಿಮೆಯ ವೇಗದಿಂದ ಬೆಳೆಯುವುದು. ಇದಕ್ಕೆ ಕಾರಣವೇನೆಂದರೆ ಹುಟ್ಟುವುದಕ್ಕೆ ಮೊದಲೇ ಮಗುವಿನ ತಲೆಯು ಇತರ ಅಂಗಗಳಿಗಿಂತ ಹೆಚ್ಚಿನ ಪ್ರಮಾಣದಲ್ಲಿ ಬೆಳೆವಣಿಗೆಯನ್ನು ಪಡೆದಿರುವದು.* ಆದುದರಿಂದ ವಯಸ್ಕನ ತಲೆಯ ಗಾತ್ರವನ್ನು ಪಡೆಯಲು ಅಷ್ಟೊಂದು ವೇಗದಿಂದ ಬೆಳೆಯಬೇಕಾಗಿಲ್ಲ. ಭ್ರೂಣದ ತಲೆಯು ಇತರ ಅಂಗಗಳಿಗಿಂತ ಹೆಚ್ಚು ಗಾತ್ರವಾಗಿರುವದು. ಸಾಧಾರಣವಾಗಿ ಒಟ್ಟು ದೇಹದ ಗಾತ್ರದಲ್ಲಿ ತಲೆಯ ಗಾತ್ರವು ಅರ್ಧದಷ್ಟಿರುವದು. ಮೇಲೆ ನೋಡಿದ ಹಾಗೆ, ಭ್ರೂಣದ ಬೆಳೆವಣಿಗೆಯು ನರಮಂಡಲದ ಬೆಳೆವಣಿಗೆಯನ್ನು ಅನುಸರಿಸಿರುವುದು. ಇತರ ಪ್ರಾಣಿಗಳಿಗೂ ಮನುಷ್ಯನಿಗೂ ಇರುವ ಒಂದು ಮುಖ್ಯ ವ್ಯತ್ಯಾಸ—ತಲೆಯ ಮೆದುಳಿನ ಗಾತ್ರದ ಪ್ರಮಾಣ.

---

* ೧೦ ನೆಯ ಚಿತ್ರವನ್ನು ನೋಡಿ.

ಹುಟ್ಟಿದ ಸಮಯದಲ್ಲಿ ತಲೆಯ ಎತ್ತರವು ದೇಹದ ಎತ್ತರದ ಶೇಕಡ ೨೨ ರಷ್ಟು ಇರುವದು. ಶರೀರವು ಬೆಳೆಯತ್ತ ಬೆಳೆಯುತ್ತ ತಲೆಯು ಗೋಳಾಕಾರವನ್ನು ಬಿಟ್ಟು ಅಗಲಕ್ಕಿಂತ ಎತ್ತರದಲ್ಲಿ ಹೆಚ್ಚಾದ ಬೆಳೆವಣಿಗೆಯನ್ನು ಹೊಂದುವುದು. ಒಂದು ತಿಂಗಳು ವಯಸ್ಸಿನ ಮಗುವಿನ ತಲೆಯ ಸುತ್ತಳತೆಯು ಮೂರು ವರ್ಷದ ಮಗುವಿನ ತಲೆಯ ಸುತ್ತಳತೆಯಲ್ಲಿ ಶೇಕಡ ೬೭ ರಷ್ಟಿರುವದು. ಆರು ವರ್ಷದ ಮಗುವಿನ ತಲೆಯ ಸುತ್ತಳತೆಯು ವಯಸ್ಕನ ತಲೆಯ ಶೇಕಡ ೯೦ ರಷ್ಟಿರುವದು. ಮಗುವಿಗೆ ಹನ್ನೆರಡು ವರ್ಷಗಳಾಗುವ ಸಮಯಕ್ಕೆ ವಯಸ್ಕನ ತಲೆಯ ಶೇಕಡ ೯೫ ರಷ್ಟಿರುವದು. ಅಂದರೆ ತಲೆಯ ಬೆಳೆವಣಿಗೆಯ ಬಹುಭಾಗವು ಮಗುವಿಗೆ ಆರು ವರ್ಷ ತುಂಬುವುದರೊಳಗಾಗಿಯೇ ನಡೆದಿರುವದು.*

## ಅವಯವಗಳ ಮೇಲಿನ ಹತೋಟಿ

ಮೇಲಿನ ಅಧ್ಯಾಯಗಳಲ್ಲಿ ವಿವರಿಸಿರುವಂತೆ ತಾಯಿಯ ಹೊಟ್ಟೆಯೊಳಗೆ ಬೆಳೆಯುತ್ತಿರುವ ಮಗುವೂ ಮತ್ತು ಆಗತಾನೆ ಹುಟ್ಟಿದ ಮಗುವೂ ತನ್ನ ದೇಹ ಮತ್ತು ಅಂಗಗಳ ಚಲನೆಯಲ್ಲಿ ಒಂದು ಕ್ರಮವನ್ನು ತೋರಿಸುವುವು. ದೇಹದ ಯಾವ ಭಾಗಕ್ಕೇ ಆಗಲಿ, ಪ್ರಚೋದನೆಯುಂಟಾದರೆ ದೇಹಾದ್ಯಂತವೂ ಚಲಿಸುವುದೆಂದೂ, ಹುಟ್ಟಿದಾಗ ವ್ಯಾಪಕ ಪ್ರತಿಕ್ರಿಯೆಯನ್ನು ತೋರಿಸುವುದೆಂದೂ, ನೋಡಿರುವೆವು. ಅಂಗಗಳ ಪ್ರತ್ಯೇಕ ಅಲುಗಾಟವು ಬಹಳ ಕಡಿಮೆ. ಹುಟ್ಟಿದ ಸಮಯದಲ್ಲಿ ಇಷ್ಟೇ ಪರಿಮಿತಿಯ ವರ್ತನೆಯನ್ನು ತೋರಿಸುವ ಮಗುವು ಬೆಳೆಯುತ್ತ ನಾನಾ ಅಂಗಗಳ ಮೇಲೆ ಹತೋಟಿಯನ್ನು ಪಡೆದು, ಅತ್ಯಂತ ಸೂಕ್ಷ್ಮವಾದ ಅಂಗಚಲನೆಯನ್ನು ಮಾಡುವ ಸಾಮರ್ಥ್ಯವನ್ನು ಹೇಗೆ ಪಡೆಯುವದೆಂಬುದನ್ನು ನೋಡೋಣ.

ಮನೆಗಳಲ್ಲಿ ತಾಯಂದಿರು ಮಕ್ಕಳ ಚಲನೆಯಲ್ಲಿ ಒಂದು ಕ್ರಮವಿರುವದೆಂದು ಅರಿತಿರುವರು. ಮಗು ಕೆಲವು ದಿನಗಳಾದ ಮೇಲೆ

---

* ೨೩ ನೆಯ ಚಿತ್ರವನ್ನು ನೋಡಿ.

ತಲೆಯನ್ನು ಎತ್ತಲು ಶಕ್ತಿಪಡೆಯುವುದೆಂದೂ, ಕೆಲವು ತಿಂಗಳ ಮೇಲೆ ಮಗುಚಿಕೊಳ್ಳುವುದೆಂದೂ, ಇನ್ನು ಸ್ವಲ್ಪ ಕಾಲದನಂತರ ಅಂಬೆಗಾಲಿಡುವದೆಂದೂ, ಆಮೇಲೆ ಹೊಸಲು ದಾಟುವದೆಂದೂ, ನಂತರ ನಡೆಯಲಾರಂಭಿಸುವದೆಂದೂ, ಅನುಭವಸಿದ್ಧಿಯಿಂದ ಹೇಳುವರು. ಆದರೆ ಅವರ ತಿಳಿವಳಿಕೆಯು ಖಚಿತವಾದುದಲ್ಲ ಅವರು ಮಕ್ಕಳನ್ನು ಜಾಗರೂಕತೆಯಿಂದ ಗಮನಿಸಿ ಗುರುತುಹಾಕಿ, ನೂರಾರು ಮಕ್ಕಳ ಪರೀಕ್ಷಣದಿಂದ ಸಿದ್ಧವಾದ ಒಂದು ಸರಾಸರಿಯ ಮೇಲೆ ಹೇಳುತ್ತಿಲ್ಲ. ಆದರೆ ಈ ಕೆಲಸವನ್ನು ಈಗ ವೈಜ್ಞಾನಿಕರು ಮಾಡಿರುವರು. ಅದರಲ್ಲಿಯೂ ಷರ್ಲಿ ಎಂಬಾಕೆಯು ನಡೆಸಿದ ಪರೀಕ್ಷಣ ಪರಿಶೀಲನಗಳಿಂದ ಈ ಕೆಳಗೆ ಸೂಚಿಸಿರುವ ವಿವರಗಳು ನಮಗೆ ದೊರೆತಿವೆ.

ಹುಟ್ಟಿದ ಮೇಲೆ ಮೊದಲು ಕಣ್ಣಿನ ಮಾಂಸಖಂಡಗಳ ಮೇಲೆ ಹತೋಟಿಯು ಆರಂಭವಾಗುವದೆಂದು ನೋಡಲಾಗಿದೆ. ಮೊದಲನೆಯ ವಾರದಲ್ಲಿ ಮಗು ಚಲಿಸುವ ದೀಪವನ್ನು ಅಥವಾ ಥಳ ಥಳಿಸುವ ವಸ್ತುವನ್ನು ನೋಡಲೆತ್ನಿಸುವುದು. ಎರಡು ಮೂರು ವಾರಗಳಲ್ಲಿ ತಾಯಿಯ ಮುಖವನ್ನೂ ಕೈಯನ್ನೂ ಅಥವಾ ಯಾವುದಾದರೂ ಆಟಿಗೆಯನ್ನು ಕಣ್ಣುಬಿಟ್ಟು ನೋಡುವುದು. ಆಮೇಲೆ ಚಲಿಸುತ್ತಿರುವ ವಸ್ತುಗಳನ್ನು ಕಣ್ಣಿನ ನೋಟದಿಂದ ಹಿಂಬಾಲಿಸುವುದನ್ನು ಕಲಿಯುವುದು. ಮೂರು ತಿಂಗಳ ವಯಸ್ಸಿನೊಳಗೆ ಕಣ್ಣಿನ ಮಾಂಸಖಂಡಗಳ ಮೇಲೆ ಪೂರ್ಣ ಹತೋಟಿಯನ್ನು ಪಡೆಯುವುದು.*

ಇದೇ ಸಮಯದಲ್ಲಿ ತಲೆ ಮತ್ತು ಕತ್ತಿನ ಮಾಂಸಖಂಡಗಳ ಮೇಲೆ ಹತೋಟಿಯನ್ನು ಪಡೆಯುವುದು.. ಒಂದು ತಿಂಗಳ ವಯಸ್ಸಿನಲ್ಲಿ ಬೋರಲಾಗಿ ಮಲಗಿಸಿದರೆ ತಲೆಯನ್ನು ಎತ್ತುವುದು. ಮೂರು ತಿಂಗಳ ವಯಸ್ಸಿನಲ್ಲಿ ಅಂಗೈಗಳ ಆಧಾರದ ಮೇಲೆ ತಲೆ ಮತ್ತು ಎದೆಯನ್ನು ಎತ್ತುವ ಸಾಮರ್ಥ್ಯವನ್ನು ಪಡೆಯುವುದು. ತಾಯಿಯು ಮಗುವನ್ನು ಈಗ ಎತ್ತಿಕೊಂಡರೆ ಕತ್ತು ಮತ್ತು ಭುಜಗಳಿಗೆ ಮೊದಲಿ

---

* ೮ನೆಯ ಪಟ್ಟಿಯನ್ನು ನೋಡಿ.

## ಪಟ್ಟಿ ೪.
## ದೈಹಿಕ ಹತೋಟಿಯ ಬೆಳವಣಿಗೆಯ ಕ್ರಮ

| ಸರಾಸರಿ ವಯಸ್ಸು | ಕಣ್ಣಿನ ಅಲುಗಾಟ | ಚಲನ ಶಕ್ತಿ | ಕೈ ಕೆಲಸ | ಆಟ | ಒಳಪಟ್ಟ ಅಂಗ |
|---|---|---|---|---|---|
| ೬ ದಿನಗಳು | ಬೆಳಕನ್ನು ಗಮನಿಸುವುದು. | | | | |
| ೨ ವಾರಗಳು | ಮನುಷ್ಯರನ್ನು ಗಮನಿಸುವುದು. | | | | |
| ೪ ವಾರಗಳು | | ಗದ್ದವನ್ನು ಎತ್ತುವುದು. | | | |
| ೫ ವಾರಗಳು | ಅಡ್ಡಡ್ಡಲಾಗಿ ಚಲಿಸುವ ವಸ್ತುವನ್ನು ನೋಟದಿಂದ ಹಿಂಬಾಲಿಸುವುದು. | | | | ಕಣ್ಣು, ತಲೆ ಮತ್ತು ಕತ್ತು |
| ೮ ವಾರಗಳಲ್ಲಿ | ಮೇಲಿಂದ ಕೆಳಗೆ ಚಲಿಸುವ ವಸ್ತುವನ್ನು ನೋಟದಿಂದ ಹಿಂಬಾಲಿಸುವುದು. | ಎದೆಯನ್ನು ಎತ್ತುವುದು. | | ಮನುಷ್ಯರನ್ನು ಕಂಡು ಮುಗುಳ್ನಗೆ ನಗುವುದು. | |

| ಸರಾಸರಿ ವಯಸ್ಸು | ಕಣ್ಣಿನ ಅಲುಗಾಟ | ಚಲನ ಶಕ್ತಿ | ಕೈ ಕೆಲಸ | ಆಟ | ಒಳಪಟ್ಟ ಅಂಗ |
|---|---|---|---|---|---|
| ೧೦ ವಾರಗಳಲ್ಲಿ | ಚಕ್ರಾಕಾರದಲ್ಲಿ ಚಲಿಸುವ ವಸ್ತುಗಳನ್ನು ನೋಟದಿಂದ ಹಿಂಬಾಲಿಸುವುದು. | | | | ತೋಳು, ಸೊಂಟದ ಮೇಲ್ ಭಾಗ. |
| ೧೪ ವಾರಗಳು | | ತಾಯಿಯಿಂದ ಎತ್ತಿಸಿಕೊಳ್ಳಲು ಅನುವಾಗುವುದು. | ಆಟಿಗೆಯನ್ನು ಹಿಡಿಯಲು ಯತ್ನಿಸುವುದು. | | |
| ೧೫ ವಾರಗಳು | | | ಆಟಿಗೆಯನ್ನು ಹಿಡಿಯುವುದು. | ಕೈಗಳಿಂದ ಆಡುವುದು | |
| ೧೬ ವಾರಗಳು | | ತೊಡೆಯ ಮೇಲೆ ಸಹಾಯದಿಂದ ಕೂಡುವುದು. | | | |
| ೨೧ ವಾರಗಳು | | | ನೇತಾಡುವ ವಸ್ತುವನ್ನು ಹಿಡಿಯುವುದು. | ಆಟಿಗೆಯನ್ನು ಬಾಯಿಗೆ ಹಾಕಿಕೊಳ್ಳುವುದು. | ಕೈ ಮತ್ತು ಸೊಂಟದ ಕೆಳ ಭಾಗ. |
| ೨೫ ವಾರಗಳು | | ಕ್ಷಣಮಾತ್ರ ತಾನೇ ಕುಳಿತುಕೊಳ್ಳುವುದು. | ಕೈಯಿಂದ ಕೈಗೆ ಆಟಿಗೆಯನ್ನು ಬದಲಾಯಿಸುವುದು. | ಕಾಲುಬೆರಳುಗಳನ್ನು ಹಿಡಿದು ಆಡುವುದು | |
| ೨೪·೫ ವಾರಗಳು | | ಉರುಳುವುದು. | | ಆಟಿಗೆಯನ್ನು ತಟ್ಟುವುದು. | ಕೈ ಮತ್ತು ಸೊಂಟದ ಕೆಳ ಭಾಗ |
| ೩೦·೫ ವಾರಗಳು | | ಒಂದು ನಿಮಿಷಕಾಲ ಕೂಡುವುದು. | | ತಲೆದೂಗಿ ಆಡುವುದು (ದೂರಿ ಆಡುವುದು) | |

| ಸರಾಸರಿ ವಯಸ್ಸು | ಕಣ್ಣಿನ ಅಲುಗಾಟ | ಚಲನ ಶಕ್ತಿ | ಕೈ ಕೆಲಸ | ಆಟ | ಒಳಪಟ್ಟ ಅಂಗ |
|---|---|---|---|---|---|
| ೩೧·೫ ವಾಂಗಳು | | ತಾಯಿಯು ನಿಲ್ಲಿಸಿದರೆ ನಿಲ್ಲುವುದು. | | | |
| ೪೧ ವಾರಗಳು | | ಹಿಂದಕ್ಕೆ ಜಾರುವುದು | | "ಹಿಡಿಕೊಳ್ಳಿ" ಆಟ ಆಡುವುದು. | |
| ೪೨ ವಾರಗಳು | | ಕುರ್ಚಿ ಬೆಂಚುಗಳನ್ನು ಹಿಡಿದು ನಿಲ್ಲುವುದು. | ಬೆರಳಿನಿಂದ ತೋರಿಸುವುದು. | | |
| ೪೫ ವಾರಗಳು | | ಅಂಬೆಗಾಲಿಡುವುದು. | | | |
| ೪೬ ವಾರಗಳು | | ಕೈ ಹಿಡಿದು ನಡೆಯುವುದು. | | | ಸೊಂಟ ಕಾಲು, ಮತ್ತು ಬೆರಳುಗಳು. |
| ೪೭ ವಾರಗಳು | | ಕುರ್ಚಿಯನ್ನು ತಾನೇ ಹಿಡಿದು ನಿಲ್ಲುವುದು | ಸಾಧಾರಣ ಪೆಟ್ಟಿಗೆಗಳನ್ನು ತೆರೆಯುವುದು. | | |
| ೫೬_೬೨ ವಾರಗಳು | | | | ತೂತಿನಲ್ಲಿ ಬೆರಳಿಟ್ಟು ಆಡುವುದು. | |
| ೬೨ ವಾರಗಳು | | ಸ್ವತಂತ್ರವಾಗಿ ನಿಂತುಕೊಳ್ಳುವುದು. | | | |
| ೬೬ ವಾರಗಳು | | ಸ್ವತಂತ್ರವಾಗಿ ನಡೆಯುವುದು. | | ಓಡುವುದು, ಹತ್ತುವುದು. | |



ಚಿತ್ರ 17. ಅವಯವಗಳಮೇಲಿನ ಹತೋಟಿಯ ಬೆಳವಣಿಗೆ

ನಷ್ಟು ಆಧಾರ ಕೊಡಬೇಕಾದುದಿಲ್ಲ. ಅಂದರೆ ಮೂರು ತಿಂಗಳಿನೊಳಗಾಗಿ ಮಗು ಕಣ್ಣು, ತಲೆ ಮತ್ತು ಕತ್ತಿನ ಮಾಂಸಖಂಡಗಳ ಮೇಲೆ ಹತೋಟಿಯನ್ನು ಪಡೆದಿರುವುದು. ಇದನ್ನು ಹದಿನೇಳನೇ ಚಿತ್ರದಲ್ಲಿ ಸ್ಪಷ್ಟಪಡಿಸಲಾಗಿದೆ.

ಕ್ರಮೇಣ ಭುಜ, ಕೈ ಮತ್ತು ಸೊಂಟದ ಮೇಲ್ಭಾಗದ ಮಾಂಸಖಂಡಗಳ ಮೇಲೆ ಹತೋಟಿಯನ್ನು ಪಡೆಯುವುದು. ತಾಯಿಯು ಮಗುವನ್ನು ಎತ್ತಿಕೊಳ್ಳಲು ಹತ್ತಿರ ಬಂದರೆ ಮಗು ಭುಜಗಳನ್ನು ಅಲುಗಿಸಿ ತಾಯಿಯ ಹತ್ತಿರಕ್ಕೆ ಬರುವ ಚಲನೆಯನ್ನು ತೋರಿಸುವುದು. ವಸ್ತುಗಳನ್ನು ಕಂಡರೆ ಅವುಗಳನ್ನು ಹಿಡಿಯಲು ಕೈ ಚಾಚುವುದು. ಕೈಗೆ ಆಟಗೆಯನ್ನು ಕೊಟ್ಟರೆ ಹಿಡಿದುಕೊಂಡು ಕೈಗಳನ್ನು ಆಡಿಸುವುದು ನಾಲ್ಕು ತಿಂಗಳ ವಯಸ್ಸಿಗೆ ತಾಯಿಯ ತೊಡೆಯ ಮೇಲೆ ಕುಳಿತು ಎದುರಿಗಿರುವ ಆಟಗೆಯನ್ನು ಕೈಯಲ್ಲಿ ತೆಗೆದುಕೊಂಡು ಹಿಡಿದುಕೊಳ್ಳುವಷ್ಟು ಶಕ್ತಿಯನ್ನು ಪಡೆಯುವುದು

ಐದನೆಯ ತಿಂಗಳಿನಿಂದ ಸೊಂಟದ ಕೆಳಗಿನ ಮಾಂಸಖಂಡಗಳ ಮತ್ತು ಕಾಲಿನ ಮಾಂಸಖಂಡಗಳ ಮೇಲಿನ ಹತೋಟಿಯನ್ನು ಪಡೆಯಲು ಆರಂಭಿಸುವುದು. ಆರು ತಿಂಗಳಿಗೆ ಕಾಲುಗಳನ್ನು ಅಗಲಿಸಿ ನೆಲದ ಮೇಲೆ ತಾನೇ ಕುಳಿತುಕೊಳ್ಳುವುದು ಕೈಗಳನ್ನು ಮುಂದೆ ಚಾಚಿ ಕಾಲು ಬೆರಳುಗಳನ್ನು ಹಿಡಿಯುವುದು. ಬೋರಲಾಗಿ ಮಲಗಿಸಿದರೆ ಕಾಲುಗಳನ್ನು ಒದೆಯುತ್ತಾ ಮುಂದಕ್ಕೆ ಈಜಲು ಆರಂಭಿಸುವುದು. ಬೆನ್ನಿನ ಮೇಲೆ ಮಲಗಿಸಿದರೆ ಹಿಮ್ಮಡಿಯನ್ನು ಬಡಿದು ಕಾಲನ್ನು ಎತ್ತಿ ಬೆರಳುಗಳನ್ನು ಹಿಡಿಯಲೆತ್ನಿಸುವುದು. ಪಕ್ಕಕ್ಕೆ ಉರುಳುವುದಕ್ಕೂ ಪ್ರಯತ್ನಿಸುವುದು. ಏಳು ತಿಂಗಳ ವಯಸ್ಸಿಗೆ ಸ್ವಲ್ಪ ಹೊತ್ತು ಏನೂ ಆಧಾರವಿಲ್ಲದೆ ಸರಿಯಾಗಿ ಕುಳಿತುಕೊಳ್ಳುವುದು. ಇದುವರೆವಿಗೂ ಮಗುವನ್ನು ಎತ್ತಿ ನಿಲ್ಲಿಸಿದರೆ ಕಾಲುಗಳಲ್ಲಿ ಶಕ್ತಿಯಿಲ್ಲದೆ ಇರುವುದರಿಂದ 'ತಕತೈ' ಆಡುವುದು. ಆದರೆ ಏಳು ತಿಂಗಳಾದಮೇಲೆ ನಿಲ್ಲಿಸಿದರೆ, ಮೊಣಕಾಲನ್ನು ನೆಟ್ಟಗೆ ಮಾಡಿ ಭೂಮಿಯ ಮೇಲೆ ಪಾದಗಳನ್ನು ಊರುವುದು. ಈ ಸಮಯದಲ್ಲಿ

ಮಗು ದೇಕುವುದಕ್ಕೆ ಆರಂಭಿಸುವುದು. ಆದರೆ ತನ್ನ ಹೊಟ್ಟೆಯನ್ನು ಎತ್ತುವಷ್ಟು ಶಕ್ತಿಯಿರುವುದಿಲ್ಲ. ಮುಂದಕ್ಕೆ ಹೋಗುವುದರ ಬದಲು ಹಿಂದಕ್ಕೇ ಸರಿಯುವುದು. ಒಂಭತ್ತು ತಿಂಗಳ ವಯಸ್ಸಿಗೆ ಪೆಟ್ಟಿಗೆ ಅಥವಾ ಕುರ್ಚಿಯನ್ನು ಹಿಡಿದುಕೊಂಡು ಸ್ವಲ್ಪ ಹೊತ್ತು ನಿಲ್ಲುವ ಶಕ್ತಿಯನ್ನು ಪಡೆಯುವುದು ಇನ್ನೊಂದು ತಿಂಗಳಾದ ಮೇಲೆ ಅಂಬೆಗಾಲಿಟ್ಟು ಮನೆಯಲ್ಲೆಲ್ಲಾ ಓಡಾಡುವುದು. ಆಗ ಮಗು ಸ್ವಾತಂತ್ರ್ಯವನ್ನು ಪಡೆದು ಸ್ವೇಚ್ಛೆಯಾಗಿ ತನ್ನಷ್ಟಕ್ಕೆ ತಾನೆ ತಿರುಗುವುದು.

ಈ ವಯಸ್ಸಿನಲ್ಲಿ ತಾಯಿಯು ಮಗುವಿನ ಎರಡು ಕೈಗಳನ್ನೂ ಹಿಡಿದುಕೊಂಡರೆ ಮುಂದೆ ಹೆಜ್ಜೆ ಇಡುವುದಕ್ಕೆ ಆರಂಭಿಸುವುದು. ಹನ್ನೊಂದು ತಿಂಗಳ ವಯಸ್ಸಿನಲ್ಲಿ ಒಂದು ಕೈಯನ್ನು ಹಿಡಿದುಕೊಂಡರೆ ಸ್ವಲ್ಪ ದೂರ ನಡೆಯುವುದು. ಈ ಸಮಯದಲ್ಲಿ ಪೆಟ್ಟಿಗೆ ಕುರ್ಚಿ ಮಂಚ ಮೊದಲಾದ ಸಾಮಾನುಗಳನ್ನು ಹಿಡಿದು ತನ್ನಷ್ಟಕ್ಕೆ ತಾನೆ ಎದ್ದು ನಿಂತುಕೊಳ್ಳುವುದು. ಮಂಚದ ಮುಂಭಾಗವನ್ನು ಹಿಡಿದು ಅಂಚಿನಲ್ಲಿಯೇ ನಡೆಯುವುದು. ಗೋಡೆಯ ಮೇಲೆ ಕೈಯಿಟ್ಟು ನಡೆಯುವುದು. ಸೊಂಟದ ಬಲ ಹೆಚ್ಚಿರುವುದರಿಂದ ಮಂಚವನ್ನು ಹಿಡಿದು ನಿಂತಿರುವ ಮಗು ತಾನೇ ಕುಳಿತುಕೊಳ್ಳುವುದು. ಹದಿಮೂರು ತಿಂಗಳ ವಯಸ್ಸಿಗೆ ಮೆಟ್ಟಿಲನ್ನು ಹತ್ತುವುದು. ಇನ್ನು ಕೆಲವು ವಾರಗಳನಂತರ ತಾನೇ ನಿಂತುಕೊಂಡು ಕ್ರಮೇಣ ಯಾವ ಸಹಾಯವೂ ಇಲ್ಲದೆ ನಡೆಯುವ ಸಾಮರ್ಥ್ಯವನ್ನು ಪಡೆಯುವುದು.

ಮಗು ತನ್ನ ಅಂಗಾಂಗಗಳ ಮೇಲೆ ಪಡೆಯುವ ಹತೋಟಿಯ ಕ್ರಮವನ್ನು ಷರ್ಲಿಯು ಹಿಂದಿನ ಪಟ್ಟಿಯಲ್ಲಿ* ಕಾಣಿಸಿರುವಂತೆ ಸಂಗ್ರಹಿಸಿರುವರು.

## ಆಟ

ಮೊದಲಿನ ವರ್ಷದಲ್ಲಿ ಮಗುವಿನ ಆಟವು ತನ್ನ ಮಾಂಸಖಂಡ

---

* ೮ನೆಯ ಪಟ್ಟಿಯನ್ನು ನೋಡಿ.

ಗಳ ಮೇಲೆ ಪಡೆಯುವ ಹತೋಟಿಯನ್ನು ಅನುಸರಿಸುವುದು. ಕಣ್ಣಿನ ಮಾಂಸಖಂಡಗಳ ಮೇಲೆ ಹತೋಟಿಯನ್ನು ಪಡೆದನಂತರ ತಂದೆತಾಯಿಗಳನ್ನು ನೋಡಿ ಮುಗುಳ್ನಗೆ ನಗುವುದು. ನಾಲ್ಕೈದು ವಾರಗಳಲ್ಲಿ ತನ್ನ ಹತ್ತಿರಕ್ಕೆ ಯಾವುದಾದರೂ, ವಸ್ತುಗಳನ್ನು ತಂದರೆ ಅವನ್ನು ಬಾಯಲ್ಲಿ ಹಿಡಿಯಲು ಪ್ರಯತ್ನಿಸುವುದು. ಹತ್ತು ಹನ್ನೆರಡು ವಾರಗಳನಂತರ ವಸ್ತುಗಳನ್ನು ಕೈಯಲ್ಲಿ ಹಿಡಿಯಲು ಯತ್ನಿಸುವುದು. ವಸ್ತುವನ್ನು ಹಿಡಿಯುವುದಕ್ಕೆ ಒಂದು ಕೈಯನ್ನು ಚಾಚಿ ವಸ್ತುವು ಸಿಕ್ಕದೆ ಹೋದರೆ ತನ್ನ ಮತ್ತೊಂದು ಕೈಯನ್ನೇ ಹಿಡಿದು, ತೃಪ್ತಿಯಿಂದ ಆಡುವುದು. ಕಾಲು ಬೆರಳನ್ನು ಹಿಡಿದು ಆಡುವುದು. ಈ ರೀತಿ ಮಗುವಿನ ಆಟವು ಅದರ ಅಂಗಾಂಗಗಳ ಮೇಲಿನ ಹತೋಟಿಯ ಮಟ್ಟವನ್ನು ಅನುಸರಿಸಿರುವುದು.*

ಚಿತ್ರ ೧೮



I ೮ ವಾರಗಳು : ಮೇಲಿರುವ ಆಟಿಕೆಯನ್ನು ನೋಡುವುದಿಲ್ಲ.



II ೨೦ ವಾರಗಳು : ಆಟಿಕೆಯನ್ನು ನೋಡುವುದು.

---

* ಚಿತ್ರ ೧೮.



III ೪೪ ವಾರಗಳು : ಆಟಿಕೆಯನ್ನು ಕೈಯಿಂದ ಹಿಡಿಯುವುದು

ಚಿತ್ರ ೧೮

## ಬೆಳವಣಿಗೆಯ ಅನುಕ್ರಮ

ಮೇಲೆ ನಿರೂಪಿಸಿರುವ ವಿಷಯದಲ್ಲಿ ಎರಡು ಅಂಶಗಳಿಗೆ ಗಮನವನ್ನು ಕೊಡಬೇಕು. ಮೊದಲನೆಯದಾಗಿ, ಮಗುವಿನ ಬೆಳವಣಿಗೆಯಲ್ಲಿ ಇರುವ ಅನುಕ್ರಮವನ್ನು ಹೊರಪಡಿಸುವುದು. ಅವಯವಗಳ ಮೇಲಿನ ಹತೋಟಿಯು ಆಕಸ್ಮಿಕವಲ್ಲ. ಅದರಲ್ಲಿ ಒಂದು ಕ್ರಮವಿರುವುದು. ಮೇಲೆ ನೋಡಿದ ಹಾಗೆ ಭ್ರೂಣಾವಸ್ಥೆಯಲ್ಲಿ ಬೆಳೆವಣಿಗೆಯು ತಲೆಯಿಂದ ಹಿಡಿದು ಕಾಲಿನವರೆಗೆ ಕ್ರಮವಾಗಿ ಹೇಗೆ ನಡೆಯುವುದೋ ಅದೇ ರೀತಿ ಭ್ರೂಣದ ವರ್ತನೆಯೂ ಬೆಳೆಯುವುದು. ಈ ಅಧ್ಯಾಯದಲ್ಲಿ ಮಗುವಿನ ಅಂಗಾಂಗಗಳ ಮೇಲಿನ ಹತೋಟಿಯೂ ಇದೇ ನಿಯಮವನ್ನನುಸರಿಸಿರುವುದೆಂದು ನೋಡಿರುವೆವು. ತಲೆಯ ಅಂಗಗಳ ಮೇಲಿನ ಹತೋಟಿಯನ್ನು ಪಡೆದನಂತರ ಕತ್ತಿನ ಮಾಂಸಖಂಡಗಳ ಮೇಲೆ ಹತೋಟಿಯುಂಟಾಗುವುದು. ಆಮೇಲೆ ದೇಹದ ಮಧ್ಯಭಾಗ ಎಂದರೆ ಕತ್ತಿನಿಂದ ಸೊಂಟದವರೆಗಿನ ಮಾಂಸಖಂಡಗಳ ಮೇಲೆಯೂ ನಂತರ ಭುಜ ಮತ್ತು ಕೈಗಳ ಮಾಂಸಗಳಮೇಲೆಯೂ, ಕಡೆಯದಾಗಿ ಕಾಲು ಮತ್ತು ಬೆರಳುಗಳ ಮಾಂಸಖಂಡಗಳ ಮೇಲೆಯೂ ಹತೋಟಿ ಬರುವುದು. ಈ ಕ್ರಮವನ್ನು ಅನೇಕ ಮಕ್ಕಳಲ್ಲಿ ಬೇರೆ ಬೇರೆ ವೈಜ್ಞಾನಿಕರೂ ನೋಡಿರುವರು. ಪಟ್ಟಿಯಲ್ಲಿ* ಕಾಣಬರುವ

ಮತ್ತೊಂದು ಅಂಶವೇನೆಂದರೆ ಒಂದೊಂದು ಅವಯವದ ಮೇಲಿನ ಹತೋಟಿಯು ಒಂದು ನಿರ್ದಿಷ್ಟವಾದ ಕಾಲದಲ್ಲಿ ಉಂಟಾಗುವುದು. ಈ ಕಾಲದ ಪರಿಮಾಣವು ಅನೇಕ ಮಕ್ಕಳನ್ನು ಪರಿಶೀಲಿಸಿ ಕಂಡು ಹಿಡಿದಿರುವ ಸರಾಸರಿ. ಕೆಲವು ಮಕ್ಕಳು ಪ್ರತ್ಯೇಕ ಕೆಲಸಗಳನ್ನು ಇಲ್ಲಿ ಸೂಚಿಸಿರುವ ವಯಸ್ಸಿಗಿಂತ ಸ್ವಲ್ಪ ಮುಂಚೆಯೋ ಅಥವಾ ನಂತರವೋ ಮಾಡಬಹುದು. ಷರ್ಲಿಯು ಈ ಸರಾಸರಿಯ ವಯಸ್ಸಿಗೂ, ಪ್ರತ್ಯೇಕ ಮಕ್ಕಳು ಆಯಾ ಹತೋಟಿಗಳನ್ನು ಪಡೆಯುವ ವಯಸ್ಸಿಗೂ ಸಂಬಂಧನ (ಕಾರಿಲೇರ್ಷ್) ವನ್ನು ಕಂಡುಹಿಡಿದಿರುವಳು. ಈ ಸಂಬಂಧನವು ·೯೩ ರಿಂದ ·೯೮ ವರೆವಿಗೂ ಇರುವುದು. ಅಂದರೆ ಯಾವ ಮಗುವೇ ಆಗಲಿ ಅವರ ಬೆಳವಣಿಗೆಯ ಕ್ರಮವು ಮಕ್ಕಳ ಗುಂಪಿನಿಂದ ಕಂಡುಹಿಡಿದಿರುವ ಸರಾಸರಿಯನ್ನು ಅನುಸರಿಸುವುದು.

## ಅವಯುವಗಳ ಪಕ್ವತೆ ಮತ್ತು ಅವುಗಳ ಮೇಲಿನ ಹತೋಟಿ

ದೇಹದ ಚರ್ಯೆಗಳ ಮೇಲೆ ಮಗು ಹತೋಟಿಯನ್ನು ಪಡೆಯುವುದು ಅಭ್ಯಾಸದಿಂದುಂಟಾದುದೇ? ಅಥವಾ ಆಕಸ್ಮಿಕವೇ? ಎಂದು ಸಂದೇಹವುಂಟಾಗುವುದು. ಆದರೆ ಆಕಸ್ಮಿಕವಲ್ಲವೆಂಬುದಕ್ಕೆ ಮೇಲೆ ಕೊಟ್ಟಿರುವ ಬೆಳವಣಿಗೆಯ ಕ್ರಮದ ಪಟ್ಟಿಯೇ ಸ್ಪಷ್ಟವಾಗಿ ತೋರಿಸುವುದು. ಈ ಕ್ರಮವು ಎಲ್ಲಾ ಮಕ್ಕಳಲ್ಲಿಯೂ, ಅವರು ಯಾವುದೇ ವಾತಾವರಣದಲ್ಲಿ ಬೆಳೆದರೂ ಸರಿಯೆ, ಇರುವುದು. ಈ ಬೆಳವಣಿಗೆಯ ವೇಗವು ಸರಾಸರಿಗಿಂತ ಬೇಗ ಅಥವಾ ನಿಧಾನವಾಗಿ ಆಗಬಹುದು. ಯಾವ ವೇಗದಿಂದಲಾದರೂ, ಬೆಳವಣಿಗೆಯು ಮಾತ್ರ ಅದೇ ಕ್ರಮವನ್ನನುಸರಿಸಿ ನಡೆಯುವುದು. ಆದುದರಿಂದ ಈ ಬೆಳವಣಿಗೆಯು ಆಕಸ್ಮಿಕ ಕಾರಣಗಳಿಂದುಂಟಾದುದಲ್ಲ.

ಮಗು ತನ್ನ ದೇಹದ ಚರ್ಯೆಗಳ ಮೇಲಿನ ಹತೋಟಿಯು ಕಲಿಯುವುದರಿಂದ ಬಂದಿದೆಯೋ ಎಂಬುದನ್ನು ವಿಚಾರಮಾಡೋಣ. ತಾಯಿತಂದೆಗಳು ಕೊಟ್ಟ ಶಿಕ್ಷಣದಿಂದಾಗಲೀ, ಅಥವಾ ಮಗು ಸ್ವಪ್ರಯತ್ನದಿಂದಲಾಗಲೀ, ಈ ಹತೋಟಿಯನ್ನು ಪಡೆದಿರುವುದು

ಸುಳ್ಳೆಂದು, ಎಲ್ಲಾ ಮಕ್ಕಳಲ್ಲಿಯೂ ಒಂದೇ ನಿಯಮದಿಂದ ನಡೆಯುವ ಬೆಳವಣಿಗೆಯ ಕ್ರಮವು ತೋರಿಸಿಕೊಡುತ್ತದೆ.

ಅಂಗಗಳ ಮೇಲಿನ ಈ ಹತೋಟಿಯ ಬೆಳವಣಿಗೆಯ ಕ್ರಮವು ಮಗುವಿನ ದೇಹದ ಮಾಂಸಖಂಡಗಳನ್ನು ಪ್ರಚೋದಿಸುವ ನರಮಂಡಲದ ಪಕ್ವತೆಯನ್ನು ಅವಲಂಬಿಸಿರುವುದು ಎಂದು ಈಗ ಊಹಿಸಲಾಗಿದೆ. ನರಮಂಡಲವು, ಮಗು ಬೆಳೆಯುತ್ತ ಬೆಳೆಯುತ್ತ ಒಂದು ಪಕ್ವತೆಯನ್ನು ಪಡೆಯುವುದು. ಈ ಪಕ್ವತೆಯು ಕಾಲಧರ್ಮವನ್ನು ಅನುಸರಿಸುವುದು. ಆದುದರಿಂದ ಅಂಗಗಳ ಮೇಲಿನ ಹತೋಟಿಯು ಅದೇ ಕಾಲಧರ್ಮಕ್ಕೆ ಅಧೀನವಾಗಿರುವುದೇ ಹೊರತು, ಮತ್ಯಾವ ಶಿಕ್ಷಣಕ್ಕಾಗಲೀ, ಪ್ರಯತ್ನಕ್ಕಾಗಲೀ ಒಳಪಟ್ಟಿಲ್ಲ.

ಈ ವಿಷಯವನ್ನು ಗೆಸೆಲ್‌ನು ಅಮೆರಿಕಾ ದೇಶದಲ್ಲಿ ನಡೆಸಿದ ಒಂದು ಮಹಾಪ್ರಯೋಗದ ಫಲಿತಾಂಶದಿಂದ ದೃಢೀಕರಿಸಿರುವನು. ಈತನು ಮಗುವಿನ ದೈಹಿಕ ಬೆಳವಣಿಗೆಯ ಮೇಲೆ ಶಿಕ್ಷಣದ ಪ್ರಭಾವವು ಎಷ್ಟು ಪ್ರಮಾಣದಲ್ಲಿರುವುದೆಂದು ಕಂಡುಹಿಡಿಯಲು ಈ ಪ್ರಯೋಗವನ್ನು ನಡೆಸಿದನು. ಮೇಲಿನ ಅಧ್ಯಾಯದಲ್ಲಿ ನೋಡಿದ ಹಾಗೆ ಕೆಲವು ಸಮಯಗಳಲ್ಲಿ ಅನನ್ಯ ಅವಳಿ ಮಕ್ಕಳು ಹುಟ್ಟುವರು. ಈ ಮಕ್ಕಳಿಬ್ಬರ ದೇಹವೂ ಒಂದೇ ತತ್ತಿಯಿಂದ ಬೆಳೆದು ಒಂದೇ ಅನುವಂಶಿಕ ವಸ್ತುಗಳನ್ನು ಪಡೆಯುವುದು. ಆದುದರಿಂದ ಇವರ ಬೆಳವಣಿಗೆಯೂ ಒಂದೇ ಕಾಲದಲ್ಲಿ ಒಂದೇ ನಿಯಮವನ್ನನುಸರಿಸಿ ನಡೆಯುವುದಷ್ಟೆ. ಗೆಸೆಲ್‌ನು ಈ ಅವಳಿ ಮಕ್ಕಳನ್ನು ತೆಗೆದುಕೊಂಡು ಕೆಳಗೆ ವಿವರಿಸಿರುವಂತೆ ಪ್ರಯೋಗ ನಡೆಸಿದನು. ಒಂದು ಮಗುವಿಗೆ ನಲವತ್ತಾರನೆಯ ವಾರದ ವಯಸ್ಸಿನಿಂದ ಹಂತಹತ್ತಲು ತರಬೇತು ಕೊಟ್ಟನು. ಆರುವಾರಗಳ ಅಭ್ಯಾಸದನಂತರ ಈ ಮಗು ೨೬ ಕ್ಷಣಗಳಲ್ಲಿ ಹಂತವನ್ನು ಹತ್ತಿತು ಈ ಮಗುವಿನ ಅವಳಿ ಸಹೋದರಿಯು ೫೩ ವಾರಗಳ ವಯಸ್ಸಿಗೆ ಸರಿಯಾಗಿ ಯಾವ ತರಬೇತೂ ಇಲ್ಲದೆ ತನ್ನಷ್ಟಕ್ಕೆ ತಾನೆ ಅದೇ ಹಂತವನ್ನು ೪೫ ಕ್ಷಣಗಳಲ್ಲಿ ಹತ್ತಿದಳು. ಇನ್ನೆರಡು ವಾರಗಳು ಇಬ್ಬರೂ ಹಂತವನ್ನು ಹತ್ತಿ ಇಳಿಯುವ ಆಟವನ್ನಾಡುತ್ತಿ

ದ್ದರು. ಆಮೇಲೆ ಎರಡನೆಯ ಮಗು, ಪ್ರತ್ಯೇಕವಾದ ತರಬೇತು ಇಲ್ಲದಿದ್ದರೂ, ಆರು ವಾರಗಳ ತರಬೇತನ್ನು ಪಡೆದಿದ್ದ ಮಗುವಿಗಿಂತಲೂ ಬೇಗನೆ ಹಂತವನ್ನು ಹತ್ತಲಾರಂಭಿಸಿದಳು. ಬೆಳವಣಿಗೆಯ ಪಟ್ಟಿಯ ಪ್ರಕಾರ ಮಗು ಸರಾಸರಿ ೫೨ ವಾರಗಳಲ್ಲಿ ಹಂತಹತ್ತುವುದು. ಮೇಲಿನ ಪ್ರಯೋಗದಲ್ಲಿ ಎರಡನೆಯ ಮಗು, ಯಾವ ತರಬೇತೂ ಇಲ್ಲದೆ ಕಾಲಾನುಸಾರವಾಗಿ ೫೨ ವಾರಗಳ ವಯಸ್ಸಿಗೆ ಸರಿಯಾಗಿ ಹಂತ ಹತ್ತತೊಡಗಿತು. ಆದರೆ ಇನ್ನೊಂದು ಅವಳಿ ಮಗುವಿಗೆ ಪಕ್ವಕಾಲಕ್ಕೆ ಮುಂಚೆಯೆ ಪ್ರತ್ಯೇಕಶಿಕ್ಷಣವನ್ನು ಕೊಡಲಾಯಿತು. ಆದರೂ ಈ ಶಿಕ್ಷಣವು ವ್ಯರ್ಥವಾಯಿತು. ಕಾಲಕ್ಕೆ ಸರಿಯಾಗಿ ತನ್ನಷ್ಟಕ್ಕೆ ತಾನೆ ನರಮಂಡಲದ ಪಕ್ವತೆಯನ್ನನುಸರಿಸಿ ಮಾಂಸಖಂಡಗಳ ಮೇಲಿನ ಹತೋಟಿಯು ಮಗುವಿನಲ್ಲಿ ಉಂಟಾಗುವುದು. ಈ ಕ್ರಮಕ್ಕೆ ವಿರುದ್ಧ ವಾಗಿ ಮೊದಲೇ ತರಬೇತುಕೊಟ್ಟರೆ, ಮಗುವಿಗೆ ಸುಮ್ಮನೆ ಪ್ರಯಾಸ ಕೊಟ್ಟಂತಾಗುವುದು. ಅದರಿಂದ ಲಾಭವೇನೂ ಇಲ್ಲ ಉದಾಹರಣೆ ಯಿಂದ ಈ ಹೇಳಿಕೆಯನ್ನು ಇನ್ನೂ ಸ್ಪಷ್ಟಪಡಿಸಬಹುದು. ಕೆಲವು ತಾಯಿ ತಂದೆಗಳು ತಮ್ಮ ಮಗು ಬೇಗ ಓದುಬರೆಹ ಕಲಿಯಬೇಕೆಂಬ ಆಸೆಯಿಂದ ಮಗುವಿಗೆ ನಾಲ್ಕುವರ್ಷ ತುಂಬಿದೊಡನೆಯೇ ಅಕ್ಷರಾಭ್ಯಾ ಸವನ್ನು ಪ್ರಾರಂಭಿಸುವರು. ನಮಗೀಗ ಗೊತ್ತಿರುವ ಅಂಶಗಳ ಪ್ರಕಾರ ಒಂದು ಮಗು ಓದುಬರೆಹ ಕಲಿಯಲು ಸುಮಾರು ಐದೂವರೆ ವರ್ಷ ವಯಸ್ಸಾದರೂ ಕಳೆದಿರಬೇಕು. ಕಾಲಕ್ಕೆ ಸರಿಯಾಗಿ ಶಿಕ್ಷಣವನ್ನು ಪ್ರಾರಂಭಿಸಿದರೆ ಈ ಎರಡನೆಯ ಮಗು ಒಂದು ವರ್ಷದನಂತರ, ಮೊದಲಿನ ಮಗು ಎರಡೂವರೆ ವರ್ಷದ ನಂತರ ಎಷ್ಟು ಕಲಿತಿರು ವುದೋ ಅಷ್ಟನ್ನೂ ಲೀಲಾಜಾಲವಾಗಿ ಕಲಿತುಬಿಡಬಹುದು.

ಗೆಸೆಲ್‌ನ ಈ ಪ್ರಯೋಗವು ದೇಹಚರ್ಯೆಯ ಹತೋಟಿಯ ಬೆಳವ ಣಿಗೆಯು ನರ ಮಂಡಲದ ಪಕ್ವತೆಯನ್ನು ಅನುಸರಿಸಿ ಉಂಟಾಗುವು ದೆಂದು ನಿರ್ದಿಷ್ಟ ಮಾಡಿದೆ.

### ಸಂಚರಣೆಯ ಬೆಳವಣಿಗೆ

ಮಗುವಿನ ಬೆಳವಣಿಗೆಯ ಕಾಲದಲ್ಲಿ ಅದರ ಸಂಚಾರವು ಮೂರು

ವಿಧವಾಗಿರುವುದೆಂದು ಕಂಡು ಬಂದಿದೆ. ೩೮-೪೦ ವಾರಗಳ ವಯಸ್ಸಿಗೆ ಮಗು ಈಜಿಕೊಂಡು ಮುಂದೆ ಹೋಗಲು ಪ್ರಯತ್ನಿಸುವುದು. ೪೫ ವಾರಗಳಿಗೆ ಅಂಬೆಗಾಲಿಡುವುದು. ೬೬ ವಾರಗಳಲ್ಲಿ ನಡೆಯುವುದು.

ಮಗು ತೆವಳುವುದರಲ್ಲಿ ಅನೇಕ ವಿಧಗಳುಂಟು. ಸಾಧಾರಣ ವಾಗಿ ಮಗು ಬೋರಲಾಗಿ ಮಲಗಿ ತಲೆ ಭುಜಗಳನ್ನು ಎತ್ತಿಕೊಂಡು ಹೊಟ್ಟೆಯ ಮೇಲೆ ಈಜಿ ಮುಂದೆ ಹೋಗುವುದು ಕೆಲವು ಸಮಯಗಳಲ್ಲಿ ಒಂದು ಕಾಲನ್ನು ಮಾತ್ರ ಉಪಯೋಗಿಸಿ ಮತ್ತೊಂದು ಕಾಲನ್ನು ಎಳೆದುಕೊಂಡು ಮುಂದೆ ಈಜಿ ಹೋಗುವುದು. ಇನ್ನು ಕೆಲವು ಮಕ್ಕಳು ಕುಳಿತುಕೊಂಡು ಒಂದು ಕಾಲನ್ನು ಮುಂದಕ್ಕೆ ಚಾಚಿ ಮತ್ತೊಂದು ಕಾಲನ್ನು ಮಡಿಸಿಕೊಂಡು ಚಾಚಿರುವ ಕಾಲುಕೈಗಳನ್ನು ಉಪಯೋಗಿಸಿ ಮುಂದೆ ಹೋಗುವರು

ಅಂಬೆಗಾಲಿಟ್ಟು ಸಂಚರಿಸುವಾಗ ಮಗು ಹೊಟ್ಟೆ ಎದೆಗಳನ್ನು ಮೇಲಕ್ಕೆತ್ತಿ ಕೈಕಾಲುಗಳನ್ನುಪಯೋಗಿಸಿ, ಸಂಚರಿಸುವುದು. ನಡೆಯುವುದರಲ್ಲಿ ಮೂರು ನಾಲ್ಕು ಅಂತಸ್ತುಗಳುಂಟು. ದೇಹವನ್ನು ಯಾರಾ ವರೂ ಹಿಡಿದುಕೊಂಡಾಗ ಕಾಲನ್ನು ಮುಂದಿಡುವುದು. ಎರಡು ಕೈಗಳನ್ನು ಹಿಡಿದುಕೊಂಡರೆ ಅದರ ಸಹಾಯದಿಂದ ನಡೆಯುವುದು. ಗೋಡೆ ಅಥವಾ ಮಂಚದ ಅಂಚನ್ನು ಹಿಡಿದು ನಡೆಯುವುದು ಸ್ವತಃ ಯಾವ ಆಸರೆಯೂ ಇಲ್ಲದೆ ನಡೆಯುವುದು. ಕಡೆಯದಾಗಿ ಓಡುವುದು. ನೆಗೆಯುವುದು. ಮಗು ಬೆಳೆಬೆಳೆಯುತ್ತ ನಡೆಯುವುದರಲ್ಲಿ ನಾನಾ ಮುಖದ ಕುಶಲತೆಯನ್ನು ತೋರಿಸುವುದು. ಕ್ರಮೇಣ, ಒಂದು ಕಡೆ ನಡೆಯುವ ವೇಗವನ್ನೂ, ಮತ್ತೊಂದು ಕಡೆ ಹೆಜ್ಜೆಯ ಉದ್ದವನ್ನೂ ಹೆಚ್ಚಿಸಿಕೊಳ್ಳುವುದು. ಮೊದಮೊದಲು ಅಡ್ಡಾದಿಡ್ಡಾಗಿ ನಡೆಯುತ್ತಿದ್ದು ನಂತರ ಎರಡು ಕಾಲುಗಳಿಗೂ ನಡುವೆ ಇದ್ದ ಅಂತರವನ್ನು ಕಡಿಮೆಮಾಡಿಕೊಂಡು ಸರಿಯಾಗಿ ನಡೆಯುವುದು. ಆಮೇಲೆ ಪಾದಗಳನ್ನು ಒಂದು ಕಡೆಗೆ ತಿರುಗಿಸದೆ ನೇರವಾಗಿ ಮುಂಭಾಗಕ್ಕಿಟ್ಟು ನಡೆಯುವುದು.

ಮಗು ಬಹಳ ಕಾಲ ಖಾಯಿಲೆಯಿಂದ ಮಲಗಿದ್ದರೆ ನಡೆಯುವು

ದನ್ನು ನಿಧಾನವಾಗಿ ಪ್ರಾರಂಭಿಸುವುದು. ಪುಷ್ಟಿಕರವಾದ ಆಹಾರ ವನ್ನು ಪಡೆಯದ ಮಕ್ಕಳು ಕುಟಿಲವಾತ (ರಿಕೆಟ್ಸ್) ದಿಂದ ಕೈಕಾಲು ಗಳಲ್ಲಿ ಬಲವಿಲ್ಲದೆ, ನಡೆಯುವುದರಲ್ಲಿ ನಿಧಾನ ಮಾಡುವರು. ಕೆಲವು ಸಮಯಗಳಲ್ಲಿ ಓಡಾಡಲು ಅನುಕೂಲ, ಅವಕಾಶ ಪ್ರೋತ್ಸಾಹಗಳಿಲ್ಲದೆ ನಡೆಯುವುದರಲ್ಲಿ ಮಕ್ಕಳು ಹಿಂದುಳಿಯಬಹುದು. • ಹತ್ತು ತಿಂಗಳಿ ನಿಂದ ಒಂದೂವರೆ ಎರಡುವರ್ಷಗಳವರೆವಿಗೂ, ಮಗು ಚೆನ್ನಾಗಿ ಓಡಾಡಲು ಅವಕಾಶವನ್ನು ಕಲ್ಪಿಸಿ ಆದಷ್ಟುಮಟ್ಟಿಗೆ ಪ್ರೋತ್ಸಾಹವನ್ನು ಕೊಡಬೇಕು.

## ಹತ್ತುವ ಅಭ್ಯಾಸ

ಮಕ್ಕಳು ನಡೆಯುವುದಕ್ಕಿಂತ ಮುಂಚೆ ಹಂತ ಮುಂತಾದುವನ್ನು ಹತ್ತಿ ಇಳಿಯುವರು. ಈ ಸಮಯದಲ್ಲಿ ಮಕ್ಕಳು ಬಿದ್ದು ಎಲ್ಲಿ ಹಾನಿ ಹೊಂದುವರೋ ಎಂದು ತಾಯಿ ತಂದೆಗಳು ಆತಂಕವನ್ನುಂಟುಮಾಡು ವರು. ಆದರೆ ಮಗು ಈ ಕೆಲಸವನ್ನು ತನ್ನ ಬೆಳವಣಿಗೆಯ ಕ್ರಮವ ನ್ನನುಸರಿಸಿ ಮಾಡುವುದು. ಬೀಳದಿರುವಹಾಗೆ ನೋಡಿಕೊಳ್ಳಬೇಕೇ ಹೊರತು ಹತ್ತಿ ಇಳಿಯುವುದನ್ನು ತಡೆಗಟ್ಟಬಾರದು. ಒಬ್ಬನೇ ನಡೆಯು ವುದನ್ನು ಕಲಿತ ಮೇಲೆ ಗೋಡೆಯನ್ನು ಹಿಡಿದು ಮಹಡಿಗೆ ಹೋಗು ವನು. ಸಾಧಾರಣವಾಗಿ ಯಾವ ಹೆದರಿಕೆಯೂ ಇಲ್ಲದೆ ವಯಸ್ಕರು ಹಂತವನ್ನು ಹತ್ತಿ ಇಳಿಯುವಂತೆ ೩–೪ ವರ್ಷ ವಯಸ್ಸಿನೊಳಗಾಗಿ ಮಗು ಹತ್ತಿ ಇಳಿಯುವುದು. ೪–೫ ವರ್ಷ ವಯಸ್ಸಿನೊಳಗೆ ಗಿಡಮರ ಗಳನ್ನು ಸಹ ಹತ್ತುವುದನ್ನು ಕಲಿಯುವುದು. ಹಳ್ಳಿಯ ಹುಡುಗರಿಗೆ ಮರ ಹತ್ತಲು ಬೇಕಾದ ಅವಕಾಶವಿರುವುದರಿಂದ ಅವರು ೫–೬ ವರ್ಷ ವಯಸ್ಸಿನೊಳಗೆ ಮರ ಹತ್ತುವುದರಲ್ಲಿ ಚೆನ್ನಾಗಿ ನುರಿತು ಹೋಗಿರು ವರು. ಆದರೆ ಪಟ್ಟಣದ ಮಕ್ಕಳು, ಒಂದು ಕಡೆ ಅವಕಾಶವಿಲ್ಲದೆಯೂ, ಮತ್ತೊಂದುಕಡೆ ಪ್ರೋತ್ಸಾಹವಿಲ್ಲದೆಯೂ, ದೊಡ್ಡವರಾದರೂ ಮರ ಹತ್ತಲಾರರು. ಅತ್ತ ಕುಶಲತೆಯೂ ಇಲ್ಲ; ಇತ್ತ ಧೈರ್ಯವೂ ಇಲ್ಲ. ಆದರೆ ಮರ ಹತ್ತುವುದು ಬಹಳ ಮುಖ್ಯವಾದ ದೇಹ ಚರ್ಯೆ. ಇದರಿಂದ ಕೈಕಾಲುಗಳನ್ನು ಜೊತೆ ಗೂಡಿಸಿ ಚಲನೆ ಮಾಡುವುದೊಂದೇ ಅಲ್ಲದೆ,

ದೇಹವನ್ನು ಸಮತೋಲನದಲ್ಲಿಡುವ ಕುಶಲತೆಯೂ ಬರುವುದು. ಓದು ಬರಹಗಳನ್ನು ಕಲಿಯುವುದು ಎಷ್ಟು ಆವಶ್ಯಕವೋ ಮರ ಹತ್ತಿ ಇಳಿಯುವ ವಿದ್ಯೆಯೂ ಅಷ್ಟೇ ಆವಶ್ಯಕವೆಂದು ಪಟ್ಟಣಿಗರೂ, ವಿದ್ಯಾಭ್ಯಾಸದ ಇಲಾಖೆಯವರೂ ಗಮನದಲ್ಲಿಡಬೇಕು.

## ನೆಗೆಯುವುದು

ಎರಡು ವರ್ಷದ ಮಕ್ಕಳು ಸ್ವಲ್ಪ ಎತ್ತರದಿಂದ ಹಾರುವರು. ಆದರೆ ಚೆನ್ನಾಗಿ ಹಾರಲು ನಾಲ್ಕು ವರ್ಷ ವಯಸ್ಸಾದರೂ ಬೇಕು. ಐದಾರು ವರ್ಷಗಳೊಳಗೆ ನೆಗೆಯುವುದು, ಕುಪ್ಪಳಿಸುವುದು, ಹಾರುವುದು ಇವುಗಳೆಲ್ಲವನ್ನೂ ಮಾಡಲು ಶಕ್ತರಾಗುವರು. ಇದಕ್ಕೆಲ್ಲಾ ಶಿಶುವಿಹಾರಗಳಲ್ಲಿ ಅನುಕೂಲಗಳನ್ನೇರ್ಪಡಿಸಿರುವರು.

## ಮುಷ್ಟಿ ಹಿಡಿತ



ಚಿತ್ರ ೧೯ ಮುಷ್ಟಿಯ ಹಿಡಿತ (ರಿಫ್ಲೆಕ್ಸ್)

ವಾರ್ಟ್ಸ್, ಹೆಲ್ವರ್ಸ್ ಮುಂತಾದವರು ಮುಷ್ಟಿಯ ಹಿಡಿತವು ಯಾವ ವಿಧದಲ್ಲಿ ಬೆಳವಣಿಗೆಯನ್ನು ಹೊಂದುವುದೆಂದು ಜಾಗರೂಕತೆಯಿಂದ ಪರಿಶೀಲಿಸಿರುವರು. ಚಲನ ಚಿತ್ರಗಳನ್ನೂ ತೆಗೆದು ಬೆಳೆವಣಿಗೆಯ ಕ್ರಮ ವನ್ನು ಕಂಡುಹಿಡಿದಿರುವರು. ಈ ಶೋಧನೆಗಳಿಂದ ಕಂಡುಬಂದ ವಿಷಯಗಳ ಸಾರಾಂಶವನ್ನು ಇಲ್ಲಿ ಕೊಡಲಾಗಿದೆ.

ಹುಟ್ಟಿದಾಗ ಮಗುವಿಗೆ ಮುಷ್ಟಿ ಹಿಡಿಯುವ ರಿಫ್ಲೆಕ್ಸ್ ಪ್ರತಿಕ್ರಿ ಯೆಯು ಇರುವುದೆಂದು ನೋಡಲಾಗಿದೆ. ಹುಟ್ಟಿದ ಮಗುವಿನ ಕೈಯಲ್ಲಿ ಒಂದು ಬೆತ್ತವನ್ನು ಕೊಟ್ಟರೆ ಅದನ್ನು ಬಿಗಿಯಾಗಿ ಹಿಡಿದುಕೊಳ್ಳುವುದು. ಆ ಬೆತ್ತವನ್ನು ಮೇಲಕ್ಕೆತ್ತಿದರೆ ಮಗುವೂ ಬೆತ್ತದ ಜೊತೆಯಲ್ಲಿ ಮೇಲಕ್ಕೆ ಬರುವಷ್ಟು ಬಿಗಿಯಾಗಿರುವುದು. ಆಗತಾನೆ ಹುಟ್ಟಿದಮಗುವಿನ ಮುಷ್ಟಿ ಹಿಡಿತ ಈ ಪ್ರತಿಕ್ರಿಯೆಯು ಸ್ವಲ್ಪ ಕಾಲದನಂತರ ಅಳಿದು ಹೋಗು ವುದು ಆದರೆ ಈ ರಿಫ್ಲೆಕ್ಸ್ ಪ್ರತಿಕ್ರಿಯೆಯು ಮುಂದೆ ಮಗುವಿನ ಮುಷ್ಟಿ ಹಿಡಿತಕ್ಕೆ ಕಾರಣವಾಗಬಹುದೆಂದು ಊಹಿಸಲಾಗಿದೆ.

ಮಗು ತನ್ನ ಕೈ ಬೆರಳುಗಳನ್ನು ಬಾಯೊಳಗೆ ತೆಗೆದುಕೊಂಡು ಹೋಗುವ ಪ್ರಯತ್ನದಲ್ಲಿ ಕೈಗಳ ಚಲನೆಯ ಮೇಲೆ ಹತೋಟಿಯನ್ನು ಪಡೆಯುವುದು. ಈ ವರ್ತನೆಯು ಎರಡನೆಯ ತಿಂಗಳಿನಲ್ಲಿಯೇ ಪ್ರಾರಂಭ ವಾಗುವುದು. ಕೆಲವು ಮಕ್ಕಳು ಆರು ವಾರಗಳ ವಯಸ್ಸಿನಲ್ಲಿಯೇ ಕೈಯ ಲ್ಲಿರುವ ಆಟಿಗೆಯನ್ನು ಬಾಯೊಳಗೆ ತೆಗೆದುಕೊಳ್ಳುವುವು.

ಒಂದು ವಸ್ತುವನ್ನು ಸರಿಯಾಗಿ ಕೈಯಲ್ಲಿ ಹಿಡಿದುಕೊಳ್ಳಬೇಕಾ ದರೆ ಮೂರು ಕ್ರಿಯೆಗಳು ನಡೆಯಬೇಕು. ವಸ್ತುವನ್ನು ಕಣ್ಣಿನಿಂದ ನೋಡಬೇಕು ; ವಸ್ತುವಿನ ಕಡೆಗೆ ಕೈನೀಡಬೇಕು, ನಂತರ ಅದನ್ನು ಮುಷ್ಟಿಯಿಂದ ಹಿಡಿಯಬೇಕು ಎರಡನೆಯ ತಿಂಗಳಲ್ಲಿ ಮಗು ಕೈಯನ್ನು ಗುರಿಯಿಟ್ಟು ಚಲಿಸುವುದೆಂದು ಮೇಲೆ ಹೇಳಲಾಗಿದೆ. ಈಗ ಇನ್ನುಳಿದ ಎರಡು ಕಾರ್ಯಗಳ ಬೆಳೆವಣಿಗೆಯ ಕ್ರಮವನ್ನು ನೋಡೋಣ.

ಹುಟ್ಟಿದ ಎರಡನೆಯ ವಾರದ ಕಡೆಯಲ್ಲಿ ಮಗು ಸ್ಥಿರವಾಗಿ ರುವ ವಸ್ತುಗಳನ್ನು ಕಣ್ಣಿಟ್ಟು ನೋಡುವುದು ಆದರೆ ಕೈಯಲ್ಲಿ ಹಿಡಿ ದಿರುವ ವಸ್ತುವನ್ನೋ, ಅಥವಾ ವಸ್ತುವನ್ನು ಹಿಡಿದಿರುವ ಕೈಯನ್ನೋ

ಗುರಿಯಿಟ್ಟು ನೋಡುವುದು, ಸಾಧಾರಣವಾಗಿ ನಾಲ್ಕನೆಯ ತಿಂಗಳ ವಯಸ್ಸಿನಲ್ಲಿ ನಡೆಯುವ ಕಾರ್ಯ.

ಮಗು ತಾನು ನೋಡಿದ ವಸ್ತುವನ್ನು ಹಿಡಿಯುವ ಪ್ರಯತ್ನ ದಲ್ಲಿ ಒಂದು ಕ್ರಮವನ್ನು ಅನುಸರಿಸುವುದು. ಈ ಕ್ರಮವನ್ನು ಚಲನ ಚಿತ್ರದ ಮೂಲಕ ಹ್ಯಾಲ್ವರ್ಸ್ೞ ಎಂಬಾತನು ವಿಶ್ಲೇಷಣ ಮಾಡಿರುವನು. ಈ ಕೆಳಗೆ ಕೊಟ್ಟಿರುವ ಚಿತ್ರಗಳು ಈ ಕ್ರಮವನ್ನು ತೋರಿಸುವುವು. ೧೬



16ವಾರಗಳು



೨೦ ವಾರಗಳು



28ವಾರಗಳು



36ವಾರಗಳು



52ವಾರಗಳು

ಚಿತ್ರ ೨೦ ಮುಷ್ಟಿಯಹಿಡಿತದ ಬೆಳವಣಿಗೆ

ವಾರಗಳ ವಯಸ್ಸಿನಲ್ಲಿ ಮುಂದಿಟ್ಟಿರುವ ಘನಾಕಾರದ ಮರದ ತುಂಡೊಂ ದನ್ನು ಮಗು ದೃಷ್ಟಿಸಿ ನೋಡುವುದು. ಅದರ ಕಡೆ ಕೈ ಚಾಚುವುದು. ೨೦ ವಾರಗಳ ವಯಸ್ಸಿನಲ್ಲಿ ಅಂಗೈ ಮತ್ತು ಬೆರಳುಗಳನ್ನು ಅದರಮೇಲೆ ಹಾಕಿ ಹಿಡಿಯುವುದು. ೨೮ ವಾರಗಳ ವಯಸ್ಸಿನಲ್ಲಿ ಅಂಗೈ ಮತ್ತು ಬೆರಳುಗಳಿಂದ ಹಿಡಿದು ಎತ್ತುವುದು. ೩೬ ವಾರಗಳಲ್ಲಿ ಹೆಬ್ಬೆರಳು ಮತ್ತು ಇತರ ಬೆರಳುಗಳ ಮಧ್ಯೆ ಮರದ ತುಂಡನ್ನು ಹಿಡಿಯುವುದು. ೫೨ ವಾರಗಳ ವಯಸ್ಸಿಗೆ ಹೆಬ್ಬೆರಳು ಮತ್ತು ಮೊದಲನೆಯ ಬೆರಳು ಗಳನ್ನು ಮಾತ್ರವೇ ಉಪಯೋಗಿಸಿ ವಸ್ತುಗಳನ್ನು ಹಿಡಿಯುವುದು. ಮಗು ವಿಗೆ ಒಂದುವರ್ಷ ವಯಸ್ಸಾದಾಗ ಬಳಪವನ್ನಾಗಲೀ, ಸೀಸದಕಡ್ಡಿ ಯನ್ನಾಗಲಿ ಕೊಟ್ಟರೆ ತನ್ನ ಎರಡು ಬೆರಳುಗಳಲ್ಲಿ ಹಿಡಿದು ಆಡುವುದು.

## ಎರಡು ಕೈಗಳ ಸಹಕಾರ್ಯ

ಎರಡು ಕೈಗಳನ್ನೂ ಉಪಯೋಗಿಸಿ ಒಂದು ಕೆಲಸವನ್ನು ಸುಗಮವಾಗಿ ಮಾಡುವುದರ ಬೆಳೆವಣಿಗೆಯನ್ನು ಒಂದು ಪ್ರಯೋಗದಿಂದ ಬಾಲ್ಡ್ವಿನ್ ಮತ್ತು ಸ್ಟೆಚರ್ ಎಂಬುವರು ಪರೀಕ್ಷಿಸಿರುವರು. ಈ ಪ್ರಯೋಗದಲ್ಲಿ ಮಗು ಗುಂಡಿಯನ್ನು ಯಾವವಯಸ್ಸಿನಲ್ಲಿ ಎಷ್ಟು ಚತುರತೆಯಿಂದ ಹಾಕುವುದೆಂಬುದನ್ನು ನೋಡಲಾಯಿತು. ೧೮ ತಿಂಗಳ ವಯಸ್ಸಿನ ಮಕ್ಕಳು ಒಬ್ಬರಾದರೂ ಈ ಕೆಲಸವನ್ನು ಮಾಡಲಿಲ್ಲ. ಎರಡು ವರ್ಷ ವಯಸ್ಸಿನ ಮಕ್ಕಳಲ್ಲಿ ಶೇಕಡ ೧೦ರಷ್ಟು ಮಾತ್ರ ಮಾಡಿದರು; ಆದರೆ ೩೦ ತಿಂಗಳ ವಯಸ್ಸಿನ ಮಕ್ಕಳಲ್ಲಿ ಶೇಕಡ ೮೦ ಮಂದಿ ಮಾಡಿದರು. ಮಾಂಟಿಸೋರಿಯವರ ಗುಂಡಿಯ ಚೌಕಟ್ಟನ್ನು ಮಕ್ಕಳು ಎಷ್ಟು ಕುಶಲತೆಯಿಂದ ಮಾಡುವರೆಂದು ಈ ಕೆಳಗೆ ಕೊಟ್ಟಿರುವ ನಕ್ಷೆಯಿಂದ ವಿಶದವಾಗುವುದು ಮೂರುವರ್ಷ ವಯಸ್ಸಿನ




ಚಿತ್ರ ೨೧ ಗುಂಡಿಹಾಕುವುದರಲ್ಲಿ ಬೆಳವಣಿಗೆ

ಮಕ್ಕಳು ಸುಮಾರು ೩೦ ನಂಬರು ಬರುವಷ್ಟು ಚತುರತೆಯಿಂದ ಮಾಡಿದರು. ನಾಲ್ಕು ವರ್ಷಗಳ ವಯಸ್ಸಿನ ಮಕ್ಕಳು ೩೫ ನಂಬರನ್ನು ತೆಗೆದರು. ಐದುವರ್ಷದವರು ೫೦ ಸಂಬರನ್ನೂ ಆರುವರ್ಷದವರು ೭೦ ನಂಬರನ್ನೂ ತೆಗೆದರು. ಹೀಗೆ ವಯಸ್ಸು ಹೆಚ್ಚಿದಂತೆಲ್ಲಾ ಎರಡು ಕೈಗಳ ಸಹಕಾರದಿಂದ ಕೆಲಸ ಮಾಡುವುದರಲ್ಲಿ ಹೆಚ್ಚು ಹೆಚ್ಚಾದ ಚತುರತೆಯನ್ನು ಮಕ್ಕಳು ಪಡೆಯುವರು.

ನೇರವಾಗಿ ತಪ್ಪಿಲ್ಲದೆ ಗೆರೆ ಎಳೆಯುವ ಕೆಲಸವನ್ನು ಮಕ್ಕಳು ಬೆಳೆಯುತ್ತ ಬೆಳೆಯುತ್ತ ಹೇಗೆ ಮಾಡುವರೆಂದು ವೆಲ್ಮನ್ ಎಂಬುವರು ಪರಿ




ಚಿತ್ರ ೨೨ ಬಲಗೈ ಎಡಗೈಗಳ ಚತುರತೆಯ ಬೆಳವಣಿಗೆ

ಶೀಲಿಸಿದರು. ಒಂದು ಹಲಗೆಯ ಮೇಲೆ ಸ್ವಲ್ಪ ಜಾಗವನ್ನು ಬಿಟ್ಟು ಎರಡು ಲೋಹದ ಪಟ್ಟಿಗಳನ್ನಿಟ್ಟು ಮಧ್ಯದ ಜಾಗದಲ್ಲಿ ಒಂದು ಕಡ್ಡಿಯನ್ನು ಲೋಹಗಳಿಗೆ ತಾಕದೆ ಎಷ್ಟುದೂರ ಎಳೆಯುವರೆಂದು ಪರೀಕ್ಷಿಸಿದರು. ಇದರ ಪರಿಣಾಮವಾಗಿ, ಬಲಗೈಯ ಚತುರತೆಗೂ, ಎಡಗೈಯ ಚತುರತೆಗೂ ಸಣ್ಣ ವಯಸ್ಸಿನಲ್ಲಿಯೇ ಬಹಳ ಅಂತರವಿರುವುದೆಂದು ಕಂಡುಬಂದಿತು. ಮೂರು ವರ್ಷಗಳ ವಯಸ್ಸಿನಲ್ಲಿ ಬಲಗೈಯಲ್ಲಿ ಕೆಲಸ ಮಾಡಿದಾಗ ೫.೫ ನಂಬರೂ, ಎಡಗೈಯಲ್ಲಿ ೪.೫ ನಂಬರೂ ಬಂದುವು. ನಾಲ್ಕನೆಯ ವರ್ಷದ ವಯಸ್ಸಿನಲ್ಲಿ ಬಲಗೈಯಲ್ಲಿ ೭.೫ ನಂಬರೂ, ಎಡಗೈಯಲ್ಲಿ ೫.೦ ನಂಬರೂ, ಐದನೇ ವರ್ಷದಲ್ಲಿ ಬಲಗೈಯಲ್ಲಿ ೧೦ ನಂಬರೂ, ಎಡಗೈಯಲ್ಲಿ ೫.೫ ನಂಬರೂ ಬಂದವು. ಐದನೆಯ ವರ್ಷಕ್ಕೂ ಆರನೆಯ ವರ್ಷಕ್ಕೂ ಅಷ್ಟೇನೂ ವ್ಯತ್ಯಾಸವು ಕಂಡುಬರಲಿಲ್ಲ. ಈ ಚತುರತೆಯನ್ನು ಮಗು ಐದು ವರ್ಷಗಳೊಳಗಾಗಿ ತಕ್ಕ ಮಟ್ಟಿಗೆ ಪಡೆಯುವುದೆಂದು ಮೇಲಿನನಕ್ಷೆಯಿಂದ ಸ್ಪಷ್ಟವಾಗುವುದು.

ಮೇಲಿನ ವಿವರಣೆಗಳಿಂದ ಮಕ್ಕಳು ತಮ್ಮ ಅವಯವಗಳ ಚಲನಗಳ ಮೇಲೆ ಹತೋಟಿಯನ್ನು ಒಂದು ಕ್ರಮದಿಂದ ಪಡೆಯುವರೆಂದು ವಿಶದವಾಗುವುದು. ಈ ಕ್ರಮವು ಕಾಲಾನುಗುಣವಾಗಿ ನರಮಂಡಲದ ಪಕ್ವತೆಗೆ ಅಧೀನವಾಗಿ, ವಯಸ್ಸಿಗೆ ತಕ್ಕಂತೆ ಇರುವುದು.

---

# ಅಧ್ಯಾಯ ೭

## ಭಾವೋದ್ರೇಕಗಳ ಬೆಳವಣಿಗೆ*

ಐದನೆಯ ಅಧ್ಯಾಯದಲ್ಲಿ ನೋಡಿದ ಹಾಗೆ ಹುಟ್ಟಿದ ಮಗುವಿನಲ್ಲಿ ತೃಪ್ತಿ ಮತ್ತು ಅಸ್ವಸ್ಥತೆಗಳ ಹೊರತು ಮತ್ತೆ ಯಾವ ಭಾವೋದ್ರೇಕಗಳೂ ಸ್ಪಷ್ಟವಾಗಿ ಕಂಡುಬರುವುದಿಲ್ಲ. ಆದರೆ ಮಗುವಿಗೆ ನಾಲ್ಕಾರು ತಿಂಗಳುಗಳಾದಮೇಲೆ ಮುಖ ಭಾವನೆಯಲ್ಲಿಯೂ, ಧ್ವನಿಯಲ್ಲಿಯೂ ಬೇರೆ ಬೇರೆ ಭಾವಗಳಿಗೆ ಅನುಗುಣವಾಗಿ ಬೇರೆ ಬೇರೆ ಲಕ್ಷಣಗಳು ತಲೆದೋರುವುವು. ಈ ಬೆಳವಣಿಗೆಯನ್ನು ಮಗು ಹೇಗೆ ಹೊಂದುವುದೆಂಬುದನ್ನು ಕೆಲವು ಮುಖ್ಯ ಭಾವೋದ್ರೇಕಗಳನ್ನು ಪರೀಕ್ಷಿಸಿ ನೋಡಬಹುದು.

### ಹೆದರಿಕೆ

ಐದಾರು ವರ್ಷದ ಮಕ್ಕಳನ್ನು ಗಮನಿಸಿ ನೋಡಿದರೆ ಅವರಲ್ಲಿ ಎಷ್ಟೋ ವಿಧವಾದ ಭಯಗಳು ಕಾಣಬರುವುವು. ರಾತ್ರಿ ಕತ್ತಲಲ್ಲಿರುವ ಸಾಮಾನನ್ನೇನಾದರೂ ತೆಗೆದುಕೊಂಡು ಬರಬೇಕಾದರೆ ಮಗು "ನನಗೆ ಹೆದರಿಕೆ ನಾನು ಹೋಗವುದಿಲ್ಲ" ಎಂದು ಹೇಳುವುದು. ಮೃಗಾಲಯದಲ್ಲಿ ಮೃಗಗಳನ್ನಿಟ್ಟಿರುವ ಬೋನುಗಳ ಹತ್ತಿರ ಹೋಗಲು ಮಕ್ಕಳು ಹೆದರುವರು. ಕೆಲವು ಭಿಕ್ಷುಕರು ಮನೆಯ ಮುಂದೆ ಬಂದರೆ ಮಕ್ಕಳು ಹೆದರಿ "ಅಮ್ಮಾ ಗೊಗ್ಗಯ್ಯ'' ಎನ್ನುತ್ತ ಓಡಿಬರುವರು ನಾಯಿ ಬೆಕ್ಕುಗಳನ್ನು ನೋಡಿದರೂ ಹಿಂದಿರುಗುವರು.

ಆದರೆ ಒಂದು ಅಥವಾ ಎರಡು ವರ್ಷದ ಮಕ್ಕಳಿಗೆ ಕತ್ತಲೆಯ ಭಯವಿಲ್ಲ. ಕತ್ತಲೆಯಲ್ಲಿ ನಿರ್ಭಯವಾಗಿ ಒಬ್ಬೊಬ್ಬರೇ ತಿರುಗುವರು ಮನೆಗೆ ಯಾರು ಬಂದರೂ ಹೆದರಿಕೆಯಿಲ್ಲದೆ ಅವರ ಜೊತೆಯಲ್ಲಿ ಮಾತನಾಡುವರು. ದಾರಿಯಲ್ಲಿ ನಾಯಿಯನ್ನು ನೋಡಿದಾಗ ಅದರ ಹತ್ತಿ

---

* ಈ ಅಧ್ಯಾಯವನ್ನು ಗ್ರಂಥಕರ್ತರ "ಮಕ್ಕಳ ಭಾವಜೀವನ" ಎಂಬ ಪುಸ್ತಕದಿಂದ ಸಂಗ್ರಹಿಸಿದೆ.

ರಕ್ಕೆ ಹೋಗಿ ಅದರೊಡನೆ ಆಟವಾಡಲು ಹೋಗುವರು. ಮೃಗಾಲಯಕ್ಕೆ ಕರೆದುಕೊಂಡು ಹೋದಾಗ ಕುತೂಹಲದಿಂದ ಚಪ್ಪಾಳೆ ಹೊಡೆಯುತ್ತ ಮೃಗದ ಹತ್ತಿರಕ್ಕೆ ಓಡಿಹೋಗುವರು. ಈ ವಯಸ್ಸಿನಲ್ಲಿ ಮಕ್ಕಳಿಗೆ ಹೆದರಿಕೆಯಿಲ್ಲ. ಆದೇ ಮಕ್ಕಳು ಸ್ವಲ್ಪ ಬೆಳೆದ ಮೇಲೆ ಅದೇ ಸನ್ನಿವೇಶದಲ್ಲಿ ಈ ರೀತಿಯ ಭಯವು ಮಕ್ಕಳಲ್ಲಿ ಹೇಗೆ ಹುಟ್ಟುತ್ತದೆ ಎಂಬುದು ಮುಂದಿನ ಪ್ರಶ್ನೆ.

ಈ ವಿಚಾರದಲ್ಲಿ ಮನಶ್ಶಾಸ್ತ್ರಜ್ಞರು ಪರಿಶೋಧನೆಗಳನ್ನು ನಡೆಸಿರುವರು. ಅವರು ನಡೆಸಿರುವ ಒಂದು ಪ್ರಯೋಗವನ್ನು ಇಲ್ಲಿ ವಿವರಿಸಬಹುದು. ಮೇರಿಕವರ್‌ಜೋನ್ಸ್ ಎಂಬಾಕೆಯು, ಸಾಧುವಾದ, ಆದರೆ ಬಹು ಚುರುಕಾದ, ವಿಷವಿಲ್ಲದ ಒಂದು ದೊಡ್ಡ ಹಾವನ್ನು ಹಿಡಿದುಕೊಂಡು ಅದನ್ನು ಒಂದೆರಡು ವರ್ಷ ವಯಸ್ಸಿನ ಮಕ್ಕಳ ಮುಂದೆಯೂ ದೊಡ್ಡವರ ಮುಂದೆಯೂ ಬಿಟ್ಟು ಅವರ ವರ್ತನೆಯನ್ನು ಪರೀಕ್ಷಿಸಿದಳು. ಒಂದೆರಡು ವರ್ಷದ ಸಣ್ಣ ಮಕ್ಕಳು ಸ್ವಲ್ಪವಾದರೂ ಹೆದರಿಕೆಯಿಲ್ಲದೆ ಅದರ ಹತ್ತಿರ ಹೋಗಿ ಅದನ್ನು ಹಿಡಿದು ಆಡುವುದಕ್ಕಾರಂಭಿಸಿದರು. ಆದರೆ ಮೂರು ನಾಲ್ಕು ವರ್ಷದ ಮಕ್ಕಳು ಅದನ್ನು ಹಿಡಿಯಲು ಅಥವಾ ಅದರ ಹತ್ತಿರ ಹೋಗಲು ಪ್ರಯತ್ನಿಸಲಿಲ್ಲ; ಹಾವನ್ನು ಮಾತ್ರ ಅತಿ ಕುತೂಹಲದಿಂದ ನೋಡುತ್ತಿದ್ದರು. ಐದು ವರ್ಷದ ಮಕ್ಕಳು ದೊಡ್ಡವರಂತೆ ಆ ಹಾವನ್ನು ದೂರದಂದ ನೋಡಿದ ಕೂಡಲೆ ಹೆದರಿ ಅಲ್ಲಿಂದ ಓಡಿಹೋದರು.

ವಾಟ್ಸನ್* ಎಂಬ ಅಮೆರಿಕದ ಮತ್ತೊಬ್ಬ ಶಾಸ್ತ್ರಜ್ಞನು ಒಂದು ದೊಡ್ಡ ಹೆರಿಗೆ ಆಸ್ಪತ್ರೆಯಲ್ಲಿ ಆಗತಾನೆ ಹುಟ್ಟಿದ ಮಕ್ಕಳ ಭಾವಗಳನ್ನು ಪರಿಶೀಲಿಸಿದನು. ಒಂದು ತಿಂಗಳ ವಯಸ್ಸಿನ ಮಕ್ಕಳಲ್ಲಿ ಯಾವಾಗಲೋ ಒಂದೊಂದು ಸಲ ಭಯದ ಚಿಹ್ನೆಗಳು ಕಾಣಿಸಿಕೊಂಡುವು. ಎರಡನೆಯ ಮತ್ತು ಮೂರನೆಯ ತಿಂಗಳಲ್ಲಿ ದೊಡ್ಡ ಶಬ್ದವಾದಾಗ, ಪವನ ತಪ್ಪಿದಾಗ ಅಥವಾ ನೋವುಂಟಾದಾಗ ಮಕ್ಕಳು ಭಯದ ಸೂಚನೆಯನ್ನು ತೋರಿಸಿ

* "ದಿ ಸೈಕಾಲಜಿಕಲ್ ಕೇರ್ ಆಫ್ ಇನ್‌ಫೆಂಟ್ ಅಂಡ್ ಚೈಲ್ಡ್"

ದುವು. ಮೊದಲನೆಯ ವರ್ಷದ ಮಕ್ಕಳಲ್ಲಿ ಹೆದರಿಕೆ ಹುಟ್ಟಬೇಕಾದರೆ ಇವುಗಳಲ್ಲಿ ಯಾವುದಾದರೂ ಒಂದು ಕಾರಣವಿರಬೇಕೆಂತಲೂ ಬೇರೆ ಯಾವ ಕಾರಣದಿಂದಲೂ ಹೆದರಿಕೆಯುಂಟಾಗುವುದಿಲ್ಲವೆಂತಲೂ ಇದರಿಂದ ಸೂಚಿತವಾಯಿತು. ಬೆಳೆದ ಮಕ್ಕಳಲ್ಲಿ ಇತರ ಕಾರಣಗಳಿಂದ ಹೆದರಿಕೆಗಳು ಹೇಗೆ ಹುಟ್ಟುತ್ತವೆ ಎಂಬುದನ್ನು ನೋಡೋಣ.

ಹೆದರಿಕೆಗಳೆಲ್ಲವೂ ಸ್ವಾಭಾವಿಕವಾದುವಲ್ಲ. ಕೆಲವುಮಾತ್ರ ಸ್ವಾಭಾವಿಕವಾದುವು, ಸಂಸರ್ಗಜನ್ಯವಾದುವೇ ಹೆಚ್ಚು. ಸಿಡಿಲಿನಂತಹ ಶಬ್ದ ಅಥವಾ ಗದರಿಸುವ ಶಬ್ದ ಕೇಳಿದಾಗ ಬೆಚ್ಚಿಬೀಳುವುದೂ, ಸುಡುವ ಪದಾರ್ಥವನ್ನು ಮುಟ್ಟದಾಗ ಹೆದರಿ ಕೈಯನ್ನು ಹಿಂದಕ್ಕೆ ತೆಗೆದುಕೊಳ್ಳುವುದೂ, ಏಟುಕೊಟ್ಟಾಗ ಅಳುವುದೂ ಸ್ವಾಭಾವಿಕವಾದ ಹೆದರಿಕೆಗಳಿಗೆ ಉದಾಹರಣೆಗಳು.

ಸ್ವಾಭಾವಿಕ ಪ್ರಚೋದನಗಳಿಂದಲ್ಲದೆ ಅವುಗಳ ಸಂಸರ್ಗದಲ್ಲಿರುವ ಅಪ್ರಕೃತವಾದ ಇತರ ಪ್ರಚೋದನೆಗಳಿಂದಲೂ ಹೆದರಿಕೆಗಳು ಹುಟ್ಟಬಹುದು. ಹೇಗೆಂದರೆ ಒಂದು ಸಣ್ಣ ಮಗು ಒಂದು ನಾಯಿಯ ಜೊತೆಯಲ್ಲಿಯೋ, ಬೆಕ್ಕಿನ ಜೊತೆಯಲ್ಲಿಯೋ ಆಡುತ್ತಿರುವಾಗ ಮಗು ಅದರ ಬಾಲವನ್ನಾಗಲೀ ಕಿವಿಯನ್ನಾಗಲೀ ಎಳೆಯುವುದು. ಆಗ ನಾಯಿ ಬೊಗಳುವುದು, ಬೆಕ್ಕು ಪರಚುವುದು. ಆಕಸ್ಮಿಕವಾದ ಈ ಬೊಗಳುವಿಕೆಯು ಅಥವಾ ಪರಚುವಿಕೆಯು ಮಗುವಿನಲ್ಲಿ ಹೆದರಿಕೆಯನ್ನುಂಟುಮಾಡುವುದು. ಈ ಹೆದರಿಕೆಯು ಆ ಶಬ್ದದಿಂದ ಅಥವಾ ಪರಚುವಿಕೆಯಿಂದುಂಟಾದುದಾದರೂ ಮಗು ಮುಟ್ಟಿದ್ದು ನಾಯಿಯ ಅಥವಾ ಬೆಕ್ಕಿನ ಕೂದಲನ್ನು ಮಾತ್ರ. ಇನ್ನು ಮುಂದೆ ಆ ನಾಯಿ ಅಥವಾ ಬೆಕ್ಕನ್ನು ನೋಡಿದ ಮಾತ್ರದಿಂದಲೇ ಅದಕ್ಕೆ ಹೆದರಿಕೆಯುಂಟಾಗುವುದು ಇಷ್ಟು ದಿವಸವೂ ನಾಯಿಯನ್ನು ನೋಡಿ ಹೆದರದಿದ್ದ ಮಗು ಇನ್ನು ಮೇಲೆ ನಾಯಿಯನ್ನಾಗಲಿ ಅದರ ಮೈಯಂತೆ ಕೂದಲುಳ್ಳ ಪದಾರ್ಥವನ್ನಾಗಲೀ ನೋಡಿದ ಮಾತ್ರದಿಂದಲೇ ಹೆದರುವುದು.

ಈ ರೀತಿಯ ತತ್ತ್ವಗಳನ್ನು ವಾಟ್ಸನ್ ತನ್ನ ಪ್ರಯೋಗಗಳಿಂದ ಕಂಡು ಹಿಡಿದಿದ್ದಾನೆ. ಹದಿನೈದು ತಿಂಗಳಿನ ಒಂದು ಮಗುವಿನ ಹತ್ತಿರ

ವಾಟ್ಸನ್ ಒಂದು ಬಿಳಿಯ ಇಲಿಯನ್ನು ಇಟ್ಟನು. ಅದರ ಜೊತೆಯಲ್ಲಿ ಮಗು ಆಡಿಕೊಂಡಿತ್ತು. ಆಮೇಲೆ ಒಂದು ಮೊಲ, ಒಂದು ನಾಯಿ, ಒಂದು ಕರಡಿ ಬೊಂಬೆ ಮುಂತಾದ ಕೂದಲಿರುವ ಪ್ರಾಣಿಗಳನ್ನೂ ಮತ್ತು ಬೊಂಬೆಗಳನ್ನೂ ಅದಕ್ಕೆ ತೋರಿಸಿದನು. ಒಂದೊಂದರ ಜೊತೆಯಲ್ಲಿಯೂ ಮಗು ಆಡುತ್ತಿತ್ತು. ಮೊಲದ ಜೊತೆಯಲ್ಲಿ ಆಡುತ್ತಿದ್ದಾಗ ಒಂದು ತಗಡಿನ ಪೆಟ್ಟಿಗೆಯನ್ನು ಹೊಡೆದು ಅಸಾಧ್ಯವಾದ ಗದ್ದಲವನ್ನುಂಟುಮಾಡಿದನು. ಮಗು ಈ ಶಬ್ದವನ್ನು ಕೇಳಿ ಹೆದರಿ ಮೊಲವನ್ನು ಬಿಟ್ಟು ತಾಯಿಯ ಹತ್ತಿರ ಓಡಿಹೋಯಿತು. ಇನ್ನೊಂದು ಸಲವೂ ಮಗು ಮೊಲದ ಜೊತೆಯಲ್ಲಿ ಆಟವಾಡುತ್ತಿದ್ದಾಗ ಅದೇ ರೀತಿಯಾಗಿ ಬೊಬ್ಬೆಯನ್ನೆಬ್ಬಿಸಿದನು. ಈ ರೀತಿ ಎರಡು ಮೂರು ಸಲ ಮಾಡಿದಮೇಲೆ ಮೊಲವನ್ನು ನೋಡಿದರೆ ಆ ಮಗುವಿಗೆ ಹೆದರಿಕೆ ಹುಟ್ಟುವಂತಾಯಿತು. ಈ ಹೆದರಿಕೆಯು ಮೊಲವೊಂದೇ ಅಲ್ಲದೆ ಇತರ ಪ್ರಾಣಿಗಳಲ್ಲಿಯೂ ಆರೋಪಿತವಾಯಿತು.

ಹೀಗೆ ಬೆಕ್ಕು ಅಥವಾ ನಾಯಿಯಿಂದ ಪರಚಿಸಿಕೊಂಡ ಮಗು ಆ ಮೃಗಗಳಲ್ಲದೆ ಅವನ್ನು ಹೋಲುವ ಕಂಬಳಿಯನ್ನೋ ರಗ್ಗನ್ನೋ ನೋಡಿ ಹೆದರಿದರೆ ಅಂತಹ ಹೆದರಿಕೆ ಸಂಸರ್ಗಜನ್ಯವಾದ ಹೆದರಿಕೆ ಅಥವಾ ಆರೋಪಿತವಾದ ಹೆದರಿಕೆ. ಕಂಬಳಿ ಅಥವಾ ರಗ್ಗು ಅಪಾಯಕರವಾದುದಲ್ಲ. ಆದರೆ ಅದು ಬೆಕ್ಕಿನ ಅಥವಾ ನಾಯಿಯ ಕೂದಲನ್ನು ಹೋಲುವುದರಿಂದ, ಹೆದರಿಕೆಯು ಬೆಕ್ಕೂ ನಾಯಿಗಳಿಂದ ಕಂಬಳಿಗೂ ರಗ್ಗಿಗೂ ವರ್ಗಾಯಿಸಲ್ಪಟ್ಟಿದೆ. ಕತ್ತಲೆಯಲ್ಲಿ ಹೋಗಿ ಗೋಡೆಗೆ ತಲೆಯನ್ನು ತಾಕಿಸಿಕೊಂಡು ಅಥವಾ ಮೆಟ್ಟಲಿನಿಂದ ಬಿದ್ದು ಭಯಪಟ್ಟ ಮಗುವಿನಲ್ಲಿ, ತಲೆತಾಕಿದುದರಿಂದ ಅಥವಾ ಬಿದ್ದುದರಿಂದ ಉಂಟಾದ ಭಯವು ಕತ್ತಲೆಗೆ ಆರೋಪಿತವಾಗುವುದು. ಕಂಬಳಿಯನ್ನು ನೋಡಿ ಹೆದರುವುದು, ಕತ್ತಲೆಯನ್ನು ಕಂಡು ಹೆದರುವುದು ಇವು ಆರೋಪಿತವಾದ ಹೆದರಿಕೆಗಳು. ಇವಕ್ಕೆ ಇಂಗ್ಲೀಷಿನಲ್ಲಿ "ಕಂಡಿಷನ್ಡ್ ಫಿಯರ್ಸ್" ಎಂದು ಹೆಸರು.*

---

*…ಕೆಗಳಲ್ಲದೆ ಇತರ ವರ್ತನೆಗಳೂ ಹೀಗೆಯೇ ಆರೋಪಿತವಾದುವಾಗ

ಇನ್ನೊಂದು ಉದಾಹರಣೆ—ಮಗುವಿನ ಕೈಬೆರಳನ್ನು ಸೂಜಿಯಿಂದ ಚುಚ್ಚಿದರೆ ಅದು ಹೆದರಿ ಬೆರಳನ್ನು ಹಿಂದಕ್ಕೆ ಎಳೆದುಕೊಳ್ಳುವುದು ಸ್ವಾಭಾವಿಕವಾದ ಹೆದರಿಕೆ. ಈ ಹೆದರಿಕೆಯನ್ನು ಬೇರೊಂದು ಪ್ರಚೋದನೆಯಲ್ಲಿ ಆರೋಪಿಸಬಹುದು. ಬೆರಳನ್ನು ಸೂಜಿಯಿಂದ ಚುಚ್ಚುವುದು, ಅದೇ ಕಾಲದಲ್ಲಿಯೇ ಬೈಸಿಕಲ್ ಗಂಟೆಯನ್ನು ಬಾರಿಸುವುದು, ಹೀಗೆ ನಾಲ್ಕಾರು ಸಲ ಮಾಡಿದ ಮೇಲೆ ಗಂಟೆಯನ್ನು ಬಾರಿಸುತ್ತಲೇ ಮಗು ಬೆರಳನ್ನು ಹಿಂದಕ್ಕೆ ಎಳೆದುಕೊಳ್ಳುವಂತೆ ಮಾಡಬಹುದು.

ಕರ್ಕಶವಾದ ಶಬ್ದ, ನೋವು—ಇವು ಮೊದ ಮೊದಲು ಮಕ್ಕಳ ಸ್ವಾಭಾವಿಕವಾದ ಹೆದರಿಕೆಗಳಿಗೆ ಕಾರಣವಾಗುವುವು. ಸ್ವಾಭಾವಿಕವಾದ ಪ್ರಚೋದನೆಯಲ್ಲದೆ ಅದರ ಸಹಚಾರಿಯಾದ ಇತರ ಅಂಶಗಳೂ ಭಯೋತ್ಪಾದಕಗಳಾಗುವುವು. ಈ ವಿಶಾಲವಾದ ಪ್ರಪಂಚದಲ್ಲಿ ಇಂತಹ ಸಹಚಾರಿಗಳಾದ ಅಂಶಗಳು ಸಾವಿರ ಗಟ್ಟಲೆ ಇರುವುದರಿಂದ, ನಮ್ಮ ಆರೋಪಿತವಾದ ಹೆದರಿಕೆಗಳೂ ಅಸಂಖ್ಯಾತವಾಗಿ ಬೆಳೆಯುವುವು.

ಎರಡು ಮೂರು ವರ್ಷಗಳ ವಯಸ್ಸಿನ ಮಕ್ಕಳು ತಮ್ಮ ಸುತ್ತಲಿರುವ ಪದಾರ್ಥಗಳನ್ನೋ ಸನ್ನಿವೇಶಗಳನ್ನೋ ಕಂಡು ಹೆದರುವುವು. ಅಂದರೆ ಅವರ ಅನುಭವದ ಎಲ್ಲೆಯೊಳಗೆ ಯಾವ ಸಂದರ್ಭಗಳು ಅವರಿಗೆ ಹೆದರಿಕೆಯನ್ನುಂಟುಮಾಡಿದುವೋ ಅವು ತಿರುಗಿ ಸಂಭವಿಸಿದ

---

ಬಹುದು. ಕಣ್ಣನ್ನು ತಿವಿಯುವುದಕ್ಕೆ ಬಂದಾಗ ಕಣ್ಣು ರೆಪ್ಪೆಗಳನ್ನು ಮುಚ್ಚುವುದು ಸ್ವಾಭಾವಿಕವಾದ ಪ್ರತಿಕ್ರಿಯೆ. ಆದರೆ ಹತ್ತು ಸಲ ಕಣ್ಣನ್ನು ತಿವಿಯುವಂತೆ ಮಾಡಿ ಅದೇ ಕಾಲದಲ್ಲಿ ಗಟ್ಟಿಯಾಗಿ ಶಬ್ದವನ್ನು ಮಾಡಿದರೆ, ಹನ್ನೊಂದನೆಯ ಸಲ ಕಣ್ಣು ತಿವಿಯುವುದರ ಬದಲಾಗಿ ಬರಿಯ ಶಬ್ದ ಮಾಡುವುದರಿಂದಲೇ ಕಣ್ಣು ರೆಪ್ಪೆಗಳನ್ನು ಮುಚ್ಚುವಂತೆ ಮಾಡಬಹುದು. ಇಂಗ್ಲೀಷಿನಲ್ಲಿ ಇದಕ್ಕೆ "ಕಂಡಿಷನ್ಡ್ ರಿಫ್ಲೆಕ್ಸ್" ಎಂದು ಹೆಸರು. ಅದನ್ನು ಸಾಧು ಆರೋಪಿತ ಪ್ರತಿಕ್ರಿಯೆ ಎಂದು ಕರೆಯಬಹುದು.

ಕಾಲದಲ್ಲಿ ಅವು ಅಂಜುವುವು ಮತ್ತು ಈ ಹೆದರಿಕೆಗಳು ಸಣ್ಣತನದಲ್ಲಿ ಸಂಭವಿಸಿದುದರಿಂದ ಜೀವವಿರುವವರೆಗೂ ಉಳಿಯುವುವು. ಆದುದರಿಂದಲೇ ನಾವು ಮಕ್ಕಳನ್ನು ಬಹಳ ಜಾಗರೂಕತೆಯಿಂದ ನೋಡಿಕೊಳ್ಳಬೇಕು.

ಯಾವ ಯಾವ ಸಂದರ್ಭಗಳಲ್ಲಿ ಬೇರೆ ಬೇರೆ ವಯಸ್ಸಿನ ಮಕ್ಕಳಲ್ಲಿ ಹೆದರಿಕೆ ಕಾಣಿಸಿಕೊಳ್ಳುವುದು ಎಂಬುದನ್ನು ನಿರ್ಧರಿಸಲು ಮನಶ್ಶಾಸ್ತ್ರಜ್ಞರು ಪರೀಕ್ಷೆಗಳನ್ನು ನಡೆಸಿರುವರು. ಇವುಗಳ ಪರಿಣಾಮವಾಗಿ ಈ ಕೆಳಗೆ ಹೇಳಿರುವ ಅಂಶಗಳು ಹೊರಬಿದ್ದಿವೆ.

ಬೀಳುವುದು, ದೊಡ್ಡ ಶಬ್ದಗಳು, ಮೃಗಗಳು, ಹಾನಿಯನ್ನುಉಂಟುಮಾಡುವ ಮನುಷ್ಯರು ಮತ್ತು ಸಾಮಾನುಗಳು, ಹೊಸ ಮನುಷ್ಯರು ಮತ್ತು ಹೊಸ ಸ್ಥಳಗಳು, ಪರಿಚಿತ ವಸ್ತುಗಳಲ್ಲಿ ಅಪರಿಚಿತ ರೂಪುಗಳನ್ನು ಕಾಣುವುದು—ಇತ್ಯಾದಿಗಳಿಂದ ಮಕ್ಕಳು ಹೆದರುವರೆಂದು ನಿರ್ಣಯವಾಯಿತು. ಇವೆಲ್ಲವೂ ಮಕ್ಕಳ ವಾತಾವರಣದಲ್ಲಿ ಇರುವ ಸಂದರ್ಭಗಳೇ ಆಗಿವೆ. ಐದುವರ್ಷದಿಂದ ಹನ್ನೆರಡು ವರ್ಷಗಳೊಳಗಿರುವ ಬಾಲಕ ಬಾಲಕಿಯರಲ್ಲಿ ದೆವ್ವ, ಶವಗಳ ಭೀತಿಯೇ ಮುಖ್ಯವಾದುದು. ಭೀತಿಗಳಲ್ಲಿ ಇವು ಶೇಕಡ ೨೨ ರಷ್ಟು ಇವೆ. ಮೃಗಗಳ ಹೆದರಿಕೆ ಇವುಗಳಿಗಿಂತ ಕಡಿಮೆ. ಹೊಸ ಮನುಷ್ಯರು ಹೊಸ ಸ್ಥಳಗಳು ಕತ್ತಲು, ಒಂಟಿಯಾಗಿರುವುದು ಮುಂತಾದುವು ಇನ್ನೂ ಕಡಿಮೆ.

ದೇಹ ಹಾನಿಯೇ ಎಳೆ ಮಗುವಿನ ಹೆದರಿಕೆಗೆ ಮೊಟ್ಟಮೊದಲಿನ ಏಕಮಾತ್ರ ಕಾರಣವಾಗಿರುವುದು ಆದರೆ ಮಗು ಬೆಳೆಯುತ್ತ ಇದರ ಪ್ರಾಬಲ್ಯವು ಕಡಿಮೆಯಾಗುತ್ತ ಬಂದು ಕೊನೆಗೆ ಬೆಳೆದ ಹುಡುಗರಲ್ಲಿ ಇದು ಶೇಕಡ ೧೦ ರಷ್ಟು ಹೆದರಿಕೆಗಳಿಗೆ ಮಾತ್ರ ಕಾರಣವಾಗುವುದು.

ಐದುವರ್ಷಗಳಾದ ಮೇಲೆ ಅವರ ಹೆದರಿಕೆಗಳಿಗೆ ಭೌತವಸ್ತುಗಳಿಗಿಂತಲೂ, ಕಾಲ್ಪನಿಕ ವಸ್ತುಗಳೇ ಪ್ರಬಲವಾದ ಕಾರಣಗಳಾಗುತ್ತವೆ. ಹುಲಿ, ಆನೆ, ಸಿಂಹಾದಿಗಳಿಗೆ ಹೆದರದವರೂ ದೆವ್ವ ಪಿಶಾಚ

ಗಳಿಗೆ ನಡಗುವರು. ಈ ಕಾಲ್ಪನಿಕ ಹೆದರಿಕೆಗಳನ್ನು ತಂದೆತಾಯಿಯರೂ ಮತ್ತು ಉಪಾಧ್ಯಾಯರೂ ಬಿಡಿಸಲು ಪ್ರಯತ್ನಿಸಬೇಕು.

ಹೆದರಿಕೆಗಳನ್ನು ಬಿಡಿಸುವ ವಿಧಾನಕ್ಕೆ ಇಂಗ್ಲೀಷಿನಲ್ಲಿ "ಅನ್ ಕಂಡೀಷನಿಂಗ್" ಎಂದು ಹೆಸರು ಕೊಟ್ಟಿರುವರು. ಇದನ್ನು ನಾವು ಭಯ ವಿಸರ್ಜನೆಯ ಕ್ರಮವೆಂದು ಕರೆಯಬಹುದು. ಈ ವಿಧಾನವನ್ನು ಅಮೇರಿಕಾದಲ್ಲಿ ಪ್ರಚಾರಕ್ಕೆ ತಂದವನು ವಾಟ್ಸನ್, ಇವನು ನಡೆಸಿದ ವಿಸರ್ಜನೆಯ ಪ್ರಯೋಗಗಳಲ್ಲಿ ಒಂದನ್ನು ಇಲ್ಲಿ ವಿವರಿಸಬಹುದು.

ಮೊಲವನ್ನು ಕಂಡರೆ ಹೆದರುತಿದ್ದ ಮಗುವಿನ ಹೆದರಿಕೆಯನ್ನು ಬಿಡಿಸಲು ವಾಟ್ಸನ್, ಆ ಮಗು ಸಮಾಧಾನವಾಗಿ ಊಟ ಮಾಡುತಿದ್ದ ಸಮಯವನ್ನು ನೋಡಿಕೊಂಡು ಮೆತ್ತಗೆ ಒಂದು ಮೊಲವನ್ನು ಆಕೋಣೆಯ ಸಮಿಾಪದಲ್ಲಿಟ್ಟನು. ಮಗು ಮೊಲವನ್ನು ನೋಡಿತು ; ಸಲ್ಪ ಅಂಜಿತು, ಮತ್ತೆ ಊಟಮಾಡತೊಡಗಿತು. ಎರಡನೆಯ ದಿವಸ ಅದೇಸಮಯದಲ್ಲಿಯೇ ಮೊಲವನ್ನು ಇನ್ನು ಸ್ವಲ್ಪ ಹತ್ತಿರ ತಂದ್ದಿಟ್ಟನು. ಮೂರನೆಯದಿನ ಇನ್ನೂ ಹತ್ತಿರ ತಂದಿಟ್ಟನು. ನಾಲ್ಕನೆಯದಿನ ಮೊಲವು ಮಗುವಿನ ಹತ್ತಿರಕ್ಕೆ ಹೋದರೂ ಅದು ಹೆದರದೆ ಅದರ ಜೊತೆಯಲ್ಲಿ ಆಡಲಾರಂಭಿಸಿತು. ಹೀಗೆ ಭಯೋತ್ಪಾದಕ ವಸ್ತುಗಳನ್ನು ಸಂತೋಷ ಕರವಾದ ಸನ್ನಿವೇಶಗಳಲ್ಲಿ ಕ್ರಮಕ್ರಮವಾಗಿ ತಂದಿಡುವುದರಿಂದ ಅದರ ವಿಚಾರವಾಗಿ ಇದ್ದ ಹೆದರಿಕೆಯನ್ನು ಬಿಡಿಸಬಹುದು.

## ಕೋಪ

ಸಾಧಾರಣವಾಗಿ ಮಕ್ಕಳಲ್ಲಿ ಹೆದರಿಕೆಗಿಂತಲೂ ಕೋಪ ಹೆಚ್ಚು. ಮಕ್ಕಳ ಚಲನ ವಲನಗಳಿಗೆ ಅಡಚಣೆಯುಂಟಾದರೆ, ಅಥವಾ ದೈಹಿಕ ಕ್ರಿಯೆಗಳಿಗೆ ತಡೆಯುಂಟಾದರೆ ಅದಕ್ಕೆ ಕೋಪ ಬರುವುದು. ಮಗು ಕೈಕಾಲುಗಳನ್ನು ಬಡಿಯುತ್ತ ಅಳುವುದೇ ಈ ಕೋಪದ ಚಿಹ್ನೆ. ಆದರೆ ಮಗು ಬೆಳೆಯುತ್ತ ಬೆಳೆಯುತ್ತ ದೈಹಿಕ ಕ್ರಿಯೆಗಳಲ್ಲದೆ ಅದು ಮಾಡುವ ಯಾವುದೇ ಕೆಲಸಕ್ಕೆ ತಡೆಬಂದರೂ, ಅದು ಕೋಪಗೊಳ್ಳು

ವುದು. ಉದಾಹರಣೆಗೆ:—ಯಾರಾದರೂ ತನ್ನ ಆಟದ ಸಾಮಾನು ಗಳನ್ನು ತೆಗೆದುಕೊಂಡರೆ ಮಗುವಿಗೆ ತೀವ್ರವಾಗಿ ಸಿಟ್ಟು ಬರುವುದು.

ಮಕ್ಕಳಿಗೆ ಯಾವಸನ್ನಿವೇಶದಲ್ಲಿ ಕೋಪಹುಟ್ಟುವುದು ಹೆಚ್ಚು ಎಂಬುದನ್ನು ಗುಡಿನಫ್* ಎನ್ನುವಾಕೆ ಪರೀಕ್ಷಿಸಿನೋಡಿ, ಮಗುವಿಗೆ ದೇಹಾಲಸ್ಯವಾದಾಗ, ಮಲಬದ್ಧತೆಯುಂಟಾದಾಗ ಕೋಪ ಹೆಚ್ಚೆಂದು ಕಂಡುಹಿಡಿದಳು.

ಮಕ್ಕಳು ಕೋಪಗೊಳ್ಳುವ ಸನ್ನಿವೇಶಗಳಲ್ಲಿ ಶೇಕಡ ೨೫ ರಷ್ಟು ತಮ್ಮ ವ್ಯಕ್ತಿತ್ವಕ್ಕೆ ಮತ್ತು ಆತ್ಮಗೌರವಕ್ಕೆ ಕುಂದುಬಂದ ಸಂದರ್ಭ ಗಳಲ್ಲಿ ಉಂಟಾದುವು. ಯಾರಾದರೂ ತಮ್ಮನ್ನು ಹೊಡೆದರೆ, ಬೈಯ್ದರೆ ಹೀಯಾಳಿಸಿದರೆ, ಪರಿಹಾಸ್ಯಮಾಡಿದರೆ ಅಥವಾ ಅಣಕಿಸಿದರೆ ಅವರಿಗೆ ಬಹಳ ಜಾಗ್ರತೆ ಕೋಪವುಂಟಾಗುವುದು. ಇತರ ಮಕ್ಕಳನ್ನು ತಮ್ಮ ಮುಂದೆ ಊಟಕ್ಕೆಕರೆದೋ ಅಥವಾ ಇನ್ನಾವರೀತಿಯಲ್ಲಿಯೋ ಅವರಿಗೆ ಪ್ರಾಧಾನ್ಯ ಕೊಟ್ಟರೆ ಮಕ್ಕಳಿಗೆ ಕೋಪಬರುವುದು. ನಾಲ್ಕೈದು ವರ್ಷದ ಮಕ್ಕಳಿಗೆ ತಮ್ಮ ಕೆಲಸಗಳನ್ನು ತಾವೇ ಮಾಡಿಕೊಳ್ಳಬೇ ಕೆಂಬ ಉತ್ಸಾಹವಿರುವುದು. ಆಗ ದೊಡ್ಡವರು ಆ ಉತ್ಸಾಹಕ್ಕೆ ಅಡಿ ಬರುವಂತೆ ನಡೆದುಕೊಂಡರೆ, ಅಂದರೆ ಅದು ಸ್ವತಃ ಸ್ನಾನಮಾಡಲು, ಬಟ್ಟೆಹಾಕಿಕೊಳ್ಳಲು ಪ್ರಯತ್ನಪಟ್ಟಾಗ ಇತರರು ಸಹಾಯಕ್ಕೆ ಹೋದರೆ ಅದಕ್ಕೆ ಕೋಪ ಬರುವುದು.

ಮಕ್ಕಳಿಗೆ ಕೋಪವನ್ನುಂಟುಮಾಡುವ ಸಂದರ್ಭಗಳಲ್ಲಿ ಶೇಕಡ ೩೦ ರಷ್ಟು ಅವರ ಊಟ ಉಪಚಾರಗಳಿಗೆ ಸಂಬಂಧಿಸಿದುವು. ಅವರಿಗೆ ಹಸಿವಾದಾಗ ಆಹಾರವನ್ನು ಕೊಡಲು ತಡವಾದರೆ ಅಥವಾ ಊಟದಮಧ್ಯೆ ಅವರುಕೇಳಿದ ತಿಂಡಿ ತೀರ್ಥಗಳನ್ನು ಕೊಡದೆಹೋದರೆ ಅವರಿಗೆ ಕೋಪವುಂಟಾಗುವುದು. ಮಕ್ಕಳಿಗೆ ಕೋಪವನ್ನುಂಟು ಮಾಡುವ ಸಂದರ್ಭಗಳಲ್ಲಿ ಈ ಮೂರು ಕಾರಣಗಳು ಶೇಕಡ ೭೫

---

*"ಆ್ಯಂಗರ್ ಆಂಡ್ ಫಿಯರ್ ಇನ್ ಚಿಲ್ಡ್ರನ್"

ರಷ್ಟು ಎಂದು ಹೇಳಬಹುದು. ಉಳಿದ ಶೇಕಡ ೨೫ ರಷ್ಟು ಕಾರಣಗಳು ವಿವಿಧಸಂದರ್ಭಗಳಿಗೆ ಸೇರಿದುವು.

ಇದುವರೆಗೂ ಕೋಪವನ್ನುಂಟುಮಾಡುವ ಸಂದರ್ಭಗಳನ್ನು ಪ್ರಸ್ತಾಪಿಸಲಾಯಿತು. ಈಗ ಕೋಪಗೊಂಡ ಮಕ್ಕಳ ಮುಖಭಾವದಲ್ಲಿ ಮತ್ತು ಅಂಗಚೇಷ್ಟೆಗಳಲ್ಲಿ ಉಂಟಾಗುವ ಬದಲಾವಣೆಗಳನ್ನು ಪರೀಕ್ಷಿಸೋಣ. ಮೇಲೆ ಹೇಳಿದಹಾಗೆ ಒಂದೆರಡು ತಿಂಗಳ ಮಕ್ಕಳಲ್ಲಿ ಕೋಪಉಂಟಾದಾಗ ಅವುಗಳ ಮುಖ ಕೆಂಪೇರುವುದು, ಅವು ಕೈಕಾಲುಗಳನ್ನು ಒದರುವುವು. ಆದರೆ ಸುಮಾರು ಒಂದೂವರೆ ಅಥವಾ ಎರಡು ವರ್ಷದ ಮಕ್ಕಳು ಪರಚುವುದು, ಕಚ್ಚುವುದು, ಹೊಡೆಯುವುದು, ನೆಲದ ಮೇಲೆ ಬಿದ್ದು ಹೊರಳಾಡುವುದು ಇತ್ಯಾದಿ ವರ್ತನೆಗಳ ಮೂಲಕ ತಮ್ಮ ಕೋಪವನ್ನು ವ್ಯಕ್ತಪಡಿಸುವುವು. ಸ್ವಲ್ಪ ಬೆಳೆದು ಮಾತು ಬಂದ ಮೇಲೆ ಬಯ್ಯುವುದರ ಮೂಲಕ ತಮ್ಮಕೋಪವನ್ನು ಹೊರಡಿಸುವರು. ಕೆಲವುವೇಳೆ ಇತರರ ಮೇಲಿರುವ ಕೋಪವನ್ನು ತಮ್ಮ ಆಟದ ಸಾಮಾನುಗಳ ಮೇಲೆ ತೋರಿಸುವರು. ಇನ್ನೂ ಸ್ವಲ್ಪ ಬೆಳೆದಮೇಲೆ ಇತರರ ಮೇಲೆ ಕೋಪಗೊಂಡಾಗ ತಮ್ಮ ಮುಖ ಮೈ ಪರಚಿಕೊಳ್ಳುವರು ಅಥವಾ ತಮ್ಮ ಬಟ್ಟೆಯನ್ನು ಹರಿದುಕೊಳ್ಳುವರು.

ಐದಾರು ವರ್ಷದ ಮಕ್ಕಳು ತಮ್ಮ ಕೋಪವನ್ನು ಇತರವಿಧದಲ್ಲಿ ತೋರ್ಪಡಿಸಬಹುದು. ಮಾಡಬೇಡೆಂಬುದನ್ನು ಮಾಡಿ ಹಿರಿಯರಿಗೆ ಅಸಮಾಧಾನವನ್ನು ಉಂಟುಮಾಡಬಹುದು. ಇತರ ಮಕ್ಕಳ ಮೇಲೆ ಚಾಡಿಹೇಳಬಹುದು. ಸ್ಥಳ ಬಿಟ್ಟು ಕದಲದೆ ಕೂತಕಡೆಯೇ ಮೌನಧಾರಣೆ ಮಾಡಬಹುದು. ಆಡುತ್ತಿರುವಾಗ ಸಂಗಡಿಗರ ಮೇಲೆ ಕೋಪ ಬಂದಲ್ಲಿ ಅವರಸಂಗಡ ಬಿಟ್ಟು ಅವರ ಆಟಕ್ಕೆ ಅಡ್ಡಿತರಬಹುದು; ಆಟದಲ್ಲಿ ಅಸಹಕಾರವನ್ನು ಸೂಚಿಸಬಹುದು. ತಮ್ಮ ಕಾರ್ಯಕ್ಕೆ ಅಡ್ಡಿತಂದ ಅಡಚನೆಗಳನ್ನು ನಿವಾರಿಸಿ ತಮ್ಮ ಕಾರ್ಯವನ್ನು ಮುಂದುವರಿಸುವುದೇ ಕೋಪದಕೆಲಸ.

ಮಕ್ಕಳು ಬೆಳೆಯುತ್ತ ಬೆಳೆಯುತ್ತ ತಮ್ಮ ಕೋಪವನ್ನು ನಿಗ್ರಹಿಸಲು ಯತ್ನಿಸುವರು. ಈ ನಿಗ್ರಹಕ್ಕೆ ಎರಡು ಕಾರಣಗಳುಂಟು;

ಒಂದು ಸ್ವಪ್ರಯತ್ನ; ಇನ್ನೊಂದು ಸಾಮಾಜಿಕ ಅಡಚಣೆ. ನಾಲ್ಕೈದು ವರ್ಷದ ಮಕ್ಕಳು ತಾವು ಹಿಂದೆ ಕೋಪವನ್ನು ವ್ಯಕ್ತಗೊಳಿಸಲು ಮಾಡುತ್ತಿದ್ದ ಅಂಗ ಚೇಷ್ಟೆಗಳೆಲ್ಲವೂ ನಿರರ್ಥಕವೆಂದರಿತು ಈಗ ಅಂಗ ಚೇಷ್ಟೆಗಳನ್ನು ನಿಗ್ರಹಿಸಿ ತಮ್ಮ ಕೋಪವನ್ನು ನಾಗರಿಕ ರೀತಿಯಲ್ಲಿ ವ್ಯಕ್ತಗೊಳಿಸಲು ಕಲಿತುಕೊಳ್ಳುವರು. ಕೋಪವುಂಟಾದಾಗ ತಾಯಿ ತಂದೆಗಳು ಬುದ್ಧಿಹೇಳಿ ಕೋಪವನ್ನು ನಿಗ್ರಹಿಸಲು ಸಹಾಯಮಾಡು ವರು. ಅನಾಗರಿಕರೀತಿಯಲ್ಲಿ ಕೋಪವನ್ನು ವ್ಯಕ್ತಪಡಿಸಿದರೆ ಸಮಾಜವು ಅದನ್ನು ಅನುಮೋದಿಸುವುದಿಲ್ಲ. ಈ ಕಾರಣಗಳಿಂದ ಹುಡುಗರು ಬೆಳೆಯುತ್ತ ತಮ್ಮ ಕೋಪವನ್ನು ಹದ್ದಿನಲ್ಲಿಟ್ಟುಕೊಳ್ಳಲು ಪ್ರಯತ್ನಿಸುವರು.

ಮಕ್ಕಳು ಪದೇ ಪದೇ ಕೋಪಗೊಳ್ಳುವುದಕ್ಕೂ ಮತ್ತು ಹಾಗೆ ಕೋಪಬಂದಾಗ ವರ್ತಿಸುವ ರೀತಿಗಳಿಗೂ ಅವರ ತಂದೆ ತಾಯಿಗಳ ಶಿಕ್ಷಣವೇ ಕಾರಣ. ಮಕ್ಕಳು ಹಟ ಹಿಡಿದು ಕೋಪದಿಂದಿರುವಾಗ ತಂದೆ ತಾಯಿಗಳು ಅವರನ್ನು ಸಮಾಧಾನಪಡಿಸಲು ಅನೇಕ ರೀತಿಯಲ್ಲಿ ವರ್ತಿಸುವರು ಕೆಲವರು ತಾವೇ ಕೋಪಗೊಂಡು ಮಕ್ಕಳನ್ನು ಬಯ್ದು ಹೊಡೆದು ಅವರಲ್ಲಿ ಭೀತಿಯನ್ನುಂಟುಮಾಡುವರು. ಮತ್ತೆ ಕೆಲವರು ಕೋಪವನ್ನು ಶಮನಮಾಡುವುದಕ್ಕಾಗಿ ಮಕ್ಕಳಿಗೆ ಇಷ್ಟವಾದ ಪದಾರ್ಥಗಳನ್ನು ಕೊಡುವರು. ಅಥವಾ ಪ್ರಾರಂಭದಲ್ಲಿ ಕೋಪಗೊಂಡು ಕೊನೆಯಲ್ಲಿ ಮಕ್ಕಳ ಇಚ್ಛೆಯನ್ನು ಪೂರ್ಣಗೊಳಿಸುವರು. ಇನ್ನು ಕೆಲವರು ಕೋಪಗೊಂಡಿರುವ ಮಕ್ಕಳನ್ನು ಹಾಸ್ಯಮಾಡಿ ಮತ್ತಷ್ಟು ರೇಗಿಸುವರು; ಮಕ್ಕಳನ್ನು ಮಾತನಾಡಿಸದೆ ಅವರನ್ನು ದೂರ ಅಟ್ಟುವರು, ಅಥವಾ ಅವರ ಕೋಪವನ್ನು ಲಕ್ಷಿಸದೆ ಇರುವರು.

ತಾಯಿ ತಂದೆಯರ ಈ ಒಂದೊಂದು ವರ್ತನೆಯೂ ಮಕ್ಕಳ ಮೇಲೆ ಒಂದೊಂದು ಪರಿಣಾಮವನ್ನು ಉಂಟುಮಾಡುವುದು. ಮಕ್ಕಳನ್ನು ಹೊಡೆದು ಬಯ್ದು ಅವರಲ್ಲಿ ಹೆದರಿಕೆಯನ್ನು ಹುಟ್ಟಿಸಿದರೆ ಅವರ ವ್ಯಕ್ತಿತ್ವದ ಬೆಳೆವಣಿಗೆಗೆ ಹಾನಿಯುಂಟಾಗುವುದು; ಮಗುವಿಗೆ ತಂದೆ ತಾಯಿಯರಲ್ಲಿರುವ ಮರ್ಯಾದೆಯು ಕಡಿಮೆಯಾಗುವುದು.

ಕೋಪಗೊಂಡ ಮಕ್ಕಳಿಗೆ ಬೇಕಾದ ಉಪಚಾರವನ್ನು ಮಾಡಿ ಅವರ ಕೋಪವನ್ನು ನಿವಾರಿಸಲು ಯತ್ನಿಸುವುದು ಕೆಟ್ಟ ಪರಿಣಾಮವನ್ನುಂಟುಮಾಡುವುದು. ತಮ್ಮ ಇಷ್ಟ ಪೂರ್ತಿಗಾಗಿ ಮಕ್ಕಳು ಪದೇ ಪದೇ ಹಟ ಹಿಡಿಯುವರು. ಹೀಗೆ ಹಟವನ್ನೇ ಇವರು ಒಂದು ಅಸ್ತ್ರವಾಗಿ ಮಾಡಿಕೊಳ್ಳುವರು.

ಮಕ್ಕಳ ಕೋಪವನ್ನು ಕಡಿಮೆ ಮಾಡಬೇಕಾದರೆ ತಂದೆ ತಾಯಿಯರು ಅವರ ಕೋಪವನ್ನು ಲಕ್ಷಿಸದೆ ಇರಬೇಕು. ಮತ್ತು ಅವರಿಗೆ ತಮ್ಮ ಕೋಪದಿಂದ ಏನೂ ಪ್ರಯೋಜನವಿಲ್ಲವೆಂಬ ಅರಿವನ್ನುಂಟು ಮಾಡಬೇಕು. ಮಕ್ಕಳಿಗೆ ಕೋಪಬರುವ ವೇಳೆಯಲ್ಲಿ ಅವರ ಗಮನವನ್ನು ಮತ್ತೊಂದು ಕಡೆ ತಿರುಗಿಸಿದರೆ ಅವರ ಕೋಪವು ಶಮನವಾಗುವುದು. ಮಗುವಿನ ಯಾವ ಇಚ್ಛೆಗೆ ಭಂಗಬಂದು ಅದು ಕೋಪಗೊಂಡಿದೆಯೋ ಆ ಇಚ್ಛೆಯು ಒಳ್ಳೆಯದಲ್ಲವೆಂದು ತಂದೆ ತಾಯಿಯರು ಬುದ್ಧಿ ಹೇಳುವುದರಿಂದಲೂ ಅನೇಕ ವೇಳೆ ಮಗು ಶಾಂತವಾಗುವುದು. ಮುಖ್ಯವಾಗಿ ತಂದೆ ತಾಯಿಯರು ಮಗುವಿಗೆ ತನ್ನ ಕೋಪದಿಂದ ಎಳ್ಳಷ್ಟೂ ಲಾಭವಾಗುವುದಿಲ್ಲವೆಂದು ಸ್ಪಷ್ಟಪಡಿಸಬೇಕು; ಮತ್ತು ಈ ವಿಷಯವು ಅವರ ಮನಸ್ಸಿಗೆ ತಟ್ಟುವಂತೆ ವರ್ತಿಸಬೇಕು.

## ಅಸೂಯೆ

ಭಯ ಕ್ರೋಧ ಮೊದಲಾದ ಭಾವೋದ್ರೇಕಗಳಂತೆ ಅಸೂಯೆ ಒಂದು ಹುಟ್ಟುಗುಣವಲ್ಲ. ಮಗುವಿಗೆ ಅಸೂಯೆವುಂಟಾಗಲು ತನ್ನ ತಂದೆ ತಾಯಿಗಳು ಇತರ ಮಕ್ಕಳನ್ನು ಪ್ರೀತಿಸುವರೆಂಬ ಸಂಶಯವೂ ತಂದೆ ತಾಯಿಗಳ ಪ್ರೀತಿಯು ತನ್ನಲ್ಲಿಯೇ ಪೂರ್ತಿಯಾಗಿರಬೇಕೆಂಬ ಆಸೆಯೂ ಮುಖ್ಯಕಾರಣಗಳು. ತಮ್ಮ ಸುತ್ತ ಮುತ್ತಲಿರುವ ಜನರು ಆಸೆಗೆ ಅಡ್ಡಿ ಬರುವುದರಿಂದ ಅಸೂಯೆಯು ಹುಟ್ಟುವುದು.

ಅಸೂಯೆಯು ಕೋಪವನ್ನುಂಟುಮಾಡುವುದು; ಆದರೆ ಅಸೂಯೆಯಿಂದುಂಟಾದ ಕೋಪವು ಸಾಮಾನ್ಯ ಕೋಪದಂತೆ ಕ್ಷಣಿಕವಲ್ಲ. ಅದು ದೀರ್ಘಕಾಲವಿರುವುದು. ಸಾಧಾರಣವಾಗಿ ದೊಡ್ಡ ಮಗುವಿಗೆ ಚಿಕ್ಕ ಮಗುವಿನ ಮೇಲೆ ಕೋಪವುಂಟಾಗುವುದು. ತಾಯಿಯು ತನ್ನ

ತಂಗಿಯನ್ನಾಗಲೀ ತನ್ನ ತಮ್ಮನನ್ನಾಗಲೀ ಹಾಲು ಕೊಟ್ಟು ಆದರಿಸಿದರೆ ಈ ದೊಡ್ಡ ಮಗುವಿಗೆ ತಾಯಿಯ ಮೇಲೆ ಕೋಪವೂ, ಆದರ ಪಡೆಯುತ್ತಿರುವ ಮಗುವಿನ ಮೇಲೆ ಅಸೂಯೆಯೂ ಉಂಟಾಗುವುದು. ದೊಡ್ಡ ಮಗುವಿಗೆ ತನ್ನ ತಮ್ಮನ ಮೇಲೆ ಅಸೂಯೆ ಹುಟ್ಟಿದಾಗ ಅವನನ್ನು ಹೊಡೆಯುವುದು, ಜಿಗುಟುವುದು, ಅಥವಾ ತಳ್ಳುವುದು. ತನ್ನ ತಮ್ಮನಂತೆಯೇ ಆಟಗಳನ್ನಾಡಿ ತಾಯಿ ತಂದೆಗಳ ಪ್ರೀತಿಗೆ ಪಾತ್ರನಾಗಬೇಕೆಂಬ ಆಸೆ ಹುಟ್ಟಿ ದೊಡ್ಡ ಮಗು ಸಣ್ಣ ಮಗುವಿನಂತೆಯೇ ವರ್ತಿಸಲು ಪ್ರಾರಂಭಿಸುವುದು. ಈ ಅನುಕರಣಕ್ಕೆ ತಮ್ಮನ ಮೇಲಿನ ಅಸೂಯೆಯೇ ಮುಖ್ಯ ಕಾರಣ. ಮತ್ತು ಹನ್ನೆರಡು ತಿಂಗಳಿನ ಮಗು ಅಂಬೆಗಾಲಿಟ್ಟು ಆಡುತ್ತಿದ್ದರೆ ತಾಯಿಗೆ ಪ್ರೀತಿಹುಟ್ಟಿ ಸಂತೋಷದಿಂದ ಅದನ್ನು ಎತ್ತಿ ಮುದ್ದಾಡುವಳು ಇದನ್ನು ನೋಡುತ್ತಿರುವ ಮೂರು ನಾಲ್ಕು ವರ್ಷದ ಮಗು ತಾನೂ ಆರೀತಿ ಅಂಬೆಗಾಲಿಟ್ಟು ಆ ಮೂಲಕ ತಾಯಿಯ ಆದರವನ್ನು ಪಡೆಯಲು ಯತ್ನಿಸುವುದು. ಸಾಧಾರಣವಾಗಿ ದೊಡ್ಡ ಮಕ್ಕಳನ್ನು ಚಿಕ್ಕ ಮಕ್ಕಳು ಅನುಕರಿಸುತ್ತಾರೆ. ಆದರೆ ಇದಕ್ಕೆ ವ್ಯತಿರಿಕ್ತವಾಗಿ ಅಸೂಯೆಯಿಂದ ದೊಡ್ಡ ಮಕ್ಕಳು ಚಿಕ್ಕ ಮಕ್ಕಳನ್ನು ಅನುಕರಿಸುವರು.

ಸಾಧಾರಣವಾಗಿ ಅಸೂಯೆ ವಿಶೇಷವಾಗಿ ಕಾಣಿಸಿಕೊಳ್ಳುವುದು ಮೊದಲನೆಯ ಮಗುವಿನಲ್ಲಿಯೇ. ಮೊದಲನೆಯ ಮಗು ಎರಡು ಮೂರು ವರ್ಷಗಳ ಕಾಲ ಮನೆಯಲ್ಲಿರುವವರೆಲ್ಲರಿಗೂ ಮುದ್ದಿನ ಮಗುವಾಗಿರುವುದು. ಆದರೆ ಎರಡನೆಯ ಮಗು ಹುಟ್ಟಿದ ಮೇಲೆ, ಮನೆಯವರು ಇದುವರೆವಿಗೂ ತನ್ನ ಮೇಲಿಟ್ಟಿದ್ದ ಪ್ರೀತಿಯನ್ನು ಸಣ್ಣ ಮಗುವಿನ ಕಡೆಗೆ ತಿರುಗಿಸುವುದರಿಂದ ಸಣ್ಣ ಮಗವಿನ ಮೇಲೆ ಅದಕ್ಕೆ ಅಸೂಯೆ ಹುಟ್ಟುವುದು. ಆದುದರಿಂದಲೇ ಸಾಮಾನ್ಯವಾಗಿ ಎರಡು ಮೂರು ಮಕ್ಕಳಿರುವ ಕುಟುಂಬದಲ್ಲಿಯೇ ಮಿತಿಮೀರಿದ ಅಸೂಯೆಯು ಕಂಡುಬರುವುದು. ನಾಲ್ಕಾರು ಮಕ್ಕಳಿರುವ ದೊಡ್ಡ ಸಂಸಾರಗಳಲ್ಲಿ ಈ ಅಸೂಯೆಯು ಅಷ್ಟು ಹೆಚ್ಚಾಗಿ ಕಂಡುಬರುವುದಿಲ್ಲ.

ಇದು ದೊಡ್ಡ ಕುಟುಂಬಗಳಲ್ಲಿ ಬೆಳೆವ ಮಕ್ಕಳಿಗಿರುವ ಒಂದು ಅನುಕೂಲ.

ಕೆಲವು ವೇಳೆ ದೊಡ್ಡ ಮಕ್ಕಳ ಮೇಲೆ ಚಿಕ್ಕ ಮಕ್ಕಳ ಅಸೂಯೆಯೂ ಇರುವುದುಂಟು. ಇದಕ್ಕೆ ಬೇರೆ ಕಾರಣಗಳುಂಟು. ದೊಡ್ಡ ಮಕ್ಕಳು ಶಾಲೆಗೆ ಹೋಗಿ ತಮ್ಮ ಪಾಠಗಳನ್ನು ಚೆನ್ನಾಗಿ ಕಲಿತು ತಾಯಿತಂದೆಯವರಿಗೆ ಆನಂದವನ್ನುಂಟುಮಾಡಿದರೆ ಸಣ್ಣ ಮಗುವಿನಲ್ಲಿ ಅಸೂಯೆ ಉಂಟಾಗುವುದು. ಮಗು ತನ್ನ ಕೆಲಸಗಳನ್ನು ಕುಶಲತೆಯಿಂದ ಮಾಡಿದರೆ, ಇತರ ಮಕ್ಕಳ ಜೊತೆಯಲ್ಲಿ ಹೊಂದಿಕೊಂಡು ಚೆನ್ನಾಗಿ ಆಡುತ್ತಿದ್ದರೆ, ದೊಡ್ಡವರ ಜೊತೆಯಲ್ಲಿ ಸೇರಿ ಸಂಭಾಷಿಸಿದರೆ ಸಣ್ಣ ಮಗುವಿಗೆ ಹೊಟ್ಟೆಕಿಚ್ಚುಂಟಾಗುವುದು. ಈ ಕಾರಣದಿಂದ ಚಿಕ್ಕ ಮಗು ತನ್ನ ಅಣ್ಣನನ್ನೇ ಆಗಲೀ ಅಕ್ಕನನ್ನೇ ಅಗಲೀ ಸರಿಸಮಮಾಡಿಕೊಳ್ಳಬೇಕೆಂದು ಯತ್ನಿಸುವುದು. ಸಾಧಾರಣವಾಗಿ ಎರಡನೆಯ ಮಗುವೂ ಮತ್ತು ಕುಟುಂಬದ ಕೊನೆಯ ಮಗುವೂ ಈ ತರಹದ ವರ್ತನೆಯನ್ನು ತೋರಿಸುವುದು.

ದೊಡ್ಡ ಮಗುವಿಗೆ ಚಿಕ್ಕ ಮಗುವಿನ ಮೇಲೆ ಅಸೂಯೆ ಹುಟ್ಟಿ ಪ್ರಬಲವಾದರೆ ದೊಡ್ಡ ಮಗುವಿನ ಮಾನಸಿಕ ಬೆಳೆವಣಿಗೆಗೆ ಕುಂದಕವನ್ನು ತರುವುದು. ಆದರೆ ಚಿಕ್ಕ ಮಗುವಿಗೆ ದೊಡ್ಡ ಮಗುವಿನ ಮೇಲೆ ಉಂಟಾಗುವ ಅಸೂಯೆಯು ಸ್ಪರ್ಧೆಯ ರೂಪವನ್ನು ತಾಳಿ ಬೆಳೆವಣಿಗೆಯನ್ನು ಪ್ರೋತ್ಸಾಹಿಸುವುದು.

ಮನೆಯ ಮಕ್ಕಳ ಮೇಲೆ ಹುಟ್ಟಿದ ಅಸೂಯೆಯು ಕಾಲಕ್ರಮದಲ್ಲಿ ಮನೆಯ ಹೊರಗಿನವರ ಮೇಲಿನ ಹೊಟ್ಟೆಕಿಚ್ಚಾಗಿ ಪರಿಣಮಿಸುವುದು. ಬಾಲಕನು ಶಾಲೆಯಲ್ಲಿ ಓದುತ್ತಿರುವಾಗ ತನ್ನ ಜೊತೆಯವರಿಗೆ ಆಟದಲ್ಲಾಗಲೀ ಓದಿನಲ್ಲಾಗಲೀ ಏನಾದರೂ ಬಹುಮಾನ ದೊರೆತರೆ ಅವನಿಗೆ ಅವರ ಮೇಲೆ ಅಸೂಯೆ ಹುಟ್ಟುವುದು. ಅಸೂಯೆಯು ಬಹುವಾಗಿ ಬೆಳೆದವನಿಗೆ ಜೀವನದಲ್ಲಿ ಸುಖವಿಲ್ಲದಂತಾಗುವುದು. ಸಮಾಜದಲ್ಲಿ ಸಾಮಾನ್ಯವಾಗಿ ನಾವು ಅನುಭವಿಸುವ ವ್ಯಥೆಗಳು ನಮ್ಮ ಇಚ್ಛೆಗೆ ಕುಂದಕ ಬಂದುದರಿಂದ ಅಷ್ಟಾಗಿ ಹುಟ್ಟಿದುವುಗಳಲ್ಲ;

ಆದರೆ ತಮಗೆ ಲಭಿಸದುದು ಬೇರೆಯವರಿಗೆ ಲಭಿಸಿತಲ್ಲಾ ಎಂಬ ಮಾತ್ಸರ್ಯ ಮತ್ತು ಅತೃಪ್ತಿಗಳಿಂದ ಹೆಚ್ಚಾಗಿ ಉಂಟಾದುವು. ಆದ ಕಾರಣ ಸಣ್ಣ ಮಕ್ಕಳಲ್ಲಿಯೇ ಅಸೂಯೆಯ ಮೊಳಕೆಯನ್ನು ಬೇರು ಸಹಿತ ಕಿತ್ತುಹಾಕುವುದು ತಾಯಿತಂದೆಗಳ ಮುಖ್ಯ ಕೆಲಸ. ಅಸೂಯೆ ಹುಡುಗರಲ್ಲಿ ಬೆಳೆಯದಂತೆ ನೋಡಿಕೊಳ್ಳುವುದು ಶಿಕ್ಷಣದ ಒಂದು ಮುಖ್ಯಗುರಿ. ತಂದೆತಾಯಿಯರು ಮಕ್ಕಳ ವಿಷಯದಲ್ಲಿ ಅತಿ ಪ್ರೇಮವನ್ನಾಗಲಿ ಅತಿ ಉದಾಸೀನವನ್ನಾಗಲೀ ತೋರಿಸದೇ ಇರ ಬೇಕು. ಅತಿಯಾಗಿ ಮುದ್ದಿಸಲೂ ಕೂಡದು ಅತಿಯಾಗಿ ಶಿಕ್ಷಿಸಲೂ ಕೂಡದು. ಮಕ್ಕಳ ಪೋಷಣೆಯಲ್ಲಿ ಮಧ್ಯವರ್ತನೆಯು ಬಹಳ ಮುಖ್ಯವಾದುದು.

## ನಗು ಮತ್ತು ಅಳು

ನಗು ಮತ್ತು ಅಳು ಭಾವಗಳಲ್ಲದಿದ್ದರೂ, ಅವು ಸಂತೋಷ ಕೋಪ, ಭಯ, ಮುಂತಾದ ಭಾವಗಳೊಂದಿಗೆ ತೋರ್ಪಡಿಸಿಕೊಳ್ಳು ವುವು: ಇವು ಭಾವಗಳಿಗೆ ಹತ್ತಿರ ಸಂಬಂಧದ ವರ್ತನೆಗಳು. ಇವು ಯಾವ ರೀತಿಯಲ್ಲಿ ಹುಟ್ಟಿ ಬೆಳೆಯುವುವು ಎಂಬುದನ್ನು ಇಲ್ಲಿ ವಿವರಿಸಿದೆ.

ಹುಟ್ಟಿ ಹತ್ತು ಹದಿನೈದು ದಿವಸಗಳಾದ ಮಗು ಕೆಲವು ಸಮ ಯಗಳಲ್ಲಿ ಮುಗುಳ್ನಗೆಯನ್ನು ತೋರಿಸುವುದು ಸಾಧಾರಣವಾಗಿ ಈ ಮುಗುಳ್ನಗೆಯು ಹಾಲನ್ನು ಕುಡಿದು ತೃಪ್ತಿ ಹೊಂದಿರುವ ಸಮಯದಲ್ಲಿ ಕಾಣಬರುವುದು. ಒಂದೂವರೆ ಎರಡು ತಿಂಗಳು ವಯಸ್ಸಿನ ಮಕ್ಕಳು ತಂದೆ ತಾಯಿಗಳನ್ನು ನೋಡಿದ ಸಮಯದಲ್ಲಿ ಅಥವಾ ಅವರ ಧ್ವನಿ ಯನ್ನು ಕೇಳಿದ ಸಮಯದಲ್ಲಿ ಮುಗುಳ್ನಗೆ ನಗುವುವು. ತಂದೆ ತಾಯಿ ಯರನ್ನು ನೋಡಿ ಉಂಟಾಗುವ ನಗು ಸಂಸರ್ಗ ಜನ್ಯವಾದುದೆಂದು ಶಾಸ್ತ್ರಜ್ಞರು ಅಭಿಪ್ರಾಯಪಡುವರು. ಮೊದಲಲ್ಲಿ ದೈಹಿಕ ತೃಪ್ತಿಯೇ ಈ ಮುಗುಳ್ನಗೆಗೆ ಮೂಲಕಾರಣವಾದರೂ ಕಾಲಕ್ರಮದಲ್ಲಿ ಈ ತೃಪ್ತಿ ಯನ್ನು ಯಾರು ಉಂಟುಮಾಡುವರೋ ಅಥವಾ ಈ ತೃಪ್ತಿಪಡೆಯುವ ಸಮಯದಲ್ಲಿ ತನ್ನ ಹತ್ತಿರ ಯಾರು ಇರುವರೊ ಅವರನ್ನು ನೋಡಿ ದಾಗಲೂ ಅದೇ ಮುಗುಳ್ನಗೆಯನ್ನು ಹೊರಸೂಸುವುದು.

ಮೂರು ನಾಲ್ಕು ತಿಂಗಳು ವಯಸ್ಸಾಗಿರುವ ಮಕ್ಕಳ ಮುಂದೆ ಹೋಗಿ ದೊಡ್ಡವರು ಕೋಪ, ಭಯ, ಮುಂತಾದ ಯಾವ ಭಾವೋದ್ರೇಕಗಳನ್ನು ವ್ಯಕ್ತಪಡಿಸಿದರೂ ಆಗ ಮಗು ಮುಗುಳ್ನಗೆ ನಗುವುದು. ಅಂತಹ ಮಗುವಿನಲ್ಲಿ ಎಲ್ಲಾ ಭಾವೋದ್ರೇಕಗಳಿಗೂ ಒಂದೇ ಪ್ರತಿಕ್ರಿಯೆ ಹುಟ್ಟುವುದು. ಆದರೆ ಆರೇಳು ತಿಂಗಳು ವಯಸ್ಸಿನ ಮಕ್ಕಳ ಮುಂದೆ ನಾವು ಯಾವ ಭಾವೋದ್ರೇಕವನ್ನು ತೋರಿಸುವೆವೋ ಅದಕ್ಕನುಗುಣವಾದ ಮುಖಭಾವವನ್ನು ಅವು ಪ್ರತಿಕ್ರಿಯೆಯಾಗಿ ವ್ಯಕ್ತಪಡಿಸುವುವು. ದೊಡ್ಡವರು ಕೋಪವನ್ನು ತೋರಿಸಿದರೆ ಮಗು ಭಯವನ್ನು ವ್ಯಕ್ತಪಡಿಸುವುದು; ನಾವು ನಕ್ಕರೆ ಪ್ರತಿಯಾಗಿ ಅದು ನಗುವುದು. ಇನ್ನೂ ಸ್ವಲ್ಪ ವಯಸ್ಸಾದ ಮೇಲೆ, ಅಂದರೆ, ಹತ್ತು ಹನ್ನೆರಡು ತಿಂಗಳ ವಯಸ್ಸಿನಲ್ಲಿ ನಾವು ಕೋಪಗೊಂಡಂತೆ ನಟನೆ ಮಾಡಿದರೆ ಅದು ಮೊದಲು ಭಯವನ್ನು ವ್ಯಕ್ತಪಡಿಸಿ ಆಮೇಲೆ ಮುಗುಳ್ನಗೆ ನಗುವುದು.

ಒಂದು ತಿಂಗಳ ವಯಸ್ಸಿನ ಮಗು ಯಾವುದಾದರೂ ಬಣ್ಣದ ಸಾಮಾನುಗಳನ್ನು ನೋಡಿದರೆ ನಗುವುದು. ಇನ್ನು ಕೆಲವು ದಿವಸಗಳಲ್ಲಿ ಇಂಪಾದ ಶಬ್ದವನ್ನು ಕೇಳಿದರೆ ಅಥವಾ ತನಗೆ ಪರಿಚಯವಿರುವವರ ಮುಖವನ್ನು ನೋಡಿದರೆ ನಗುವುದು, ಮೂರು ತಿಂಗಳ ಮಗುವಿನ ಹತ್ತಿರ ಹೋಗಿ ಅದನ್ನು ಆಟವಾಡಿಸಿ ಮಾತನಾಡಿಸಿದರೆ ಅದು ನಗುವುದು. ನಾಲ್ಕು ತಿಂಗಳು ವಯಸಾದ ಮೇಲೆ ಮುಖದ ಮೇಲೆ ಒಂದು ಪರದೆಯಂತೆ ಬಟ್ಟೆಹಾಕಿ ತಕ್ಷಣ ಪರದೆಯನ್ನು ತೆಗೆದರೆ ಮಗು ಕೇಕೆ ಹಾಕಿಕೊಂಡು ನಗುವುದು; ಹಾಗೆಯೇ ಅದರ ಮುಖದ ಮೇಲೆ ಬಗ್ಗಿ " ಬೂ " ಎಂದು ಶಬ್ದಮಾಡಿದಾಗಲೂ ನಗುವುದು. ಆರು ತಿಂಗಳ ಮಗುವನ್ನು ಮೇಲಕ್ಕೆ ಸ್ವಲ್ಪ ಹಾರಿಸಿ ಕೆಳಗೆ ಬರುವಾಗ ಆತುಕೊಂಡರೆ ಅದು ಬಹಳ ನಗುವುದು. ಹೀಗೆ ಮಾಡಿದಾಗ ಮೊದಲಲ್ಲಿ ಅದು ಸ್ವಲ್ಪ ಭಯದ ಸೂಚನೆಯನ್ನು ತೋರಿಸಿ ಭಯಪಡಬೇಕಾದ್ದಿಲ್ಲವೆಂದು ಮನಗಂಡೊಡನೆಯೇ ಅದರಲ್ಲಿ ಬಹಳವಾಗಿ ನಗು ಹುಟ್ಟುತ್ತದೆ.

ಮಗು ಬೆಳೆಯುತ್ತ ಬೆಳೆಯುತ್ತ ಕ್ರಮೇಣ ನಗುವನ್ನು ಹುಟ್ಟಿಸುವ ಸನ್ನಿವೇಶಗಳೂ ಹೆಚ್ಚುವುವು. ಮೊಟ್ಟಮೊದಲು ನಗುವನ್ನು ಹುಟ್ಟಿಸುವ ಸನ್ನಿವೇಶಗಳು ದೈಹಿಕ ತೃಪ್ತಿಗೆ ಸಂಬಂಧಪಟ್ಟವು. ಇನ್ನು ಸ್ವಲ್ಪ ಕಾಲವಾದ ಮೇಲೆ ಸಲಿಗೆಯುಳ್ಳ ಜನರು ನಗುವಿಗೆ ಕಾರಣರಾಗುವರು. ಇನ್ನೂ ಕೆಲವು ತಿಂಗಳಾದ ಮೇಲೆ ಭಯ ಅಥವಾ ಆಶ್ಚರ್ಯವನ್ನುಂಟುಮಾಡುವ ಸನ್ನಿವೇಶಗಳು ನಿಜವಾಗಿಯೂ ಭಯಂಕರವಲ್ಲವೆಂದು ತಿಳಿದಾಗ ಮಗು ನಗುವನ್ನು ಪ್ರಕಟಿಸುವುದು. ವಿಚಿತ್ರವಾದ ಆಟದ ಸಾಮಾನನ್ನು ಕಂಡರೆ ಮಗುವಿಗೆ ಮೊದಲು ಭಯವುಂಟಾಗಿ ನಂತರ ನಗು ಹುಟ್ಟುವುದು ಮಗುವಿಗೆ ಒಂದೂವರೆ ಅಥವಾ ಎರಡು ವರ್ಷ ವಯಸ್ಸಾದ ಮೇಲೆ ನಗು, ಮಗುವಿನ ಕೆಲವು ಉತ್ಸಾಹಗಳನ್ನು ಸೂಚಿಸುವುದು. ಈ ಕಾಲದಲ್ಲಿ ಮಗುವಿಗೆ ತಾನು ಯಾವುದಾದರೂ ಪದಾರ್ಥಗಳಿಂದ ಶಬ್ದವನ್ನು ಮಾಡಿದಾಗ ಅಥವಾ ಮರಳಿನಿಂದಲೋ ಮರದ ಕರಣಗಳಿಂದಲೋ ಮನೆಯನ್ನು ಕಟ್ಟಿದಾಗ ಉಂಟಾದ ಉತ್ಸಾಹ ನಗುವಾಗಿ ಪರಿಣಮಿಸುವುದು. ಇತರ ಮಕ್ಕಳೊಡನೆ ಆಟವಾಡುತ್ತಿರುವಾಗ ಒಂದು ಮಗು ಮತ್ತೊಂದು ಮಗುವನ್ನು ಹಿಡಿಯುವುದಕ್ಕಾಗಿ ಓಡಲು ಆ ಮಗು ಸಿಕ್ಕದೆ ತಪ್ಪಿಸಿಕೊಂಡರೆ ಈ ವಿನೋದವು ಇಬ್ಬರಿಗೂ ನಗುವನ್ನುಂಟುಮಾಡುವುದು. ಈ ವಯಸ್ಸಿನಲ್ಲಿ ಓಟಗಳೇ ಹೆಚ್ಚಾಗಿ ನಗುವನ್ನುಂಟುಮಾಡುವ ಸನ್ನಿವೇಶಗಳು.

ಸಣ್ಣ ಮಕ್ಕಳು ಕೋಪ ಭಯ ಮುಂತಾದ ಭಾವಗಳನ್ನು ವ್ಯಕ್ತಪಡಿಸುವಾಗ ದೇಹವೆಲ್ಲವನ್ನೂ ಹೇಗೆ ಉಪಯೋಗಿಸುವರೋ ಹಾಗೆಯೇ ಹೆಚ್ಚಾಗಿ ನಗಬೇಕಾಗಿರುವ ಸಂದರ್ಭಗಳಲ್ಲಿ ದೇಹಾದ್ಯಂತವನ್ನೂ ಉಪಯೋಗಿಸುವರು. ದೊಡ್ಡವರಲ್ಲಿಯೂ ಕೆಲವು ಸಮಯಗಳಲ್ಲಿ ಇದೇ ವಿಧವಾದ ವರ್ತನೆಯು ಕಾಣಬರುವುದು, ಹಿಡಿಯಲಾರದಷ್ಟು ನಗು ಬಂದಾಗ ದೊಡ್ಡವರು ದೇಹವೆಲ್ಲವನ್ನೂ ಕುಲುಕಿ ಹೊಟ್ಟೆಯನ್ನು ಹಿಡಿದುಕೊಂಡು ನಗುವರು.

ಮೂರು ನಾಲ್ಕು ವರ್ಷಗಳ ಮಗು ತಾನು ಮಾಡಿದ ತಪ್ಪು

ಗಳನ್ನು ತಿಳಿದು ತಾನೇ ನಗಲು ಪ್ರಾರಂಭಿಸುವುದು. ಇದು ಮಕ್ಕಳ ಬೆಳೆವಣಿಗೆಯಲ್ಲಿ ಒಂದು ಮುಖ್ಯವಾದ ಒಳ್ಳೆಯ ಅಂಶ. ಸೋಡನ್ನೋ ನಿರಾಶೆಯನ್ನೋ ಮನಸ್ಸಿಗೆ ಹಚ್ಚಿಕೊಳ್ಳದೆ ಅದನ್ನೇ ಪರಿಹಾಸ್ಯ ಕರವಾಗಿ ಎಣಿಸಿ ನಗುವುದು ಒಂದು ರಕ್ಷಣೆಯ ಉಪಾಯ. ಮಕ್ಕಳಲ್ಲಿ ಈ ವಿನೋದದ ಮನೋಭಾವವು ಬೆಳೆಯುವುದಕ್ಕೆ ಚಿಕ್ಕಂದಿನಿಂದಲೇ ಅವರಿಗೆ ಸಹಾಯ ಮಾಡಬೇಕು. ಹಾಗೆ ಮಾಡದಿದ್ದರೆ ಕಷ್ಟ-ನಿಷ್ಠುರ ಗಳನ್ನು ಸೋಡು-ನಿರಾಕರಣೆಗಳನ್ನೂ ಬಹುವಾಗಿ ಮನಸ್ಸಿಗೆ ಹಚ್ಚಿ ಕೊಂಡು ಕೊರಗುವ ಮನೋವೃತ್ತಿಯು ನೆಲಸುವುದು ಅವರು ನಿರಾಶಾವಾದಿಗಳಾಗುವರು.

ಮಗು ಹುಟ್ಟಿದ ಕೂಡಲೇ ಅಳುವುದಕ್ಕೆ ಪ್ರಾರಂಭಿಸುವುದು "ನಾನು ಭೂಲೋಕದಲ್ಲಿ ಹುಟ್ಟಿದೆನಲ್ಲಾ" ಎಂಬ ಪರಿತಾಪವನ್ನು ಮಗು ಈ ಮೂಲಕ ಸೂಚಿಸುವುದೆಂದು ಹೇಳುವುದುಂಟು. ಆದರೆ ಮಗು ಹುಟ್ಟಿದ ಕೂಡಲೇ ಅದರ ದೇಹಾದ್ಯಂತದಲ್ಲಿ ಉಂಟಾಗುವ ಚಲನೆಯೇ ಈ ಅಳುವಿಗೆ ಕಾರಣ. ಮಗು ಹುಟ್ಟಿದ ಕೂಡಲೇ ಶ್ವಾಸವನ್ನು ತೆಗೆದುಕೊಂಡಾಗ ಉಂಟಾಗುವ ಶಬ್ದವೇ ಅಳು ಮೊಟ್ಟಮೊದಲು ಅಳು ಹುಟ್ಟುವುದು ಶ್ವಾಸಕೋಶ, ಕರುಳು, ಹೊಟ್ಟೆ ಮೊದಲಾದ ಒಳಗಿನ ಅವಯವಗಳ ಅಸ್ವಸ್ಥತೆಯ ದೆಸೆಯಿಂದ. ಕಾಲಕ್ರಮದಲ್ಲಿ ಇತರ ಅವಯವಗಳಲ್ಲಿ ಹುಟ್ಟಿದ ನೋವು ದೇಹಾ ಲಸ್ಯ. ನಿದ್ರಾಭಂಗ, ಹಸಿವು ಇವು ಮಗುವಿನ ಅಳುವಿಗೆ ಕಾರಣಗಳಾ ಗುವುವು. ಈ ಹಸಿವನ್ನು ನೋವನ್ನೂ ನಿವಾರಣೆ ಮಾಡಿದರೆ ಅಳು ನಿಲ್ಲುವುದು. ಅಳುತ್ತಿರುವ ಮಗುವನ್ನು ಎತ್ತಿಕೊಂಡ ಕೂಡಲೆ ಮಗು ಅಳುವನ್ನು ನಿಲ್ಲಿಸುವುದು. ಮಗುವಿಗೆ ಆರೆಂಟು ತಿಂಗಳಾದಮೇಲೆ ಹೊರ ಗಿನ ಕಾರಣಗಳಿಂದಲೂ ಅಳುವುಂಟಾಗುವುದು. ಹೆದರಿಕೆಯುಂಟಾ ದಾಗ ಅಥವಾ ಏಟು ತಗುಲಿದಾಗ ಅದು ಅಳುವುದು. ತನ್ನ ಇಷ್ಟಕ್ಕೆ ಅಡಚಣೆಯುಂಟಾದಾಗ ಕೋಪ, ಅದರ ಜೊತೆಯಲ್ಲಿ ಅಳುವೂ ಹುಟ್ಟುವುದು. ಮೂರು ನಾಲ್ಕು ವರ್ಷದ ಮಕ್ಕಳಲ್ಲಿ ದೇಹಾಲಸ್ಯ ಕ್ಕಿಂತಲೂ ಕೋಪವೇ ಹೆಚ್ಚಾಗಿ ಅವರ ಅಳುವಿಗೆ ಕಾರಣವಾಗುವುದು.

ಅಳುವುದರ ಮೂಲಕ ಮಗು ತನ್ನ ಆಸೆಗಳನ್ನು ಪೂರೈಸಿ ಕೊಳ್ಳಲು ಪ್ರಯತ್ನಪಡುವುದು. ಆಗ ಅಳುವುದು ಕಷ್ಟ ನಿವಾರಣೆಗಾಗಿ ಅಲ್ಲ, ತನ್ನ ಆಸೆಯ ಪರಿತೃಪ್ತಿಗಾಗಿ. ಮಗು ದೇಹದ ಅಸ್ವಸ್ಥತೆಯಿಂದ ಅತ್ತಾಗ ತಾಯಿ ತಂದೆಗಳು ಅವರ ಅಸ್ವಸ್ಥತೆಯನ್ನು ನಿವಾರಣೆಮಾಡಿ ಮಗುವನ್ನು ಸಮಾಧಾನಪಡಿಸುವುದು ಉಚಿತ; ಮಗು ತನ್ನ ಆಸೆಗಳನ್ನು ತೃಪ್ತಿಪಡಿಸಿಕೊಳ್ಳಲು ಅತ್ತಾಗ ತಂದೆತಾಯಿಯರು ಮಗುವನ್ನು ನಿರ್ಲಕ್ಷ್ಯದಿಂದ ಕಾಣಬೇಕು. ಇಲ್ಲದಿದ್ದರೆ ತನಗೆ ಏನುಬೇಕಾದರೂ ಮಗು ಅತ್ತು ಕಾಡುವುದು. ಈ ರೀತಿಯ ವರ್ತನೆಯು ಮಗುವಿನ ಬೆಳೆವಣಿಗೆಗೆ ಒಳ್ಳೆಯದಲ್ಲ. ದೊಡ್ಡವರಾದ ಮೇಲೂ ಅವರು ತಮಗೆ ಒದಗಿದ ಕಷ್ಟಗಳನ್ನು ತಾವೇ ಬುದ್ಧಿವಂತಿಕೆಯಿಂದ ಶ್ರಮಪಟ್ಟು ಬಗೆಹರಿಸಿಕೊಳ್ಳದೆ ಇತರರ ಮುಂದೆ ಗೋಳಾಡಿ ಅವರ ಸಹಾಯ ಪಡೆಯಲು ಯತ್ನಿಸುವರು.

## ಭಾವ ಶಿಕ್ಷಣ

ಕ್ರೋಧಾದ್ಭವತಿ ಸಮ್ಮೋಹಃ ಸಮ್ಮೋಹಾತ್ ಸ್ಮೃತಿವಿಭ್ರಮಃ
ಸ್ಮೃತಿಭ್ರಂಶಾದ್ಬುದ್ಧಿನಾಶೋ ಬುದ್ಧಿನಾಶಾತ್ ಪ್ರಣಶ್ಯತಿ ||
ರಾಗದ್ವೇಷ ವಿಯುಕ್ತೈಸ್ತು ವಿಷಯಾನಿಂದ್ರಿಯೈಶ್ಚರನ್ ।
ಆತ್ಮವಶ್ಯೈರ್ವಿಧೇಯಾತ್ಮಾ ಪ್ರಸಾದಮಧಿಗಚ್ಛತಿ ||

(ಭಗವದ್ಗೀತೆ)

ಮನುಷ್ಯನಿಗೆ ತೀವ್ರ ವಿಷಯಾಸಕ್ತಿಯುಂಟಾದಾಗ ಕಾಮಕ್ರೋಧಾದಿ ಭಾವೋದ್ರೇಕಗಳಿಂದ ಅವನಿಗೆ ಆತ್ಮ ಸಂಯಮವಿಲ್ಲದೆ ಹೋಗುವುದು. ಇಚ್ಛೆಯು ಪ್ರತಿಹತವಾದರೆ ಆಗ ಕ್ರೋಧವಾಗುವುದು. ಈ ಕ್ರೋಧವು ಬುದ್ಧಿಯನ್ನು ಕೆಡಿಸುವುದು. ವ್ಯಕ್ತಿತ್ವವು ಅವ್ಯವಸ್ಥೆಯನ್ನು ಹೊಂದುವುದು. ಮನುಷ್ಯನು ತನ್ನ ರಾಗದ್ವೇಷಗಳನ್ನು ನಿಗ್ರಹಿಸಿದರೆ ಆಗ ಮನಸ್ಸು ತನ್ನ ಸ್ವಾಧೀನವಾಗುವುದು.

ಮನೋಭಾವಗಳನ್ನು ಸ್ವಾಧೀನದಲ್ಲಿಟ್ಟುಕೊಳ್ಳುವುದನ್ನು ಭಾವ ಶಿಕ್ಷಣವೆಂದು ಕರೆಯಬಹುದು. ಇದುವರೆವಿಗೂ ವಿವರಿಸಿದ ಹಾಗೆ

ಮಗು ಬೆಳೆಯುತ್ತ ಬೆಳೆಯುತ್ತ ಭಯ ಕ್ರೋಧ ಮುಂತಾದ ಭಾವಗಳು ತನ್ನ ಆವರಣದಲ್ಲಿರುವ ಮನುಷ್ಯರ ಮೇಲೆಯೂ, ವಸ್ತುಗಳ ಮೇಲೆಯೂ ಉದ್ರಿಕ್ತವಾಗುವುದು. ಈ ಭಾವಾವೇಶಗಳನ್ನು ಮನುಷ್ಯನು ಉಚಿತ ಮಾರ್ಗದಲ್ಲಿ ಉಪಯೋಗಿಸಿದರೆ ಅವು ಅವನಿಗೆ ಹಿತಕಾರಿಗಳಾಗಿಯೂ, ಇಲ್ಲದಿದ್ದರೆ ಹಾನಿಕರವಾಗಿಯೂ ಪರಿಣಮಿಸುವುವು ಈ ಮನೋಭಾವಗಳಿಂದ ಹುಟ್ಟುವ ಶಕ್ತಿಗಳು ನಮ್ಮ ವರ್ತನೆಗೆ ಬಹಳ ಅನುಕೂಲವಾದುವು; ಇವು ಜೀವನದ ಕಾರ್ಯದಲ್ಲಿ ಆಸಕ್ತಿಯನ್ನು ಹುಟ್ಟಿಸಿ ಜೀವನವನ್ನು ರಸಭರಿತವನ್ನಾಗಿ ಮಾಡುವುವು. ಆದರೆ ಇವುಗಳನ್ನು ಒಂದು ಹತೋಟಿಯಲ್ಲಿಟ್ಟಿರಬೇಕು. ನಮ್ಮ ಭಾವಗಳು ಅತಿ ತೀವ್ರವಾದರೆ, ಗೀತೆಯಲ್ಲಿ ಹೇಳಿರುವಂತೆ, ಬುದ್ಧಿ ನಾಶವಾಗಿ ನಮ್ಮ ಪ್ರತಿಕ್ರಿಯೆಗಳ ಮೇಲೆ ನಮಗೆ ಸ್ವಾಧೀನವಿಲ್ಲದೆ ಹೋಗುವುದು. ದಮನ ಶಕ್ತಿಯು ಚಿಕ್ಕ ವಯಸ್ಸಿನಿಂದಲೂ ಬೆಳೆಯಬೇಕು. ಮಕ್ಕಳಿಗೆ ತಮ್ಮ ಭಾವಗಳ ಮೇಲೆ ಸ್ವಾಧೀನವುಂಟಾಗಬೇಕಾದರೆ ತಂದೆತಾಯಿಗಳು ಅವರಿಗೆ ಚಿಕ್ಕಂದಿನಿಂದಲೂ ತಕ್ಕ ಆವರಣವನ್ನು ಕಲ್ಪಿಸಿಕೊಡಬೇಕು. ಇತ್ತೀಚೆಗೆ ಸ್ಪ್ರಯರ್ ಎಂಬ ಮನಶ್ಶಾಸ್ತ್ರಜ್ಞನು ಮಕ್ಕಳಿಗೆ ಭಾವ ಶಿಕ್ಷಣ ಬಹಳ ಮುಖ್ಯವಾದುದೆಂದು ಬೋಧಿಸಿರುವನು. ಮನಶ್ಶಾಂತಿಯಿಲ್ಲದಿರುವ ಅಥವಾ ಉನ್ಮತ್ತರಾದ ಮನುಷ್ಯರನ್ನು ಪರೀಕ್ಷಿಸಿದವರಲ್ಲಿ ಅವರ ದುರವಸ್ಥೆಗೆ ಅವರು ಸಣ್ಣ ಮಕ್ಕಳಾಗಿದ್ದಾಗ ಭಾವಶಿಕ್ಷಣವು ಹದಗೆಟ್ಟುದೇ ಕಾರಣವೆಂದು ತಿಳಿಯಬಂದಿದೆ. ದೊಡ್ಡವರಾದಮೇಲೆ ಹುಟ್ಟಬೇಕಾದ ಮನಶ್ಶಾಂತಿಗೆ ಈ ಸಣ್ಣ ವಯಸ್ಸಿನಲ್ಲಿ ದೊರಕುವ ಭಾವಶಿಕ್ಷಣವೇ ಆಸ್ತಿಭಾರವಾಗಿರುವುದು. ಬಹಳ ತೊಡಕಾದ ಮತ್ತು ಅಗಾಧವಾದ ಈ ಭಾವಶಿಕ್ಷಣದ ವಿಷಯವಾಗಿ ಇಲ್ಲಿ ನಾಲ್ಕಾರು ಮಾತುಗಳನ್ನು ಮಾತ್ರ ಹೇಳಲು ಸಾಧ್ಯ.

ಸಾಧಾರಣವಾಗಿ ಮಕ್ಕಳನ್ನು ಆಟದ ಬೊಂಬೆಗಳಂತೆ ಭಾವಿಸುತ್ತೇವೆ. ನಮಗೆ ಸಂತೋಷವಾಗಿರುವಾಗ ಅವರನ್ನು ಹತ್ತಿರ ಕರೆದು ಮುದ್ದಾಡುತ್ತೇವೆ; ನಾವು ಕೆಲಸಗಳಲ್ಲಿ ತೊಡಗಿರುವಾಗ ಅಥವಾ ನಮಗೆ ಅಸಮಾಧಾನವುಂಟಾಗಿರುವಾಗ ಅವರನ್ನು ನಿರ್ಲಕ್ಷಿಸಿ ದೂರ

ಮಾಡುತ್ತೇವೆ. ಹೀಗೆ ಮಕ್ಕಳ ಜೊತೆಯಲ್ಲಿ ನಾವು ಯಾವ ರೀತಿ ವರ್ತಿಸುವೆವೆಂಬುದು ನಮ್ಮ ಆ ಕ್ಷಣದ ಮನೋಭಾವಗಳನ್ನು ಅನುಸರಿಸಿರುತ್ತದೆ. ನಮ್ಮ ಈ ವರ್ತನೆಯು ಮಕ್ಕಳ ಮನಸ್ಸಿನ ಮೇಲೆ ಒಂದು ಕೆಟ್ಟ ಪರಿಣಾಮವನ್ನುಂಟುಮಾಡುವುದು. ಅವರಿಗೆ ನಮ್ಮನ್ನು ಕಂಡರೆ ಹೆದರಿಕೆ ಉಂಟಾಗುವುದು. ನಾವು ಅವರನ್ನು ಆದರಿಸಿ ಕರೆಯುತ್ತೇವೆಯೋ ಅಥವಾ ಕೋಪಿಸಿಕೊಂಡು ದೂರಮಾಡುತ್ತೇವೆಯೋ ಎಂಬ ಸಂಶಯವು ಅವರಲ್ಲಿ ಹುಟ್ಟುವುದು. ಈ ಸಂಶಯದಿಂದ ಅವರ ಮನಸ್ಸಿನಲ್ಲಿ ಒಂದು ಒಳತೋಟಿ ಉಂಟಾಗುವುದು. ಇಂತಹ ಒಳತೋಟಿಯು ಸದಾ ಮಕ್ಕಳ ಮನಸ್ಸನ್ನಾಕ್ರಮಿಸಿದರೆ ಅದು ಅವರ ವ್ಯಕ್ತಿತ್ವಕ್ಕೆ ಕುಂದುತರುವುದು. ಆದುದರಿಂದ ಅವರಿಗೂ ಆತ್ಮಗೌರವ, ಕೋಪತಾಪಗಳಿವೆ ಎಂಬುದನ್ನು ಅಲಕ್ಷಿಸಿ ವರ್ತಿಸಬಾರದು. ಅವರ ವ್ಯಕ್ತಿತ್ವದ ವಿಕಸನಕ್ಕೆ ತಕ್ಕ ಅವಕಾಶಗಳನ್ನೊದಗಿಸುವುದು ನಮ್ಮ ಧರ್ಮ.

ಅಮೆರಿಕದೇಶದ ಒಂದು ಶಿಶುವಿಹಾರದಲ್ಲಿ ಮಧ್ಯಾಹ್ನದ ಹೊತ್ತಿನಲ್ಲಿ ಮಕ್ಕಳ ತಾಯಿಯರೇ ಒಂದು ಮಕ್ಕಳನ್ನು ನೋಡಿಕೊಳ್ಳುವರು. ಇಂತಹ ಶಾಲೆಗೆ ಒಬ್ಬ ಮನಶ್ಶಾಸ್ತ್ರಜ್ಞನು ಮಕ್ಕಳ ಬುದ್ಧಿಯನ್ನಳೆಯಲು ಹೋದನು. ಆ ಸಮಯದಲ್ಲಿ ಒಬ್ಬೊಬ್ಬ ತಾಯಿಯು ಮಕ್ಕಳ ಜೊತೆಯಲ್ಲಿ ಯಾವರೀತಿ ವರ್ತಿಸುವಳೆಂಬುದನ್ನು ನೋಡಿದನು. ಒಂದೇ ಸನ್ನಿವೇಶದಲ್ಲಿ ಬೇರೆ ಬೇರೆ ತಾಯಂದಿರು ಬೇರೆ ಬೇರೆ ರೀತಿಗಳಲ್ಲಿ ವರ್ತಿಸುವರೆಂಬುದು ಕಂಡು ಬಂದಿತು. ಉದಾಹರಣೆಗೆ—ಮಗು ಅನುಚಿತವಾದ ಆಟವನ್ನು ಆಡುತ್ತಿರುವಾಗ ಒಬ್ಬ ತಾಯಿಯು ಆ ಮಗುವನ್ನು ಲಕ್ಷಿಸದೆ ಆಟ ಆಡಲೆಂದು ಬಿಟ್ಟುಬಿಟ್ಟಳು. ಇನ್ನೊಬ್ಬಾಕೆಯು ಹುಡುಗನನ್ನು ಒಯ್ದು ಆ ಕೆಲಸವನ್ನು ಮಾಡಬೇಡವೆಂದು ದೂರ ತಳ್ಳಿದಳು. ಮತ್ತೊಬ್ಬತಾಯಿಯು ತನ್ನ ಮಗುವನ್ನು ಹೀಯಾಳಿಸಿ, ಅವನ ಸಂಗಡಿಗರನ್ನು ಬಹಳ ಒಳ್ಳೆಯವರೆಂದು ಹೊಗಳಿದಳು. ಇನ್ನೊಬ್ಬಳು ಆ ರೀತಿ ಆಡಬಾರದೆಂದು ಮಗುವನ್ನು ಗದರಿಸಿಬಿಟ್ಟಳು; ಆದರೆ ಅದು ಆಡಿತೋ ಬಿಟ್ಟಿತೋ ಎನ್ನುವ

ದನ್ನು ಗಮನಿಸಲಿಲ್ಲ. ಹೀಗೆ ತಾಯಿಯರು ಒಬ್ಬೊಬ್ಬರೂ ಒಂದೊಂದು ವಿಧವಾಗಿ ವರ್ತಿಸುವುದು ಮಕ್ಕಳಲ್ಲಿರುವ ವಿವಿಧ ವ್ಯಕ್ತಿತ್ವಗಳಿಗೆ ಒಂದು ಕಾರಣ. ಮಗು ಹಟಮಾಡುತ್ತ ಅಳುತ್ತಿದ್ದರೆ ಕೆಲವು ತಂದೆ ತಾಯಿಗಳು ಹಟಮಾಡಿದರೂ ಚಿಂತೆಯಿಲ್ಲ ಎಂದು ಸುಮ್ಮನಿರುವರು. ಆದರೆ ಮತ್ತೆ ಕೆಲವರು ಹಟಮಾಡುವ ಮಗುವಿಗೆ ಯಾವುದು ಬೇಕಾಗಿದೆಯೋ ಅದನ್ನು ಕೊಟ್ಟು ಸಮಾಧಾನಪಡಿಸುವರು. ಕೆಲವರು ತಮ್ಮ ಮಕ್ಕಳನ್ನು ಬೇರೆಯವರ ಎದುರಿಗೆ ಬಹುವಾಗಿ ಹೊಗಳುವರು; ಮತ್ತೆ ಕೆಲವರು ನಿಂದಿಸುವರು. ಕೆಲವರು "ಗೊಗ್ಗಯ್ಯ; ಗುಮ್ಮ" ಎಂದು ಹೆದರಿಸುವರು. ಈ ರೀತಿಯ ವರ್ತನೆಗಳು ಮಕ್ಕಳಲ್ಲಿ ದುಷ್ಪರಿಣಾಮವನ್ನುಂಟುಮಾಡುವುವು. ತಂದೆತಾಯಿಗಳು ಮಕ್ಕಳೊಡನೆ ಯಾವಾಗಲೂ ಏಕರೀತಿಯಿಂದ ವರ್ತಿಸಬೇಕು; ಮಕ್ಕಳ ವಿಚಾರದಲ್ಲಿ ಒಂದು ಸಮಯದಲ್ಲಿ ಅತಿ ಕಠಿಣವಾಗಿಯೂ, ಮತ್ತೊಂದು ಸಮಯದಲ್ಲಿ ಅತಿ ಸರಸವಾಗಿಯೂ ಇದ್ದರೆ ಮಕ್ಕಳ ಬೆಳೆವಣಿಗೆಯು ಎಂದಿಗೂ ಕ್ರಮಬದ್ಧವಾಗಲಾರದು.

ಮನೆಯಲ್ಲಿಯೇ ಬೆಳೆದ ಮಕ್ಕಳು ಊಟಮಾಡುವಾಗ, ಮಲಮೂತ್ರ ವಿಸರ್ಜನೆ ಮಾಡುವಾಗ, ಮುಖತೊಳೆಯುವಾಗ ಸ್ನಾನ ಮಾಡುವಾಗ, ಮಲಗಿಕೊಳ್ಳುವಾಗ ಸಾಧಾರಣವಾಗಿ ಅಳುವರು. ಆದರೆ ಅದೇ ಸನ್ನಿವೇಶಗಳಲ್ಲಿ ಶಿಶು ವಿಹಾರಗಳಲ್ಲಿ ಬೆಳೆದ ಮಕ್ಕಳು ಅಳುವುದಿಲ್ಲ. ಮನೆಯಲ್ಲಿ ಮಕ್ಕಳನ್ನು ನೋಡಿಕೊಳ್ಳುವುದಕ್ಕೂ ಶಿಶುವಿಹಾರಗಳಲ್ಲಿ ಮಕ್ಕಳನ್ನು ನೋಡಿಕೊಳ್ಳುವದಕ್ಕೂ ಇರುವ ವ್ಯತ್ಯಾಸವೇ ಇದಕ್ಕೆ ಕಾರಣ. ಶಿಶು ವಿಹಾರದಲ್ಲಿ ಉಪಾಧ್ಯಾಯಿನಿಯರು ಮಕ್ಕಳಿಗೆ ಊಟ ಮಾಡಿಸುವಾಗ, ಮುಖ ತೊಳೆಯುವಾಗ, ಬಟ್ಟೆ ಹಾಕುವಾಗ ಪ್ರತಿ ದಿನವೂ ಒಂದೇ ಕ್ರಮಬದ್ಧವಾದ ರೀತಿಯಲ್ಲಿ ನಡೆದುಕೊಳ್ಳುವರು. ಆದಕಾರಣ ಮಕ್ಕಳು ಈ ಕೆಲಸಗಳನ್ನು ಸರಾಗವಾಗಿ ಮಾಡುವರು ಸಾಧಾರಣವಾಗಿ ಮನೆಗಳಲ್ಲಿ ದೊಡ್ಡವರು ಈ ರೀತಿ ಒಂದೇ ಪ್ರಕಾರ ಕ್ರಮಬದ್ಧವಾಗಿ ನಡೆಯುವುದು ಅಸಂಭವ. ಕೆಲವು ಸಮಯಗಳಲ್ಲಿ ಈ ಕೆಲಸಗಳನ್ನು ಆತುರದಿಂದ ಮಾಡಿ

ಸುವರು; ಕೆಲವು ಸಮಯಗಳಲ್ಲಿ ನಿಧಾನವಾದರೂ ಸುಮ್ಮನಿರುವರು. ಕೆಲವು ವೇಳೆ ಬೇಸರ ಪಡುವರು; ಕೆಲವು ವೇಳೆ ತಮ್ಮ ಮನಸ್ಸಿನ ಕೋಪವನ್ನು ಮಕ್ಕಳ ಮೇಲೆ ತೋರಿಸುವರು. ಹೀಗೆ ಮಾಡುವುದರಿಂದ ಎಲ್ಲಾ ಸಮಯದಲ್ಲಿಯೂ ಒಂದೇ ಸಮನಾಗಿ ವರ್ತಿಸುವುದಿಲ್ಲ. ಅನೇಕ ವೇಳೆ ಮಕ್ಕಳು ತಮ್ಮ ಈ ಕಾರ್ಯಗಳನ್ನು ದೊಡ್ಡವರ ಪ್ರೀತಿಯನ್ನು ಗಳಿಸುವುದಕ್ಕೋಸ್ಕರ ಮಾಡುವರು. ಇದು ತಂದೆ ತಾಯಿಯರ ಅಸಮವರ್ತನೆಯ ಒಂದು ಪರಿಣಾಮ.

ನಮ್ಮಿಂದ ಉಪಚಾರವನ್ನು ನಿರೀಕ್ಷಿಸದೆ ಮಕ್ಕಳು ತಮ್ಮ ಕೆಲಸಗಳನ್ನು ಮಾಡುವುದನ್ನು ಕಲಿಯಬೇಕು. ಮಕ್ಕಳು ಬೆಳೆಯುತ್ತ ಬೆಳೆಯುತ್ತ ಪರಾಧೀನದಿಂದ ಬಿಡುಗಡೆಹೊಂದಿ ಸ್ವತಂತ್ರರಾಗಬೇಕೆಂಬುದು ಮಕ್ಕಳ ಶಿಕ್ಷಣದ ಮುಖ್ಯ ಧ್ಯೇಯ. ಅವರು ಸಣ್ಣವರಾಗಿರುವಾಗ, ಮುಖ್ಯವಾಗಿ ಮೊದಲನೆಯ ಮೂರು ನಾಲ್ಕು ವರ್ಷಗಳಲ್ಲಿ ತಮ್ಮ ತಾಯಿ ತಂದೆಗಳ ಅಧೀನದಲ್ಲಿಯೇ ಇರುವರು. ಮಕ್ಕಳಿಗೆ ಅತ್ತಿತ್ತ ಓಡಾಡುವುದಕ್ಕೆ ತಮ್ಮ ಇಚ್ಛೆಗಳನ್ನು ಪೂರ್ತಿಗೊಳಿಸಿಕೊಳ್ಳುವುದಕ್ಕೆ ದೊಡ್ಡವರ ಬೆಂಬಲವಿಲ್ಲದೆ ಆಗುವುದಿಲ್ಲ. ಇಂತಹ ಮಕ್ಕಳು ತಾವೇ ತಮ್ಮ ಕೆಲಸಗಳನ್ನು ಮಾಡಿಕೊಂಡು ಸ್ವತಂತ್ರರಾಗಿ ಬೆಳೆಯುವಂತೆ ದೊಡ್ಡವರು ಅವರಿಗೆ ಸಹಾಯಮಾಡಬೇಕು.

ಪ್ರಾರಂಭದಿಂದಲೂ ಮಕ್ಕಳು ಸ್ವತಂತ್ರರಾಗಿರಲು ಪ್ರಯತ್ನಪಡುವರು ಅಂಬೆಗಾಲಿಡುವ ಸಮಯದಲ್ಲಿ ಕೂಡ ಮಕ್ಕಳು ಮನೆಯಲ್ಲೆಲ್ಲ ತಮ್ಮಷ್ಟಕ್ಕೆ ತಾವೇ ಓಡಾಡಲು ಪ್ರಯತ್ನಿಸುವರು. ಇನ್ನು ಸ್ವಲ್ಪ ಬೆಳೆದ ಮೇಲೆ ತಿಂಡಿ ತೀರ್ಥಗಳನ್ನು ತಾವೇ ತೆಗೆದುಕೊಳ್ಳಬೇಕೆಂದು ಹಟಹಿಡಿಯುವರು. ಹೀಗೆ ಮಕ್ಕಳು ಸ್ವಾತಂತ್ರ್ಯವನ್ನು ಕೋರುವುದು ಸ್ವಾಭಾವಿಕ. ಆದರೆ ಅವರ ಈ ರೀತಿಯ ವರ್ತನೆಯು ತಾಯಂದಿರಿಗೆ ಸ್ವಲ್ಪ ತೊಂದರೆಯನ್ನೂ ಸ್ವಲ್ಪ ಕಾಲಹರಣವನ್ನೂ ಉಂಟುಮಾಡುವುದು. ತಾಯಂದಿರು ಮಕ್ಕಳಿಗೆ ಸ್ವಾತಂತ್ರ್ಯದಿಂದ ತಮ್ಮ ಕೆಲಸಗಳನ್ನು ಮಾಡಿಕೊಳ್ಳಲು ಸಹಾಯಮಾಡಿ ಮುಂದೆ ಅವರಿಗೂ ತಮಗೂ ಅನುಕೂಲವಾಗುವ ರೀತಿಯಲ್ಲಿ ವರ್ತಿಸಬೇಕು.

ಕೆಲವು ತಾಯಂದಿರಿಗೆ ತಮ್ಮ ಮಕ್ಕಳು ಪ್ರತಿಯೊಂದು ಕೆಲಸಕ್ಕೂ ತಮ್ಮ ಸಹಾಯವನ್ನು ಕೋರದಿದ್ದರೆ ಸಮಾಧಾನವಿಲ್ಲ. ಆದರೆ ಇದು ಮಕ್ಕಳಿಗೆ ಬಹಳ ಕೆಟ್ಟುದು. ಈ ರೀತಿ ಬೆಳೆದಿರುವ ಮಕ್ಕಳು ದೊಡ್ಡ ವರಾದರೂ ಪರಾಧೀನರಾಗಿಯೇ ಇರಲು ಆಶಿಸುವರು. ಮನೆಯಲ್ಲಿ ದೊರಕುವ ಸಹಾನುಭೂತಿ ಸಹಾಯಗಳನ್ನು ಹೊರಗೂ ಅಪೇಕ್ಷಿಸಿ ಅವು ದೊರಕದಿರಲು ಹತಾಶರಾಗುವರು. ಕೆಲವು ಮಂದಿ ವಯಸ್ಕರು ನಿರುದ್ಯೋಗಿಗಳಾಗಿಯೂ ತಮ್ಮ ಜೀವನದಲ್ಲಿ ನಿರುತ್ಸಾಹಿಗಳಾಗಿಯೂ ಇರಲು ಈ ರೀತಿ ಚಿಕ್ಕಂದಿನಿಂದಲೂ ಪರಾಧೀನತೆಯಲ್ಲಿ ಬೆಳೆದಿರು ವುದೇ ಮುಖ್ಯಕಾರಣ. ಅಲ್ಲದೆ ಈ ಪರಾಧೀನತೆಯು ಅವರ ದಾಂಪತ್ಯ ಜೀವನದಲ್ಲಿಯೂ ಒಂದು ದುಷ್ಪರಿಣಾಮವನ್ನುಂಟುಮಾಡುವುದು. ತಾಯಿಗೆ ಅಧೀನನಾಗಿರುವ ಮಗನು ತನ್ನ ಹೆಂಡತಿಯ ಮೇಲೆ ಅಷ್ಟೊಂದು ಪ್ರೀತಿ ವಿಶ್ವಾಸಗಳನ್ನು ಸಾಮಾನ್ಯವಾಗಿ ತೋರಿಸ ಲಾರನು; ಹಾಗೆಯೇ ತಂದೆಯಲ್ಲಿ ಹೆಚ್ಚು ಪ್ರೀತಿಯಿರುವ ಮಗಳಿಗೆ ಕೈಹಿಡಿದ ಗಂಡನಲ್ಲಿ ಸಾಮಾನ್ಯವಾಗಿ ಹೆಚ್ಚು ಪ್ರೀತಿ ವಿಶ್ವಾಸಗಳಿರ ಲಾರವು. ಇದರಿಂದ ಗೃಹಕೃತ್ಯದಲ್ಲಿ ಅನೇಕ ಕಿರುಕುಳವುಂಟಾಗು ವುದು. ಆದುದರಿಂದ ತಂದೆ ತಾಯಿಯರು ಮಕ್ಕಳು ಚಿಕ್ಕಂದಿನಿಂ ದಲೂ, ಕೈಲಾದಷ್ಟು ಸ್ವತಂತ್ರರಾಗಿರುವಂತೆ ಅವರಿಗೆ ಅವಕಾಶ ಕೊಡಬೇಕು.

ಮೇಲೆ ಹೇಳಿದ ಹಾಗೆ ದೊಡ್ಡ ಮಕ್ಕಳಲ್ಲಿರುವ ಅನೇಕ ಹೆದರಿಕೆ ಗಳು ಹುಟ್ಟು ಹೆದರಿಕೆಗಳಲ್ಲ; ಅವು ಸಂಸರ್ಗ ಜನ್ಯವಾದ ಹೆದರಿಕೆ ಗಳು. ಆದುದರಿಂದ ಮಕ್ಕಳನ್ನು ಎಚ್ಚರಿಕೆಯಿಂದ ನೋಡಿಕೊಂಡರೆ ಅವರಿಗೆ ಕತ್ತಲೆ, ಕಳ್ಳರು ಮೃಗಗಳು ಹೊಸಬರು ಮುಂತಾದವರ ವಿಷಯದಲ್ಲಿರುವ ಹೆದರಿಕೆಗಳನ್ನು ತಪ್ಪಿಸಬಹುದು. ಮಗು ಯಾವು ದಾದರೂ ಒಂದು ಚೇಷ್ಟೆಯನ್ನು ಮಾಡುತ್ತಿರುವಾಗ ಅದನ್ನು ತಪ್ಪಿ ಸಲು ತಂದೆ ತಾಯಿಗಳು " ಗುಮ್ಮ ಬರುತ್ತಾನೆ '' ಎಂದು ಸಾಧಾ ರಣವಾಗಿ ಹೆದರಿಸುವರು. ಈ ರೀತಿ ಹೆದರಿಕೆಯನ್ನು ಮಗುವಿನಲ್ಲಿ ಉಂಟುಮಾಡುವುದು ಅನುಚಿತ. ಹೀಗೆ ಹುಟ್ಟಿದ ಹೆದರಿಕೆಗಳು ಸುಪ್ತ

ಚೇತನದಲ್ಲಿದ್ದು ದೊಡ್ಡವರಾದ ಮೇಲೂ ಅವರನ್ನು ಪೀಡಿಸುವುವು. ಆದುದರಿಂದ ತಂದೆ ತಾಯಿಯರು ಈ ರೀತಿಯ ಹೆದರಿಕೆಗಳು ಮಕ್ಕಳಲ್ಲಿ ಹುಟ್ಟದ ಹಾಗೆ ಜಾಗರೂಕತೆಯಿಂದ ನೋಡಿಕೊಳ್ಳಬೇಕು.

ಮಕ್ಕಳು ಯಾವುದಾದರೂ ತಪ್ಪು ಕೆಲಸವನ್ನು ಮಾಡಿದರೆ ತಂದೆ ತಾಯಿಯರು ಅವರನ್ನು ಗದರಿಸಿ ಶಿಕ್ಷಿಸುವರು. ಇದರಿಂದ ಮಗುವಿಗೆ ಗದರಿಸಿ ಹೊಡೆಯುವವರಲ್ಲಿ ಒಂದು ಹೆದರಿಕೆ ಯುಂಟಾಗುವುದು. ಶಿಕ್ಷೆಯ ಉದ್ದೇಶ ಮಗು ಕೆಟ್ಟ ಕೆಲಸವನ್ನು ಮಾಡದೆ ಇರಲೆಂದು. ಆದರೆ ಹೀಗೆ ಶಿಕ್ಷಿಸುವುದರಿಂದ ಯಾರು ಶಿಕ್ಷಿಸುತ್ತಾರೆಯೋ ಅವರಲ್ಲಿ ಮಗುವಿಗೆ ಹೆದರಿಕೆ ಹುಟ್ಟುವುದು. ಹುಡುಗರು ಸುಳ್ಳು ಹೇಳಲು ಈ ರೀತಿಯ ಹೆದರಿಕೆ ಒಂದು ಮುಖ್ಯಕಾರಣ. ನಿಜವನ್ನು ಹೇಳಿದರೆ ಎಲ್ಲಿ ತಂದೆ ತಾಯಿಯರು ಕೋಪಗೊಂಡು ಹೊಡೆಯುವರೋ ಎಂದು ಸುಳ್ಳು ಹೇಳಿ ಶಿಕ್ಷೆಯನ್ನು ತಪ್ಪಿಸಿಕೊಳ್ಳಲು ಪ್ರಯತ್ನಮಾಡುವರು. ಈ ಸುಳ್ಳು ಹೇಳುವುದೇ ಕ್ರಮೇಣ ದುರಭ್ಯಾಸವಾಗುವುದು. ಆದುದರಿಂದ ತಂದೆ ತಾಯಿಗಳು ತಮ್ಮಲ್ಲಿ ಮಕ್ಕಳಿಗೆ ಹೆದರಿಕೆಯುಂಟಾಗದ ರೀತಿಯಲ್ಲಿ ವರ್ತಿಸಬೇಕು. ಯಾವಾಗಲೂ ತಂದೆ ತಾಯಿಗಳು ಮಕ್ಕಳ ಪ್ರೀತಿ ವಿಶ್ವಾಸಕ್ಕೆ ಪಾತ್ರರಾಗಿರಬೇಕು. ಮಕ್ಕಳಿಗೆ ಯಾವ ರೀತಿಯಾದ ಕಷ್ಟ ಅಥವಾ ಸಂಶಯಗಳುಂಟಾದರೂ, ಅವುಗಳನ್ನು ಪರಿಹರಿಸಿಕೊಳ್ಳಲು ತಾಯಿ ತಂದೆಗಳ ಸಹಾಯವನ್ನು ಕೋರುವಷ್ಟು ಅವರಲ್ಲಿ ಸಲಿಗೆ ಮತ್ತು ಪ್ರೀತಿ ವಿಶ್ವಾಸಗಳಿರಬೇಕು. ಹೀಗೆ ಮಕ್ಕಳಿಗೆ ತಾಯಿ ತಂದೆಗಳಲ್ಲಿ ಸಲಿಗೆ ಪ್ರೀತಿ ವಿಶ್ವಾಸಗಳಿಲ್ಲದಿರುವುದೇ ಮಕ್ಕಳು ದುರ್ಮಾರ್ಗಕ್ಕೆ ಬೀಳಲು ಕಾರಣ. ಮಕ್ಕಳು ಅನುಚಿತವಾದ ಕೆಲಸವನ್ನು ಮಾಡಿದರೆ ಕೂಡಲೇ ಅವರನ್ನು ಗದರಿಸಬೇಕು. ಅದು ಕೆಟ್ಟ ಕೆಲಸವೆಂದು ಅವರ ಮನಸ್ಸಿಗೆ ಹತ್ತುವಂತೆ ತಿಳುವಳಿಕೆ ಹೇಳಬೇಕು. ಸಾಧಾರಣವಾಗಿ ಮಗು ಒಂದು ಕೆಟ್ಟ ಕೆಲಸಮಾಡಿದರೆ "ಸಾಯಂಕಾಲ ನಿನ್ನ ತಂದೆಯವರು ಬರಲಿ, ಅವರಿಗೆ ಹೇಳಿ ನಿನಗೆ ತಕ್ಕ ಶಿಕ್ಷೆಮಾಡಿಸುತ್ತೇನೆ" ಎಂದು ತಾಯಿಯರು ಹೆದರಿಸುವುದುಂಟು. ಇದು ಸರಿಯಲ್ಲ. ಸಣ್ಣ ಮಗುವಾದರೆ ತಂದೆ ಬರುವಷ್ಟು

ರಲ್ಲಿ ತಾನು ಮಾಡಿದ ತಪ್ಪನ್ನು ಮರೆತಿರುವುದು. ದೊಡ್ಡಮಗುವಾದರೆ ತನಗೆ ಯಾವ ಘೋರ ಶಿಕ್ಷೆಯು ಕಾದಿರುವುದೋ ಎಂದು ತಪಿಸುತ್ತಾ ತಂದೆ ಬರುವವರಿಗೂ ತನ್ನ ದೈನಂದಿನ ಕಾರ್ಯಗಳಲ್ಲಿ ನಿರುತ್ಸಾಹಿಯಾಗಿರುವುದು. ಆದುದರಿಂದ ತಪ್ಪು ಕೆಲಸ ಮಾಡಿದ ಒಡನೆಯೇ ಮಗುವಿಗೆ ಸರಿಯಾದ ಬುದ್ಧಿ ಕಲಿಸುವುದು ಉತ್ತಮ.

ಮಕ್ಕಳು ತಪ್ಪುಮಾಡಿದಾಗ ನಮ್ಮ ಕೋಪವನ್ನು ವ್ಯಕ್ತಪಡಿಸಿ ಶಿಕ್ಷಿಸುವುದು ತಪ್ಪು. ಮಗು ಪುನಃ ಆ ಕೆಟ್ಟ ಕೆಲಸವನ್ನು ಮಾಡದಿರಲೆಂಬುದು ಶಿಕ್ಷೆಯ ಉದ್ದೇಶವೇ ಹೊರತು ಕೋಪ ಪ್ರದರ್ಶನವಲ್ಲ.

ಸಮಾಜದಲ್ಲಿ ಒಬ್ಬ ವ್ಯಕ್ತಿ ಒಳ್ಳೆಯ ರೀತಿಯಲ್ಲಿ ವರ್ತಿಸಬೇಕಾದರೆ ತನ್ನ ಭಾವೋದ್ರೇಕಗಳನ್ನು ಹತೋಟಿಯಲ್ಲಿಟ್ಟುಕೊಂಡು ಸಮಭಾವದಿಂದಿರಬೇಕು. ಭಯ, ಕೋಪ ಮೊದಲಾದ ಭಾವೋದ್ರೇಕಗಳನ್ನು ಹತೋಟಿಯಲ್ಲಿಡದೆ ಅವುಗಳಿಗೆ ಅಧೀನನಾದರೆ ಮನುಷ್ಯನು ಪಶುಗಳಿಗೆ ಸಮಾನನಾಗುವನು. ಮತ್ತೆ ಈ ಭಾವಗಳು ಯಾವನಲ್ಲಿ ಉದ್ರಿಕ್ತವಾಗುವುದೇ ಇಲ್ಲವೋ ಅವನು ಜಡಸ್ವಭಾವವುಳ್ಳವನೆನಿಸುವನು. ಸಮಾಜದಲ್ಲಿ ತಾನೂ ಒಬ್ಬ ವ್ಯಕ್ತಿಯೆನಿಸಿಕೊಳ್ಳಲು ಮನುಷ್ಯನಿಗೆ ಭಾವಗಳ ಪ್ರವೃತ್ತಿಯೂ ಇರಬೇಕು; ಅವುಗಳನ್ನು ಸಂಯಮ ಮಾಡುವ ಶಕ್ತಿಯೂ ಇರಬೇಕು. ಇಂತಹ ಮನಸ್ಥೈರ್ಯ ಹುಟ್ಟಬೇಕಾದರೆ ನಾವು ಮಕ್ಕಳನ್ನು ಚಿಕ್ಕಂದಿನಿಂದಲೂ ಸರಿಯಾದ ರೀತಿಯಲ್ಲಿ ಸಾಕಬೇಕು. ಅವರಲ್ಲಿ ಅನಾವಶ್ಯಕ ಹೆದರಿಕೆಗಳುಂಟಾಗಲು ಅವಕಾಶಕೊಡಬಾರದು. ಯಾವಾಗಲೂ ಮಕ್ಕಳನ್ನು ನಮ್ಮ ಅಧೀನದಲ್ಲಿಯೇ ಇಟ್ಟುಕೊಂಡು ಅವರ ವ್ಯಕ್ತಿತ್ವವನ್ನು ಹಾಳುಮಾಡಬಾರದು. ಅವರಲ್ಲಿ ಮುಂಗೋಪವಿಲ್ಲದ ಹಾಗೆ ನೋಡಿಕೊಳ್ಳಬೇಕು. ತಮ್ಮ ಕೆಲಸಗಳನ್ನು ಹರ್ಷದಿಂದಲೂ, ಉತ್ಸಾಹದಿಂದಲೂ ಮಾಡುವ ಮನೋವೃತ್ತಿಯನ್ನು ಅವರಲ್ಲಿ ಅಭಿವೃದ್ಧಿಗೊಳಿಸಬೇಕು. ಅವರನ್ನು ಪದೇಪದೇ ಬೈದು ಅವರಿಗೆ ನಮ್ಮಲ್ಲಿ ಭಯ, ಕೋಪ, ದ್ವೇಷ ಮುಂತಾದ ಭಾವೋದ್ರೇಕಗಳುಂಟಾಗದಂತೆ ನೋಡಿಕೊಳ್ಳಬೇಕು. ಅವರನ್ನು ಚಿಕ್ಕವರೆಂದು ಉದಾಸೀನಮಾಡದೆ ಅವರು ನಮ ಸಮಾನ್ಯ

ರೆಂಬ ಭಾವನೆಯಿಟ್ಟು ಅವರ ಬುದ್ಧಿವಿವೇಕಗಳನ್ನು ಅಭಿವೃದ್ಧಿಗೊಳಿಸ ಬೇಕು. ಚಿಕ್ಕಂದಿನಿಂದಲೂ ಜಾಗರೂಕತೆಯಿಂದ ಮಕ್ಕಳನ್ನು ಬೆಳೆಯಿಸಿದರೆ ಅವರು ದೊಡ್ಡವರಾದಮೇಲೆ ಚಿತ್ತ ಸ್ಥೈರ್ಯ ಆತ್ಮಸಂಯಮಾದಿ ಗುಣಗಳುಳ್ಳ ವ್ಯಕ್ತಿಗಳಾಗಿ ಸಮಾಜದ ಏಳಿಗೆಗೆ ನೆರವಾಗುವರು.

---

# ಅಧ್ಯಾಯ ೮

## ಬುದ್ಧಿ ಶಕ್ತಿಯ ಬೆಳವಣಿಗೆ

ಸಾಧಾರಣವಾಗಿ ಒಂದು ಮಗು ಮತ್ತೊಂದು ಮಗುವಿಗಿಂತಲೂ ಜಾಣ ಅಥವಾ ಚುರುಕು ಎಂಬುದಾಗಿ ಹೇಳುತ್ತೇವೆ. ಚಿಕ್ಕ ಮಗು ವಾಗಲೀ, ದೊಡ್ಡವರಾಗಲೀ ಒಂದು ಕೆಲಸವನ್ನು ಮಾಡಿದರೆ ಆ ಕೆಲಸವನ್ನು ಯಾವ ರೀತಿ ಮಾಡುವರೆಂದು ಗಮನವಿಟ್ಟು ನೋಡು ತ್ತೇವೆ. ಆ ಕೆಲಸವು ಮಾಡುವವನ ಜಾಣತನವನ್ನು ತೋರಿಸು ವುದೋ, ಇಲ್ಲವೆ ಅವನ ಮಂಕುತನವನ್ನು ತೋರಿಸುವುದೋ ಎಂದು ನೋಡುತ್ತಿರುತ್ತೇವೆ. ಈ ರೀತಿಯಾಗಿ ಜನರು ಮಾಡುವ ಕಾರ್ಯ ಗಳಿಂದ ಅವರಲ್ಲಿ ಒಬ್ಬೊಬ್ಬರಿಗೂ ಬುದ್ಧಿ ಶಕ್ತಿಯಲ್ಲಿರುವ ತಾರತಮ್ಯ ವನ್ನು ಸಹಜವಾಗಿ ಕಂಡುಹಿಡಿಯುವುದುಂಟು ಉಪಾಧ್ಯಾಯರು ತಮ್ಮ ವಿದ್ಯಾರ್ಥಿಗಳಲ್ಲಿಯೂ, ಯಜಮಾನನು ತನ್ನ ನೌಕರ ನಲ್ಲಿಯೂ, ತಾಯಿತಂದೆಗಳು ತಮ್ಮ ಮಕ್ಕಳಲ್ಲಿಯೂ ಇರುವ ಬುದ್ಧಿ ಶಕ್ತಿಯ ತಾರತಮ್ಯಗಳನ್ನು ಗಮನಿಸುವರು. ಹೆಚ್ಚು ಬುದ್ಧಿ ಶಕ್ತಿ ಇರುವವನು ತನ್ನ ಕೆಲಸಗಳನ್ನು ಬಹಳ ಕುಶಲತೆಯಿಂದ ಮಾಡುವವ ನಾದುದರಿಂದ ಸಮಾಜದಲ್ಲಿ ಉನ್ನತಸ್ಥಿತಿಗೆ, ಬರಲು ಅವಕಾಶವಿದೆ. ಕಾರ್ಖಾನೆ ಕಛೇರಿಗಳಲ್ಲಿ ಹೆಚ್ಚು ಬುದ್ಧಿಶಕ್ತಿಯಿರುವವರಿಗೆ ಒಳ್ಳೆಯ ಪದವಿಯು ಸುಲಭವಾಗಿ ದೊರೆಯುತ್ತದೆ.

ಬುದ್ಧಿ ಶಕ್ತಿ ಎಂದರೇನು ? ಇದನ್ನು ಅಳೆಯಲು ಸಾಧ್ಯವೇ ? ಈ ಬುದ್ಧಿ ಶಕ್ತಿಯು ಹೇಗೆ ಬೆಳೆಯುವುದು ? ಚಿಕ್ಕ ವಯಸ್ಸಿನಲ್ಲಿ ಬುದ್ಧಿವಂತನಾಗಿರುವ ಹುಡುಗನು ಬೆಳೆದ ಮೇಲೂ ಬುದ್ಧಿವಂತನಾಗಿ ರುವನೇ ? ಮಂಕನಾಗಿರುವ ಹುಡುಗನ ಬುದ್ಧಿ ಶಕ್ತಿಯು ಬೆಳೆಯಲು ಅವಕಾಶಗಳಿರುವುವೇ ? ಇತ್ಯಾದಿ ಪ್ರಶ್ನೆಗಳಿಗೆ ಉತ್ತರ ಕೊಡಲು ಸುಮಾರು ೪೦-೫೦ ವರ್ಷಗಳಿಂದ ಪಾಶ್ಚಾತ್ಯ ದೇಶಗಳಲ್ಲಿಯೂ,

ಸ್ವಲ್ಪ ಮಟ್ಟಿಗೆ ನಮ್ಮ ದೇಶದಲ್ಲಿಯೂ ಮನಶ್ಶಾಸ್ತ್ರಜ್ಞರೂ ವಿದ್ಯಾಶಾಸ್ತ್ರಜ್ಞರೂ ಪ್ರಯತ್ನಿಸುತ್ತಿರುವರು. ಇದರ ಪರಿಣಾಮವಾಗಿ ಈಗ ಈ ವಿಷಯಗಳಲ್ಲಿ ನಮ್ಮ ತಿಳಿವಳಿಕೆಯು ಬಹಳ ಮುಂದುವರಿದಿದೆ. ಸುಮಾರು ೫೦ ವರ್ಷಗಳ ಹಿಂದೆ ಫ್ರಾನ್ಸ್ ದೇಶದ ಸರಕಾರವು ಬೀನೆ ಎಂಬ ಮನಶ್ಶಾಸ್ತ್ರಜ್ಞನನ್ನು ಶಾಲೆಗೆ ಬರುವ ಚಿಕ್ಕ ಮಕ್ಕಳಲ್ಲಿ ಯಾರು ಮಂದ ಬುದ್ಧಿಯುಳ್ಳವರೆಂದು ಪರಿಶೀಲಿಸಲು ಸಾಧ್ಯವೇ ಎಂದು ಕೇಳಲು, ಬೀನೆಯು ಐದು, ಆರು, ಏಳು ವರ್ಷ ವಯಸ್ಸಿನ ನೂರಾರು ಮಕ್ಕಳನ್ನು ಪರೀಕ್ಷಿಸಿದನು. ಒಂದೊಂದು ಮಗುವಿಗೂ ನಾಲ್ಕಾರು ಕೆಲಸಗಳನ್ನು ಹೇಳಿ ಆ ಮಗು ಆ ಕೆಲಸಗಳನ್ನು ಮಾಡುವುದೋ ಇಲ್ಲವೋ ಎಂಬುದನ್ನು ಪರೀಕ್ಷಿಸಿದನು. ಹೀಗೆ ಪರೀಕ್ಷಿಸಲು, ಐದು ವರ್ಷ ವಯಸ್ಸಿನ ಮಕ್ಕಳಲ್ಲಿ ಸುಮಾರು ಶೇಕಡ ೭೫ ರಷ್ಟು ಮಂದಿ ಆ ಕೆಲಸಗಳನ್ನು ಕುಶಲತೆಯಿಂದ ಮಾಡಿದರು. ಅದೇ ಕೆಲಸಗಳನ್ನು ಆರು ವರ್ಷ ವಯಸ್ಸಿನ ಮಕ್ಕಳಲ್ಲಿ ಸುಮಾರು ಶೇಕಡ ೯೦ ರಷ್ಟು ಮಂದಿಗಿಂತ ಹೆಚ್ಚಾಗಿಯೇ ಮಾಡಿದರು. ಆದರೆ ಇನ್ನೂ ಸ್ವಲ್ಪ ಕಠಿಣವಾದ ಕೆಲಸಗಳನ್ನು ಐದು ವರ್ಷ ವಯಸ್ಸಿನ ಮಕ್ಕಳಲ್ಲಿ ಶೇಕಡ ೨೫-೩೦ ರಷ್ಟು ಮಂದಿ ಮಾತ್ರ ಮಾಡಬಲ್ಲವರಾದರು; ಆರು ವರ್ಷ ವಯಸ್ಸಿನ ಮಕ್ಕಳಲ್ಲಿಯಾದರೋ ಶೇಕಡ ೭೫ ಮಂದಿ ಸುಲಭವಾಗಿ ಮಾಡುತ್ತಿದ್ದರು. ಈ ರೀತಿಯಾಗಿ ಒಂದೊಂದು ವಯಸ್ಸಿಗೂ ಆಯಾ ವಯಸ್ಸಿನ ಬುದ್ಧಿ ಶಕ್ತಿಯನ್ನು ಅಳೆಯಲು ನಾಲ್ಕಾರು ಕೆಲಸಗಳನ್ನು ನಿಯಮಿಸಬಹುದೆಂದು ಬೀನೆ ತನ್ನ ಪ್ರಯೋಗಗಳಿಂದ ಕಂಡು ಹಿಡಿದನು.

ಈ ಪ್ರಯೋಗಗಳು ಮನಶ್ಶಾಸ್ತ್ರದಲ್ಲಿಯೇ ಅಲ್ಲದೆ, ಮಾನವ ಜೀವನದಲ್ಲಿಯೇ ಅತ್ಯಂತ ಮುಖ್ಯವಾದುದು. ಸಮಾಜದಲ್ಲಿ ಶ್ರೇಷ್ಠವಾದ ಪರಿಣಾಮವನ್ನುಂಟುಮಾಡಲು ಸಹಕಾರಿಯಾಗುವುದು ಕಳೆದ ಮಹಾಯುದ್ಧದಲ್ಲಿ ಮನಶ್ಶಾಸ್ತ್ರಜ್ಞರ ಸಹಾಯದಿಂದ ಲಕ್ಷಾಂತರ ಜನರ ಬುದ್ಧಿ ಶಕ್ತಿಯನ್ನು ಅಳೆದು ಅವರಿಗೆ ಸೈನ್ಯದಲ್ಲಿ ಯೋಗ್ಯವಾದ ಪದವಿಗಳನ್ನು ಕೊಟ್ಟರು. ಬುದ್ಧಿ ಶಕ್ತಿಯು ಹೆಚ್ಚಾಗಿದ್ದರೆ ಆತನು

ತನಗೆ ಹೇಳಿಕೊಟ್ಟ ಕೆಲಸಗಳನ್ನು ಜಾಗ್ರತೆ ಕಲಿಯುವನು. ಕಲಿತ ಕೆಲಸಗಳನ್ನು ಕುಶಲತೆಯಿಂದ ಮಾಡುವನು. ಆದುದರಿಂದ ಬುದ್ಧಿ ಶಕ್ತಿಯನ್ನು ಅಳೆದು ಅವರವರಿಗೆ ಯೋಗ್ಯವಾದ ಕೆಲಸಗಳನ್ನು ಕೊಟ್ಟರೆ ಅದರಿಂದ ಪ್ರತಿಯೊಬ್ಬ ಮನುಷ್ಯನಿಗೂ ಒಳ್ಳೆಯದಾಗುವುದು ಮಾತ್ರವಲ್ಲದೆ ಇಡೀ ಸಮಾಜವು ಮುಂದುವರಿಯಲು ಸಹಾಯವಾಗುತ್ತದೆ.

ಈಚೀಚೆಗೆ ಮಕ್ಕಳಲ್ಲಿರುವ ಬುದ್ಧಿ ಶಕ್ತಿಗಳ ತಾರತಮ್ಯಗಳನ್ನು ಕಂಡುಹಿಡಿಯಲು ಸಾಧ್ಯವೇ ಎಂದು ಪ್ರಯೋಗಗಳನ್ನು ನಡೆಸಿರುವರು. ಇವರಲ್ಲಿ ಮುಖ್ಯರಾದವರು ಗೆಸೆಲ್ ಮತ್ತು ಬ್ಯೂಲರ್. ಇವರು ನೂರಾರು ಚಿಕ್ಕ ಮಕ್ಕಳನ್ನು ಗಮನವಿಟ್ಟು ಪರೀಕ್ಷಿಸಿ ಒಂದೊಂದು ವಯಸ್ಸಿನ ಮಕ್ಕಳೂ ಯಾವ ರೀತಿಯ ಕೆಲಸಗಳನ್ನು ಮಾಡಲು ಶಕ್ತರು ಎಂಬುದನ್ನು ಪರಿಶೀಲಿಸಿರುವರು. ಉದಾಹರಣೆಗಾಗಿ – ಮೂರು ತಿಂಗಳ ವಯಸ್ಸಿನ ಮಗು ಕೈಗೆ ಒಂದು ಚಿಕ್ಕ ವಸ್ತುವನ್ನು ಕೊಟ್ಟರೆ ಅದನ್ನು ತಕ್ಷಣ ಬಾಯಿಗೆ ತೆಗೆದುಕೊಂಡು ಹೋಗುವುದು. ಎರಡು ತಿಂಗಳ ಮಗು ಈ ಕೆಲಸವನ್ನು ಮಾಡಬಹುದು; ಆದರೆ ಈ ಎರಡು ಮಕ್ಕಳಲ್ಲಿಯೂ ವ್ಯತ್ಯಾಸವಿರುವುದು. ಎರಡು ತಿಂಗಳ ಮಗು ಕೊಟ್ಟ ವಸ್ತುವನ್ನು ನೇರವಾಗಿ ಬಾಯಿಯ ಹತ್ತಿರ ತೆಗೆದುಕೊಂಡು ಹೋಗಲು ಅಶಕ್ತವಾದುದು. ಅಪ್ಪಿ-ತಪ್ಪಿ ಒಂದೊಂದು ಸಾರಿ ತೆಗೆದುಕೊಂಡು ಹೋದರೂ ಹೋಗಬಹುದು. ಆದರೆ ಮೂರು ತಿಂಗಳ ವಯಸ್ಸಾದಾಗ ಅದಕ್ಕೆ ಆ ಸಾಮರ್ಥ್ಯವು ಬರುವುದು. ಮೂರು ತಿಂಗಳ ವಯಸ್ಸಿನ ಮಗು ಏನಾದರೊಂದು ಪ್ರಕಾಶಮಾನವಾದ ವಸ್ತುವನ್ನು ಪಕ್ಕದಲ್ಲಿ ನೋಡಿದರೆ ಅದನ್ನು ಸರಿಯಾಗಿ ನೋಡುವುದಕ್ಕೋಸ್ಕರ ತನ್ನ ಕಣ್ಣುಗಳನ್ನು ಆ ವಸ್ತುವಿನ ಕಡೆಗೆ ತಿರುಗಿಸುತ್ತದೆ. ಅಥವಾ ಹಠಾತ್ತಾಗಿ ಅದರ ಕಣ್ಣಿನ ಹತ್ತಿರ ಏನಾದರೊಂದು ಪದಾರ್ಥವನ್ನು ತೆಗೆದುಕೊಂಡು ಹೋದರೆ ಆಗ ಕಣ್ಣುಮುಚ್ಚುವುದು. ಆರು ತಿಂಗಳ ವಯಸ್ಸಿನ ಮಗು ಇನ್ನೂ ಕಠಿಣವಾದ ಕೆಲಸಗಳನ್ನು ಮಾಡಬಲ್ಲುದು. ತಲೆಯನ್ನು ನೆಟ್ಟಗೆ ಹಿಡಿಯಬಲ್ಲುದು; ತಾಯಿಯ ತೊಡೆಯ ಮೇಲಾ

ಗಲೀ ಇಲ್ಲವೇ ಗೋಡೆಯ ಹತ್ತಿರವಾಗಲಿ', ಕಷ್ಟವಿಲ್ಲದೆ ಕುಳಿತು ಕೊಳ್ಳಬಲ್ಲುದು. ಏನಾದರೊಂದು ಶಬ್ದವಾದರೆ ಕಿವಿಗೊಟ್ಟು ಶಬ್ದ ಬಂದ ದಿಕ್ಕಿಗೆ ತಲೆತಿರುಗಿಸುವುದು. ಕೈಗೇನಾದರೂ ಸಣ್ಣ ಸಾಮಾ ನನ್ನು ಕೊಟ್ಟರೆ ತನ್ನ ಹೆಬ್ಬೆಟ್ಟು ಮತ್ತು ಮೊದಲನೆಯ ಬೆರಳುಗಳ ಸಹಾಯದಿಂದ ಗಟ್ಟಿಯಾಗಿ ಹಿಡಿದುಕೊಳ್ಳಬಹುದು. ತನ್ನ ಎದು ರಿಗೆ ಯಾವುದಾದರೊಂದು ಪ್ರಕಾಶವಾದ ವಸ್ತುವನ್ನು ದಾರದಲ್ಲಿ ಕಟ್ಟಿ ಅಲ್ಲಾಡಿಸಿದರೆ ಮಗು ಅದನ್ನು ಹಿಡಿಯುಲು ಯತ್ನಿಸುವುದು. ಒಂದು ವರ್ಷದ ಮಗು ತನ್ನಷ್ಟಕ್ಕೆ ತಾನೆ ನಿಲ್ಲಲು ಸಹ ಪ್ರಯತ್ನಿ ಸುವುದು. ಬೇರೆಯವರು ಆಡುವ ಚಿಕ್ಕ ಪದಗಳನ್ನು ಅನುಕರಿಸಲು ಯತ್ನಿಸುವುದು. ತನ್ನ ಸುತ್ತಲಿರುವ ಸಾಮಾನುಗಳನ್ನೂ ವ್ಯಕ್ತಿ ಗಳನ್ನೂ ಗುರುತಿಸುವ ಶಕ್ತಿಯನ್ನು ಪಡೆದಿರುವುದು. ಒಂದೂವರೆ ವರ್ಷ ವಯಸ್ಸಾದರೆ ನೀರನ್ನಾಗಲೀ ಹಾಲನ್ನಾಗಲೀ ಲೋಟದಿಂದ ಕುಡಿಯುವುದನ್ನು ಕಲಿತಿರುವುದು ಅಣ್ಣ, ಅಮ್ಮ, ಬೇಕು, ಬೇಡ, ನಾಯಿ, ಬೆಕ್ಕು ಎಂಬ ಮಾತುಗಳನ್ನು ಆಡಬಲ್ಲುದು. ಪುಟ್ಟ ಪ್ರಶ್ನೆ ಗಳನ್ನು ಗ್ರಹಿಸಬಲ್ಲುದು ಹೀಗೆಯೇ ವಯಸ್ಸು ಹೆಚ್ಚಿದಂತೆಲ್ಲಾ ಕಷ್ಟತರವಾದ ಕೆಲಸಗಳನ್ನು ಮಾಡಲು ಶಕ್ತಿಯನ್ನು ಪಡೆಯುವುದು.

ಮಕ್ಕಳ ಬೆಳೆವಣಿಗೆಯಲ್ಲಿ ಮೇಲೆ ಹೇಳಿದಂತೆ ಒಂದು ಕ್ರಮ ವನ್ನು ಮನಶ್ಶಾಸ್ತ್ರಜ್ಞರು ಕಂಡು ಹಿಡಿದಿರುವರು. ಈ ಕ್ರಮವನ್ನು ಗೆಸೆಲ್ * ಎಂಬಾತನು ತನ್ನ ಪುಸ್ತಕದಲ್ಲಿ ಈ ರೀತಿ ಸಂಕ್ಷೇಪಿಸಿ ರುವನು.

"ಮೊದಲ ಮೂರು ತಿಂಗಳಲ್ಲಿ ಮಗು ಕಣ್ಣಿನ ಚಲನೆಗೆ ಕಾರಣವಾದ ಹನ್ನೆರಡು ಪುಟ್ಟ ಮಾಂಸ ಖಂಡಗಳ ಮೇಲೆ ಹತೋಟಿ ಯನ್ನು ಪಡೆಯುವುದು.

"ಎರಡನೆಯ ಮೂರು ತಿಂಗಳಿನಲ್ಲಿ (೧೬ ರಿಂದ ೨೮ ವಾರ

* ಗೆಸೆಲ್—ದಿ ಫರ್ಸ್ಟ್ ಫೈವ್ ಇಯರ್ಸ್ ಆಫ್ ಲೈಫ್.

ಗಳಲ್ಲಿ) ತಲೆಯನ್ನು ಹೊರುವ ಮಾಂಸ ಖಂಡಗಳ ಮೇಲೆಯೂ, ತೋಳುಗಳನ್ನು ಆಡಿಸುವ ಮಾಂಸ ಖಂಡಗಳ ಮೇಲೆಯೂ ಹತೋಟಿ ಯನ್ನು ಪಡೆಯುವುದು ವಸ್ತುಗಳನ್ನು ಹಿಡಿಯಲು ಯತ್ನಿಸುವುದು.

“ಮೂರನೆಯ ಮೂರು ತಿಂಗಳುಗಳಲ್ಲಿ (೨೬ ರಿಂದ ೪೦ ವಾರ ಗಳ ವರೆಗೆ) ಮಗು ತನ್ನ ಸೊಂಟದ ಮೇಲೆಯು ಕೈಗಳಮೇಲೆಯೂ ಹತೋಟಿಯನ್ನು ಪಡೆಯುವುದು; ಕುಳಿತುಕೊಳ್ಳುವುದು, ವಸ್ತು ಗಳನ್ನು ಹಿಡಿಯುವುದು; ಕೈಯಿಂದ ಕೈಗೆ ಬದಲಾಯಿಸುವುದು; ವಸ್ತುವನ್ನು ಹಿಡಿದು ಅಡುವುದು.

“ನಾಲ್ಕನೆಯ ಮೂರು ತಿಂಗಳುಗಳಲ್ಲಿ (೪೦ ರಿಂದ ೫೨ ವಾರ ಗಳವರೆಗೆ) ಮಗು ತನ್ನ ಹತೋಟಿಯನ್ನು ಕಾಲು ಪಾದಗಳವರೆ ವಿಗೂ ಹೆಚ್ಚಿಸಿಕೊಳ್ಳುವುದು ಮತ್ತು ಹೆಬ್ಬೆರಳು ಮೊದಲ ಬೆರಳುಗಳ ಮೇಲೆ ಸಹ ಹತೋಟಿ ಪಡೆಯುವುದು. ವಸ್ತುಗಳನ್ನು ಚುಚ್ಚಲೂ, ಕೀಳಲೂ ಯತ್ನಿಸುವುದು

“ಎರಡನೆಯ ವರ್ಷದ ವಯಸ್ಸಿನಲ್ಲಿ ಮಗು ನಡೆಯುವುದು, ಓಡುವುದು, ತೊದಲು ಮಾತಾಡುವುದು, ಜಲಬಾಧೆ ಮಲಬಾಧೆಗಳ ಮೇಲೆ ಹತೋಟಿ ಪಡೆಯುವುದು. ತನ್ನ ವ್ಯಕ್ತಿತ್ವವನ್ನು ಸುಮಾರಾಗಿ ಅರಿಯುವುದು ಮತ್ತು ತನ್ನ ವಸ್ತುಗಳ ಮೇಲೆ ಅಭಿಮಾನವಿಡುವುದು.

“ಮೂರನೆಯ ವರ್ಷದಲ್ಲಿ ಪದಗಳನ್ನು ತನ್ನ ಯೋಚನೆಯ ಸಾಧನೆಯನ್ನಾಗಿ ಉಪಯೋಗಿಸಿ ವಾಕ್ಯಗಳ ಮೂಲಕ ಮಾತನಾಡು ವುದು. ತನ್ನ ಆವರಣವನ್ನು ತಿಳಿಯಲು ಕುತೂಹಲವನ್ನು ತೋರಿಸಿ ತಿಳಿವಳಿಕೆಯಿಂದ ವರ್ತಿಸ ತೊಡಗುವುದು. ಇನ್ನು ಮುಂದೆ ಮಗು ಬರಿಯ ‘ಹಸುಳೆ’ಯಲ್ಲ.”

“ನಾಲ್ಕನೆಯ ವರ್ಷದಲ್ಲಿ ಮಗು ಅನೇಕ ಪ್ರಶ್ನೆಗಳನ್ನು ಕೇಳು ವುದು. ಸಾಮ್ಯಗಳನ್ನು ಅರಿಯುವುದು; ಸಾಮಾನ್ಯ ಲಕ್ಷಣಗಳನ್ನು ತಿಳಿಯಲು ಯತ್ನಿಸುವುದು ಮನೆಯಲ್ಲಿ ತನ್ನ ದಿನಚರಿಯ ಕೆಲಸ ಗಳನ್ನು ಬಹಳ ಮಟ್ಟಿಗೆ ಸ್ವತಂತ್ರವಾಗಿ ತಾನೇ ಮಾಡಿಕೊಳ್ಳುವುದು.

“ಐದು ವರ್ಷಗಳ ವಯಸ್ಸಿನಲ್ಲಿ ಮಗು ತನ್ನ ದೇಹದ ಮಾಂಸ

ಖಂಡಗಳ ಮೇಲೆ ಒಳ್ಳೆಯ ಹತೋಟಿಯನ್ನು ಪಡೆಯುವುದು ಕುಪ್ಪಳಿಸುವುದು, ನೆಗೆಯುವುದು, ಪುಟ್ಟ ಮಗುವಿನ ಉಚ್ಚಾರಣೆಯನ್ನು ಬಿಟ್ಟು ಚೆನ್ನಾಗಿ ಮಾತನಾಡುವುದು. ಒಂದು ಸುಮಾರಾಗಿ ದೊಡ್ಡದಾದ ಕತೆಯನ್ನು ತಡೆಯಿಲ್ಲದೆ ಹೇಳುವುದು. ಇತರ ಮಕ್ಕಳೊಡನೆ ಆಡಲು ಇಚ್ಛಿಸುವುದು. ತನ್ನ ಉಡುಪುಗಳಲ್ಲಿಯೂ ಕೆಲಸಗಳಲ್ಲಿಯೂ ಹೆಮ್ಮೆಯನ್ನು ತೋರ್ಪಡಿಸುವುದು ತಕ್ಕಮಟ್ಟಿಗೆ ಆತ್ಮಭರವಸೆಯನ್ನು ಪಡೆದು ತನ್ನ ಆವರಣಕ್ಕೆ ಅನುಗುಣವಾಗಿ ವರ್ತಿಸುವುದು''.

ಈ ಕ್ರಮದ ಸಹಾಯದಿಂದ ಬೆಳೆವಣಿಗೆಯನ್ನು ಅಳೆಯುವುದಕ್ಕೆ ಸಾಧ್ಯವಾಗುವುದು. ಮೇಲೆ ಹೇಳಿದಂತೆ ಈ ಅಳೆಯುವ ವಿಧಾನವು ಎರಡು ಅಂಶಗಳ ಮೇಲೆ ನಿರ್ಧರಿಸಲ್ಪಟ್ಟಿದೆ. ಒಂದು ಕೆಲಸಕ್ಕೂ ಮತ್ತೊಂದು ಕೆಲಸಕ್ಕೂ ಕಷ್ಟದಲ್ಲಿ ತಾರತಮ್ಯ ವಿರುವುದು ಅಂದರೆ ಒಂದು ಕೆಲಸವು ಮತ್ತೊಂದು ಕೆಲಸಕ್ಕಿಂತ ಕಷ್ಟವಾಗಿರಬಹುದು ಇಲ್ಲವೇ ಸುಲಭವಾಗಿರಬಹುದು. ಕೆಲವು ಮಕ್ಕಳು ಸುಲಭವಾಗಿರುವ ಕೆಲಸಗಳನ್ನು ಮಾಡಬಲ್ಲರು ಆದರೆ ಕಷ್ಟತರವಾದ ಕೆಲಸವನ್ನು ಮಾಡಲಾರರು. ಯಾವ ವಯಸ್ಸಿನವರು ಯಾವ ಕೆಲಸಗಳನ್ನು ಮಾಡಬಲ್ಲರೆಂಬುದನ್ನು ನಿರ್ಣಯಿಸಿದರೆ ಅದರಿಂದ ಬುದ್ಧಿಶಕ್ತಿಯನ್ನು ಅಳೆಯಲು ಒಂದು ಅಡಿಕಡ್ಡಿ ಸಿಕ್ಕಿದಂತಾಗುವುದು. ಆರು ತಿಂಗಳು ವಯಸ್ಸಿನಲ್ಲಿ ಸೇ. ೩೬ ಮಂದಿ ಮಕ್ಕಳು ಸ್ವತಃ ಕುಳಿತುಕೊಳ್ಳಲು ಶಕ್ತರಾಗಿರುವರು. ಆದರೆ ಒಂಭತ್ತು ತಿಂಗಳ ವಯಸ್ಸಿಗೆ ಸಾಮಾನ್ಯವಾಗಿ ಎಲ್ಲಾ ಮಕ್ಕಳೂ ಸ್ವತಃ ಕುಳಿತುಕೊಳ್ಳುವ ಶಕ್ತಿಯನ್ನು ಪಡೆದಿರುವರು ಒಂದು ತಿಂಗಳು ವಯಸ್ಸಿನ ಮಕ್ಕಳಲ್ಲಿ ಶೇ ೩೦ ಮಂದಿ ತಮ್ಮ ತಲೆಗಳನ್ನು ಎತ್ತಿಹಿಡಿಯಲು ಶಕ್ತರಾಗಿರುವರು ಮೂರು ನಾಲ್ಕು ತಿಂಗಳ ವಯಸ್ಸಿಗೆ ಸಾಧಾರಣವಾಗಿ ಎಲ್ಲಾ ಮಕ್ಕಳೂ ಈ ಕೆಲಸವನ್ನು ಮಾಡಬಲ್ಲರು. ಆದುದರಿಂದ ಮೂರು ತಿಂಗಳ ವಯಸ್ಸಿನಲ್ಲಿ ಆರು ತಿಂಗಳ ವಯಸ್ಸಿನಲ್ಲಿ ೯ ತಿಂಗಳ ವಯಸ್ಸಿನಲ್ಲಿ, ೧೨ ತಿಂಗಳ ವಯಸ್ಸಿನಲ್ಲಿ ೧೮ ತಿಂಗಳ ವಯಸ್ಸಿನಲ್ಲಿ ಶೇಕಡ ೭೦–೭೫ ರಷ್ಟು ಮಂದಿ ಮಕ್ಕಳು ಯಾವ ಯಾವ ಕೆಲಸಗಳನ್ನು ಮಾಡುವರೆಂಬುದನ್ನು ಕಂಡು ಹಿಡಿದಿರುವರು.

ಗೆಸೆಲ್ ಮುಂತಾದವರು ಐದು ವರ್ಷ ವಯಸ್ಸಿನೊಳಗಿರುವ ಬೇರೆ ಬೇರೆ ವಯಸ್ಸಿನ ನೂರಾರು ಮಕ್ಕಳನ್ನು ಪರೀಕ್ಷಿಸಿ ಅವರ ಬೆಳವಣಿಗೆಯ ಕ್ರಮವನ್ನು ನಿರ್ಧರಿಸಿರುವರು. ಬೆಳೆವಣಿಗೆಯ ಕ್ರಮವು ಚೆನ್ನಾಗಿ ಗೋಚರವಾಗುವ ಹಾಗೆ ಗೆಸೆಲ್ ಅದನ್ನು ನಾಲ್ಕು ಭಾಗಗಳಾಗಿ ವಿಭಜನೆ ಮಾಡಿರುವನು. (೧) ಅಂಗಗಳ ಮೇಲಿನ ಹತೋಟಿ (೨) ಆವರಣಕ್ಕೆ ಹೊಂದಿಕೊಂಡು ವರ್ತಿಸುವುದು (೩) ಭಾಷೆ(೪) ವೈಯುಕ್ತಿಕ ಮತ್ತು ಸಾಮಾಜಿಕ ವರ್ತನೆ. ಈ ಒಂದೊಂದು ಅಂಶದಲ್ಲಿಯೂ ಬೇರೆ ಬೇರೆ ವಯಸ್ಸಿನ ಮಕ್ಕಳು ಸಾಮಾನ್ಯವಾಗಿ, ಅಂದರೆ ಗುಂಪಿನ ಶೇಕಡ 75 ರಷ್ಟು ಮಂದಿ, ಯಾವ ವಿಧವಾಗಿ ವರ್ತಿಸುವರೆಂದು ಕಂಡು ಹಿಡಿದು ಈ ಕೆಳಗೆ ಕಂಡಂತೆ ನಿರೂಪಿಸಿ ರುವನು.

## ನಾಲ್ಕು ವಾರಗಳ ವಯಸ್ಸಿನಲ್ಲಿ

(೧) ಅಂಗಾಂಗಳ ಮೇಲಿನ ಹತೋಟಿ:—ಈ ವಯಸ್ಸಿನ ಮಗು ಬೆನ್ನಿನ ಮೇಲೆ ಮಲಗಿ ಎಚ್ಚರವಾಗಿರುವಾಗ ತಲೆಯನ್ನು ಒಂದು ಪಕ್ಕಕ್ಕೆ ತಿರುಗಿಸುವುದು. ಭುಜದಮೇಲೆ ಒರಗಿಸಿಕೊಂಡರೆ ಒಮ್ಮೊಮ್ಮೆ ತಲೆಯನ್ನೆತ್ತುವುದು. ಬೋರಲಾಗಿ ಮಲಗಿಸಿದರೆ ಕೈಕಾಲು ಗಳನ್ನು ಆಡಿಸುವುದು. ತಲೆಯನ್ನೆತ್ತಲು ಯತ್ನಿಸುವುದು.

(೨) ಆವರಣಕ್ಕೆ ಹೊಂದಿದ ವರ್ತನೆ :–ತುಟಿಯನ್ನು ಮುಟ್ಟಿದರೆ ಬಾಯನ್ನು ಮುಚ್ಚಿಕೊಳ್ಳುವುದು; ಕಿಟಕಿ ಮುಂತಾದ ದೊಡ್ಡ ಪದಾರ್ಥ ಗಳನ್ನು ಧೃಷ್ಟಿಸಿ ನೋಡುವುದು. ಅಲುಗಾಡುತ್ತಿರುವ ವಸ್ತುವನ್ನು ಧೃಷ್ಟಿಯಿಟ್ಟು ನೋಡುವುದು. ಮರದ ಸಣ್ಣ ಕೆಂಪು ಬಳೆಯನ್ನು ದೃಷ್ಟಿಸುವುದು, ಅದನ್ನು ಕೈಯಲ್ಲಿಟ್ಟರೆ ಹಿಡಿದುಕೊಳ್ಳುವುದು.

(೩) ಭಾಷೆ:—ಶಬ್ದ ಮಾಡಿದರೆ ಅದನ್ನು ಗಮನಿಸುವುದು. ಕೈ ಕಾಲುಗಳನ್ನು ಆಡಿಸುತ್ತಿರುವ ಸಮಯದಲ್ಲಿ ಒಂದು ಗಂಟೆಯನ್ನು ಬಾರಿಸಿದರೆ ಕೈಕಾಲುಗಳಾಡಿಸುವುದನ್ನು ನಿಲ್ಲಿಸುವುದು. ಈ ವಯಸ್ಸಿನ ಮಗು ಅಳುವುದೊಂದನ್ನು ಬಿಟ್ಟು ಬೇರೆ ಯಾವ ವಿಧವಾದ ಶಬ್ದ ಗಳನ್ನು ಮಾಡುವುದಿಲ್ಲ ಆದರೆ ನೋವು ಅಸ್ವಸ್ಥತೆ ಹಸಿವು ಉಂಟಾ

ದಾಗ ಸ್ವಲ್ಪ ಮಟ್ಟಿಗೆ ಬೇರೆ ಬೇರೆ ವಿಧವಾದ ಶಬ್ದಗಳನ್ನು ಮಾಡುವುದುಂಟು.

(೪) ವೈಯಕ್ತಿಕ ಸಾಮಾಜಿಕ ವರ್ತನೆ :—ಮಗುವಿನ ಹತ್ತಿರ ಮುಖ ವಿಟ್ಟರೆ, ಕ್ಷಣಕಾಲ ಮಗು ನಮ್ಮ ಮುಖವನ್ನು ನೋಡುವುದು, ಎಳ್ಳಷ್ಟು ಮುಗುಳ್ನಗೆ ತೋರುವುದು. ಕೈಯಲ್ಲಿ ಎತ್ತಿಕೊಂಡರೆ ಮೈಯನ್ನು ಬಟ್ಟೆಯಿಂದ ಸುತ್ತಿದರೆ ಸ್ವಸ್ಥತೆಯನ್ನು ಸೂಚಿಸುವುದು.

**ಹದಿನಾರು ವಾರಗಳಲ್ಲಿ.**

(೧) ತಲೆಯನ್ನು ಚೆನ್ನಾಗಿ ಆಡಿಸುವುದು. ಕಣ್ಣೆದುರಿಗೆ ಮರದ ಬಳೆಯನ್ನು ಅಡಿಸಿದರೆ ಅದನ್ನು ಹಿಡಿಯಲು ತಲೆ ಭುಜ ತೋಳುಗಳನ್ನು ಆಡಿಸುವುದು. ಕಾಲುಗಳ ಮೇಲೆ ಹತೋಟಿ ಇರುವುದಿಲ್ಲವಾದರೂ, ಎತ್ತಿ ನಿಲ್ಲಿಸಿದರೆ ಕ್ಷಣಕಾಲ ಕಾಲನ್ನು ನೆಟ್ಟಗೆ ಮಾಡುವುದು. ಸೊಂಟದ ಮಾಂಸಖಂಡಗಳು ಪಕ್ವತೆಯನ್ನು ಹೊಂದಿರುವುವು. ದಿಂಬಿನ ಪಕ್ಕದಲ್ಲಿ ಕೂಡಿಸಿದರೆ ಸಂತೋಷವನ್ನು ಸೂಚಿಸುವುದು.

(೨) ಮಗು ತನ್ನ ಕೈಗಳನ್ನು, ಕೈಯಲ್ಲಿರುವ ಆಟಗೆಯನ್ನೂ ಕಣ್ಣಿಟ್ಟು ನೋಡುವುದು. ಕಣ್ಣಿನಿಂದ ನೋಡಿದುದನ್ನು ಕೈಯಲ್ಲಿ ಹಿಡಿಯಲು ಯತ್ನಿಸುವುದು. ಪುಟ್ಟ ಮರದ ತುಂಡುಗಳನ್ನು ಗಮನಿಸುವುದು.

(೩) ಮಗು ಈ ವಯಸ್ಸಿನಲ್ಲಿ ' ಕೂ ' ಎನ್ನುವುದು. ಗಂಟಲಲ್ಲಿ ' ಗರ್‌ಗರ್ ' ಎಂಬ ಶಬ್ದವನ್ನು ಮಾಡುವುದು, ನಗುವುದು, ಈ ಶಬ್ದಗಳೇ ಮುಂದೆ ಭಾಷೆಯಾಗಿ ಪರಿಣಮಿಸುವುವು. ರೂಢಿಯಾದ ಶಬ್ದಕ್ಕೆ ಕಿವಿಗೊಡುವುದು. ಇತರ ಶಬ್ದಗಳಿಗಿಂತ ಮನುಷ್ಯನ ಧ್ವನಿಗೆ ಹೆಚ್ಚುಗಮನ ಕೊಡುವುದು.

(೪) ತಾಯಿಯ ಮುಖ, ಕೈ ಮತ್ತು ಧ್ವನಿಗೆ ಗಮನ ಕೊಡುವುದು. ತಾಯಿ ಮತ್ತು ದಾದಿಯರನ್ನು ಗುರುತಿಸುವುದು. ಹೀಗೆ ಗುರುತಿಸಲು ಕಾರಣ ಅವರು ಮಗುವಿಗೆ ಆಹಾರ ಕೊಟ್ಟು, ಸ್ನಾನ

ಮಾಡಿಸಿ ಶುಶ್ರೂಷೆ ಮಾಡಿ ಸ್ವಸ್ಥತೆಯನ್ನುಂಟುಮಾಡುವುದೇ ಆಗಿದೆ-ಹಳಬರನ್ನು ಕಂಡ ಕೂಡಲೇ ಮುಗುಳ್ನಗೆ ನಗುವುದು. ಹೊಸಬರನ್ನು, ನೋಡಿದರೆ ಸುಮ್ಮನಿರುವುದು. ಮಲಗಿರುವ ಸ್ಥಿತಿಗಿಂತ ಕುಳಿತುಕೊಳ್ಳುವುದನ್ನು ಹೆಚ್ಚಾಗಿ ಅಪೇಕ್ಷಿಸುವುದು. ಪ್ರಾಯಶಃ ಆವರಣವನ್ನೂ, ಸುತ್ತಲಿರುವ ಜನಗಳನ್ನೂ ಚೆನ್ನಾಗಿ ನೋಡಲು ಸಾಧ್ಯವಾಗುವುದೆಂದು ಹೀಗೆ ಅಪೇಕ್ಷಿಸಬಹುದು.

## ೨೮ ವಾರಗಳಲ್ಲಿ

(೧) ವಯಸ್ಸಿನಲ್ಲಿಯೂ ಬೆಳೆವಣಿಗೆಯಲ್ಲಿಯೂ, ಈ ಸಮಯದಲ್ಲಿ ಮಗು ತಾನು ಎದ್ದು ನೆಟ್ಟಗೆ ನಿಲ್ಲುವ ಸ್ಥಿತಿಯಲ್ಲಿ ಅರ್ಧದಾರಿಗೆ ಬಂದಿರುವುದು. ೫೬ ವಾರಗಳಲ್ಲಿ ತಾನು ಸ್ವತಃ ನಿಲ್ಲುವುದು; ೨೮ ವಾರಗಳಲ್ಲಿಯಾದರೋ ಮಗು ತಾನೇ ಕುಳಿತುಕೊಳ್ಳಬಲ್ಲುದು. ಆಟಿಗೆಯನ್ನು ಕಂಡೊಡನೆಯೇ ಹಿಡಿದುಕೊಳ್ಳಲು ಪ್ರಯತ್ನಿಸುವುದು. ಮರದ ತುಂಡನ್ನು ಕೈಯಲ್ಲಿ ಹಿಡಿದು ಒಂದು ಕೈಯಿಂದ ಮತ್ತೊಂದು ಕೈಗೆ ಬದಲಾಯಿಸುವುದು. ಕಣ್ಣಿನ ನೋಟವು ಚುರುಕಾಗುವುದು. ಮೊದಲು ದೊಡ್ಡ ಪದಾರ್ಥಗಳನ್ನು ಮಾತ್ರ ಕಾಣುತ್ತಿದ್ದ ಮಗು ಈಗ ಒಂದು ದಾರವನ್ನು ಸಹ ನೋಡಬಲ್ಲುದು. ಆದರೆ ಅದನ್ನು ಹಿಡಿಯಲಾರದು.

(೨) ಕೈ ಮತ್ತು ಕಣ್ಣುಗಳು ಹೊಂದಿಕೊಂಡು ಕೆಲಸ ಮಾಡುವುವು. ೧೬ ವಾರಗಳ ಮಗು ತನ್ನ ಸುತ್ತ ಮುತ್ತಲಿನ ವಸ್ತುಗಳನ್ನು ಸುಮ್ಮನೆ ನೋಡುವುದು. ಈಗ ಅಂದರೆ ೨೮ ವಾರಗಳಲ್ಲಿ, ಸುತ್ತ ಮುತ್ತಲಿನ ಪ್ರತ್ಯೇಕ ವಸ್ತುಗಳನ್ನು ಗಮನವಿಟ್ಟು ನೋಡುವುದು. ವಸ್ತುವು ಹತ್ತಿರ ವಿದ್ದರೆ ಅದನ್ನು ಕೈಯಲ್ಲಿ ಹಿಡಿಯುವುದು. ಹತ್ತಿರ ವಿರುವ ಮರದ ತುಂಡನ್ನು ನೋಡಿದ ಕೂಡಲೆ ಅದನ್ನು ಕೈಯಲ್ಲಿ ಹಿಡಿದು ಬಾಯಲ್ಲಿ ಇಟ್ಟುಕೊಳ್ಳುವುದು. ಅದರ ಭಾಗಗಳನ್ನು ಕೈಯಿಂದಲೂ, ಬಾಯಿಂದಲೂ ಮತ್ತು ಕಣ್ಣಿನಿಂದಲೂ ಪರೀಕ್ಷಿಸುವುದು.

(೩) ಶಬ್ದಗಳನ್ನು ಈಗ ಸ್ಪಷ್ಟವಾಗಿ ಮಾಡುವುದು. ಎದ್ದಿರುವ ಕಾಲದಲ್ಲಿ ಅನೇಕ ಸಲ ವಿಧವಿಧವಾದ ಶಬ್ದಮಾಡಿ ಆನಂದಿಸುವುದು.

ಕೆಲವು ಸ್ವರ ವ್ಯಂಜನಗಳನ್ನೂ ಉಚ್ಛರಿಸುವುದು. 'ಮೂ' 'ಮ' 'ಡ' ಶಬ್ದಗಳೊಂದಂದನ್ನೂ ಎರಡಾಗಿ ಮೂರಾಗಿ ಜೋಡಿಸಿ ಒಟ್ಟಿಗೆ ಉಚ್ಛರಿಸುವುದೂ ಉಂಟು.

(೪) ತನ್ನ ಸುತ್ತಮುತ್ತಲಿನ ಜನಗಳ ಮುಖಚರ್ಯೆಗಳನ್ನು ಬಹಳ ಮಟ್ಟಿಗೆ ಅರಿತಿರುವುದು. ತಾಯಿ ತಂದೆಗಳನ್ನು ಕಂಡರೆ ಅವರು ತನ್ನ ಹತ್ತಿರ ಬರುವರೆಂಬ ನಿರೀಕ್ಷಣೆಯಲ್ಲಿರುವುದು. ಅವರು ತನ್ನಿಂದ ದೂರ ಹೋದರೆ ಅವರು ಹೋಗುವುದನ್ನೇ ದೃಷ್ಟಿಸಿ ನೋಡು ವುದು. ಅವರಾಡುವ ಮಾತುಗಳ ಸದ್ದನ್ನು ಕೇಳುತ್ತಿರುವುದೇ ಹೊರತು ಆ ಮಾತುಗಳ ಅರ್ಥವು ಇನ್ನೂ ತಿಳಿದಿರುವುದಿಲ್ಲ.

### ೪೦ ವಾರಗಳಲ್ಲಿ

(೧) ಮೊದಲ ಮೂರು ತಿಂಗಳು ಒಂದೇ ಕಡೆ ಮಲಗಿರುತ್ತಿದ್ದ ಮಗು ಈಗ ನಿದ್ರಿಸುವ ಸಮಯ ಹೊರತು ಉಳಿದ ಕಾಲದಲ್ಲೆಲ್ಲಾ ಒಂದು ಕಡೆಯಿಂದ ಮತ್ತೊಂದು ಕಡೆಗೆ ಉರುಳಾಡುತ್ತಿರುವುದು.‡ ಅಥವಾ ಕುಳಿತುಕೊಳ್ಳುವುದು. ಶರೀರದ ಹತ್ತಿರವಾದ ಅಂಗಗಳ ಮೇಲೆ ಇದುವರೆವಿಗೂ ಇದ್ದ ಹತೋಟಿಯು ಈಗ ದೂರದ ಅಂಗಗಳ ಮೇಲೆಯೂ ಅಂದರೆ ಕೈ ಬೆರಳುಗಳು, ಕಾಲುಬೆರಳುಗಳು ನಾಲಿಗೆಯ ತುದಿ, ಇವುಗಳ ಮೇಲೆಯೂ ವ್ಯಾಪಿಸುವುದು. ಈಗ ಚೆನ್ನಾಗಿ ಕುಳಿತು ಕೊಳ್ಳುವ ಶಕ್ತಿ ಬರುವುದು. ಕುಳಿತು ಈಕಡೆ ಆಕಡೆ ನೋಡುವುದು, ತಿರುಗುವುದು, ಬಗ್ಗುವುದು, ಬೋರಲಾಗಿ ಮಲಗುವುದು. ಬೋರ ಲಾಗಿದ್ದಾಗ ಈಜಿ ಹಿಂದೆ ಅಥವಾ ಮುಂದೆ ಹೋಗುವುದು. ವಸ್ತು ಗಳನ್ನು ಹಿಡಿಯುವಾಗ ಇದುವರೆವಿಗೂ ಕೈ ಬೆರಳುಗಳೆಲ್ಲವನ್ನೂ ಅಂಗೈಯನ್ನೂ ಉಪಯೋಗಿಸುತ್ತಿದ್ದ ಮಗು ಈಗ ಹೆಬ್ಬೆರಳು ಮತ್ತು ಮೊದಲನೆಯ ಬೆರಳುಗಳನ್ನು ಪಯೋಗಿಸಿ ಪದಾರ್ಥಗಳನ್ನು ಹಿಡಿಯು ವುದು.

(೨) ಇದುವರೆವಿಗೂ ಬಾಯಲ್ಲಿಟ್ಟ ವಸ್ತುವನ್ನು ಚಪ್ಪರಿಸುತ್ತಿದ್ದ

---

‡ ೧೩ ನೆಯ ಚಿತ್ರವನ್ನು ನೋಡಿ.

(೪) ಮನೆಯವರ ಜೊತೆಯಲ್ಲಿ ಸೇರಿ ಆಡುವುದು. ಚೇಷ್ಟೆಗಳನ್ನು ಪದೇಪದೇ ಮಾಡಿ ಇತರರನ್ನು ನಗಿಸುವುದು. ಈಗ ಕೋಪ, ಭಯ, ಪ್ರೇಮ, ದ್ವೇಷ, ಕರುಣೆ ಮುಂತಾದ ಭಾವನೆಗಳನ್ನು ವ್ಯಕ್ತಪಡಿಸುವುದು. ಸಂಗೀತವನ್ನು ಕೇಳಿ ಸಂತೋಷಿಸುವುದು. ವ್ಯಕ್ತಿತ್ವವು ಹೆಚ್ಚುವುದು. ತನ್ನ ಕೈಯಿಂದ ತಾನೇ ಊಟಮಾಡುವುದು. ಮಲವಿಸರ್ಜನೆಯು ಕ್ರಮಬದ್ಧವಾಗಿರುವುದು. ಉಡುಪನ್ನು ಹಾಕಿಸಿಕೊಳ್ಳುವಾಗ ಸಹಕರಿಸುವುದು. ಸದ್ದುಗಳನ್ನು ಮಾಡಿ ಬೇರೆಯವರ ಗಮನವನ್ನು ತನ್ನ ಕಡೆಗೆ ಸೆಳೆಯುವುದು. ಬೇರೆಯವರ ಭಾವನೆಗಳಿಗೆ ಅನ್ವಯಿಸಿ ವರ್ತಿಸುವುದು. ಈ ವಿಧವಾಗಿ ತನ್ನ ಬುದ್ಧಿಶಕ್ತಿಯನ್ನೂ ಸಾಮಾಜಿಕ ವರ್ತನೆಯನ್ನೂ ತನ್ನ ವ್ಯಕ್ತಿತ್ವವನ್ನೂ ಒಂದು ವರ್ಷದ ಮಗು ವ್ಯಕ್ತಪಡಿಸುವುದು.

## ೧೮ ತಿಂಗಳುಗಳಲ್ಲಿ

ಒಂದು ವರ್ಷದ ಬೆಳೆವಣಿಗೆಯನ್ನು ಗೆಸೆಲ್ ಐದು ಅಂತಸ್ತುಗಳಲ್ಲಿ ವಿವರಿಸಿರುವನು ಈ ಕಾಲದಲ್ಲಿ ಬೆಳೆವಣಿಗೆಯು ಅತಿ ತೀವ್ರವಾಗಿ ನಡೆಯುವುದು. ಆದುದರಿಂದ ಪ್ರತಿ ಮೂರು ತಿಂಗಳಿನಲ್ಲಿಯೂ ಹೆಚ್ಚು ವ್ಯತ್ಯಾಸವು ಕಂಡುಬರುವುದು. ಆದರೆ ಒಂದು ವರ್ಷವಾದ ಮೇಲೆ ಬೆಳೆವಣಿಗೆಯು ಅಷ್ಟು ವೇಗವಾಗಿ ಮುಂದುವರಿಯುವುದಿಲ್ಲ. ಆದುದರಿಂದ ಇನ್ನುಮೇಲೆ ಗೆಸೆಲ್ ಮಗುವಿನ ವರ್ಷಕ್ಕೊಮ್ಮೆಯ ಬೆಳೆವಣಿಗೆಯ ಕ್ರಮವನ್ನು ಚಿತ್ರಿಸಿರುವನು.

(೧) ಹದಿನೆಂಟುತಿಂಗಳ ಮಗು ಒಂದು ವರ್ಷದ ಮಗುವಿಗಿಂತಲೂ ಎರಡು ಮೂರು ಅಂಗುಲ ಹೆಚ್ಚು ಎತ್ತರವಾಗಿರುವುದು; ತೂಕದಲ್ಲಿ ೨-೩ ಪೌಂಡುಗಳು ಹೆಚ್ಚಾಗುವುದು. ಒಂದು ವರ್ಷದ ವಯಸ್ಸಿನಲ್ಲಿ ಆರು ಹಲ್ಲುಗಳಿರುವುವು. ಈಗ ಹನ್ನೆರಡು ಹಲ್ಲುಗಳಿರುವುವು. ಹನ್ನೆರಡು ತಿಂಗಳ ವಯಸ್ಸಿನಲ್ಲಿ ಕುಳಿತುಕೊಳ್ಳಲು ಮಾತ್ರ ಶಕ್ತಿಯಿದ್ದು, ಮಗು ಈಗ ನಿಂತು ಓಡಾಡುವುದು. ಪುಟ್ಟ ಕುರ್ಚಿಯ ಮೇಲೆ ತಾನೇ ಕುಳಿತುಕೊಳ್ಳಬಲ್ಲುದು. ಮಹಡಿಗೆ ಹತ್ತಬೇಕಾದರೆ ಸಹಾಯ ಬೇಕಾದರೂ ಇಳಿಯುವಾಗ ಯಾರ ಸಹಾಯವೂ ಇಲ್ಲದೆ

ಇಳಿಯುವುದು. ಮೂರು ಚಕ್ರದ ಆಟದ ಗಾಡಿಯನ್ನು ಹಿಡಿದು ಮನೆಯೆಲ್ಲಾ ಓಡಾಡುವುದು. ಮೊಣಕೈ ಮೇಲೆ ಹತೋಟಿ ಹೆಚ್ಚಾಗಿ ಪುಸ್ತಕದ ಪುಟಗಳನ್ನು ತಿರುವಿ ಹಾಕುವುದು.

(೨) ಈ ವಯಸ್ಸಿನಲ್ಲಿ ಮಗು ತನ್ನ ಸಾಮಾನುಗಳು ಎಲ್ಲೆಲ್ಲಿ ಇರುವುವೆಂಬುದನ್ನು ತಿಳಿದಿರುವುದು. ಚಿತ್ರದಲ್ಲಿ ಗಾಡಿ ನಾಯಿ, ಗಡಿಯಾರ ಮೊದಲಾದುವು ಇದ್ದರೆ ಅವುಗಳನ್ನು ಗುರುತಿಸುವುದು. (ಒಂದು ವರ್ಷದ ವಯಸ್ಸಿನಲ್ಲಿ ಮಗುವಿಗೆ ಚಿತ್ರದಲ್ಲಿರುವ ಆಕಾರವು ತಿಳಿಯುವುದಿಲ್ಲ.) ಮೇಲಿನಿಂದ ಕೆಳಕ್ಕೆ ಗೆರೆಯೆಳೆದರೆ ತಾನೂ ಹಾಗೆ ಗೆರೆ ಎಳೆಯುವುದು. ನಾಲ್ಕಾರು ಮರದ ತುಂಡನ್ನು ಮುಂದಿಟ್ಟರೆ ಒಂದೊಂದಾಗಿ ಅವುಗಳನ್ನು ತೆಗೆದುಕೊಂಡು ಅವುಗಳಿಂದ ಗೋಪುರ ಕಟ್ಟಿ ಉರುಳಿಸುವುದು. ಹೀಗೆ ನಾಲ್ಕಾರು ಸಾಮಾನುಗಳಿಂದ ಆಡುವುದೇ ಮುಂದೆ ಎಣಿಕೆ ಮಾಡಲು ಆಧಾರವಾಗುವುದು. ಈ ವಯಸ್ಸಿನಲ್ಲಿ ಒಂದು ಕೆಲಸವು 'ಮುಗಿಯಿತು' ಎಂಬ ಅರಿವು ಬಂದಿರುವುದು. ಆಟವಾದಮೇಲೆ ಸಾಮಾನುಗಳನ್ನು ಹಿಂದಕ್ಕೆ ಕೊಟ್ಟುಬಿಡುವುದು. ಸಹಾಯಮಾಡಿದರೆ ಕೃತಜ್ಞತೆಯನ್ನು ತೋರಿಸುವುದು. ಕೇಳಿದರೆ ಕಣ್ಣು ಮೂಗು ಮುಂತಾದ ಅಂಗಗಳನ್ನು ತೋರಿಸುವುದು.

(೩) ಈ ಕಾಲದಲ್ಲಿ ಮಗು ಸದಾ ಏನಾದರೂ ಮಾತನಾಡುತ್ತಿರುವುದು. ಶಬ್ದಗಳನ್ನು ಮಾಡುವುದಕ್ಕೆ ಮಗುವಿಗೆ ಬಹಳ ಇಷ್ಟ. ಈ ವಯಸ್ಸಿಗೆ ಸರಿಯಾಗಿ ಹತ್ತು ಮಾತುಗಳನ್ನು ಕಲಿತಿರುವುದು. ಹಸಿವಾದರೆ 'ಊಟ ಎಂದು ಕೇಳುವುದು. ಹೊಟ್ಟೆ ತುಂಬಿದರೆ 'ಸಾಕು' ಎನ್ನುವುದು. ಒಂದು ವರ್ಷದ ಮಗು ತನಗೆ ಬೇಕಾದುದನ್ನು ಸನ್ನೆಯಿಂದ ತೋರಿಸುವುದಷ್ಟೆ; ಆದರೆ ಹದಿನೆಂಟು ತಿಂಗಳ ಮಗು ಸನ್ನೆಗಳ ಜೊತೆಯಲ್ಲಿ ಪದಗಳನ್ನೂ ಉಚ್ಚರಿಸುವುದು. 'ಬಾಯಿ ತೆಗೆ' 'ಚೆಂಡನ್ನು ಕುರ್ಚಿಯ ಮೇಲೆ ಹಾಕು' ಮುಂತಾದ ಆಜ್ಞೆಗಳಿಗೆ ತಕ್ಕಂತೆ ಕೆಲಸ ಮಾಡುವುದು.

(೪) ವ್ಯಕ್ತಿತ್ವದ ಜ್ಞಾನವು ಮುಂದುವರಿಯುವುದು. ತನ್ನ

ಸಾಮಾನುಗಳನ್ನು ' ತನ್ನದು ' ಎಂದು ತಿಳಿಯುವ ಶಕ್ತಿಯಿರುವುದು. ' ನೀನು ' ' ನಾನು ' ' ಅವನು ' ಎಂಬ ಭೇದಗಳನ್ನು ತಿಳಿದಿರುವುದು. ಮನೆಗೆ ಹೊಸಬರು ಬಂದರೆ ಅವರನ್ನು ಗಮನವಿಟ್ಟು ನೋಡುವುದು. ಈ ವಯಸ್ಸಿನಲ್ಲಿ ಮಗು ತನ್ನಷ್ಟಕ್ಕೆ ತಾನೇ ಆಡಿಕೊಂಡರೂ ಜೊತೆಯಲ್ಲಿರುವ ಮಗು ಬಿಟ್ಟುಹೋದರೆ ಅಳುವುದು ಅಥವಾ ಆ ಮಗುವಿನ ಜೊತೆಯಲ್ಲಿಯೇ ತಾನೂ ಹೋಗುವುದು. ತಾಯಿತಂದೆಗಳಿಗೆ ಸಣ್ಣಪುಟ್ಟ ಕೆಲಸಗಳಲ್ಲಿ ಎಷ್ಟೋ ಸಹಾಯಮಾಡುವುದು. ಸಣ್ಣ ಪದಾರ್ಥಗಳನ್ನು ತಂದುಕೊಡುವುದು. ಈ ವಯಸ್ಸಿನ ಮಗುವಿಗೆ ದಿನಚರಿ ಕೆಲಸಗಳು ಒಂದು ಕ್ರಮದಿಂದ ನಡೆಯಬೇಕು. ಆ ಕ್ರಮದಲ್ಲಿ ಬದಲಾವಣೆಯಾದರೆ ಮಗು ಕೂಗಾಡುವುದು, ನೆಲದಮೇಲೆ ಬಿದ್ದು ಹೊರಳಾಡಿ ತೊಂದರೆಯನ್ನುಂಟುಮಾಡುವುದು. ಒಂದು ವರ್ಷದ ಮಗುವಿಗಿಂತಲೂ ಈ ವಯಸ್ಸಿನ ಮಗು ಹೆಚ್ಚಾಗಿ ದೊಡ್ಡವರ ಕೆಲಸಗಳನ್ನು ಅನುಕರಿಸುವುದು.

## ಎರಡು ವರ್ಷಗಳಲ್ಲಿ

(೧) ಮೊಣಕಾಲು, ಕಾಲಿನ ಕೀಲು ಇವುಗಳ ಮೇಲಿನ ಹತೋಟಿಯು ಹೆಚ್ಚಿ ಶರೀರವನ್ನು ಸಮತೂಕದಲ್ಲಿಟ್ಟು ಚೆನ್ನಾಗಿ ಓಡಾಡುವುದು. ಯಾರ ಸಹಾಯವೂ ಇಲ್ಲದೆ ಮಹಡಿಯನ್ನು ಹತ್ತಿ ಇಳಿಯಬಲ್ಲುದು. ಚೆಂಡನ್ನು ' ಒದೆ ' ಎಂದರೆ ಒದೆಯುವುದು. ಹದಿನೆಂಟು ತಿಂಗಳಲ್ಲಿ ಪುಸ್ತಕದ ಹಾಳೆಗಳನ್ನು ಒಮ್ಮೆಗೆ ೩-೪ ರಂತೆ ತಿರುವಿಹಾಕುತ್ತಿದ್ದ ಮಗು ಈಗ ಒಂದೊಂದೇ ಹಾಳೆಯನ್ನು ಮಗುಚಿಹಾಕುವುದು. ಆರು ಮರದ ತುಂಡುಗಳಿಂದ ಗೋಪುರ ಕಟ್ಟುವುದು. ಕತ್ತರಿಯನ್ನು ಉಪಯೋಗಿಸಬಲ್ಲದು. ಸೂಜಿ ದಾರಗಳನ್ನು ತೆಗೆದುಕೊಂಡು ಮಣಿಗಳನ್ನು ಪೋಣಿಸುವುದು. ಎರಡು ಕೈಗಳಿಂದ ಹಾಲಿನ ಲೋಟವನ್ನು ಚೆಲ್ಲದೆ ಹಿಡಿಯುವುದು. ಕೆಲವು ಸಮಯದಲ್ಲಿ ಒಂದೇ ಕೈಯಲ್ಲಿಯೂ ಹಿಡಿಯುವುದು.

(೨) ಜ್ಞಾಪಕ ಶಕ್ತಿಯು ಹೆಚ್ಚುವುದು. ಕಾಣದಿರುವ ಆಟಗೆಗಳನ್ನು ಹುಡುಕುವುದು. ನಿನ್ನೆ ನಡೆದ ವಿಷಯಗಳನ್ನು ಸ್ಮರಣೆಗೆ

ತಂದುಕೊಳ್ಳುವುದು. ಹದಿನೆಂಟು ತಿಂಗಳಿನ ವಯಸ್ಸಿನಲ್ಲಿ ಚಕ್ರಾಕಾರದ ಮರದ ತುಂಡನ್ನು ಚಕ್ರಾಕಾರದ ರಂಧ್ರದಲ್ಲಿ ಇಡುವ ಸಾಮರ್ಥ್ಯವಿದ್ದ ಮಗು ೨೧ ತಿಂಗಳಿನಲ್ಲಿ ಚದರದ ರಂಧ್ರದಲ್ಲಿ ಚದರದ ತುಂಡನ್ನು ಸೇರಿಸುವಷ್ಟು ಶಕ್ತಿಯನ್ನು ಪಡೆದಿರುವುದು. ಚಿತ್ರಗಳನ್ನು ಗುರುತಿಸಬಲ್ಲುದು. ಕಪ್ಪು ಬಿಳುಪಿನ ವ್ಯತ್ಯಾಸವನ್ನು ತಿಳಿದಿರುವುದು. ಅನೇಕ ಬಣ್ಣಗಳ ಹೆಸರನ್ನು ತಿಳಿದಿದ್ದರೂ, ಬಣ್ಣಗಳನ್ನು ಗುರುತಿಸುವಷ್ಟು ಶಕ್ತಿಯಿರುವುದಿಲ್ಲ. ತಾನು ಕೇಳಿದುದನ್ನೂ, ನೋಡಿದುದನ್ನೂ ಅಭಿನಯಮಾಡುವುದು. ಮಾತನಾಡುವಾಗ ಮಾತಿಗೆ ತಕ್ಕಂತೆ ನಟಿಸುವುದು. ಕೆಲಸಮಾಡುವಾಗ, ಕೆಲಸಕ್ಕೆ ತಕ್ಕಂತೆ ಮಾತನಾಡುವುದು. ಒಂದು ಕಾಗದದ ಹಾಳೆಯನ್ನು ಸೊಟ್ಟವಾಗಿ ಮಡಿಸುವುದು. ಕಾರಣವೇನೆಂದರೆ ಕೈಗಳನ್ನು ಬೆರಳುಗಳನ್ನೂ ಎಲ್ಲಾ ದಿಕ್ಕುಗಳಲ್ಲಿಯೂ ಚಲನೆಮಾಡುವಷ್ಟು ಶಕ್ತಿಯಿರುವುದಿಲ್ಲ. ಹದಿನೆಂಟು ತಿಂಗಳಿನಲ್ಲಿ ಕುರ್ಚಿಯನ್ನು ತಳ್ಳಿ ಅದರಮೇಲೆ ಹತ್ತಿ ಆಡುತ್ತಿದ್ದ ಮಗು ಈಗ ತನಗೆ ಎಟುಕದಿರುವ ಪದಾರ್ಥವನ್ನು ತೆಗೆದುಕೊಳ್ಳಲು ಕುರ್ಚಿಯನ್ನು ಎಳೆದು ಅದರ ಮೇಲೆ ಹತ್ತಿ ತನ್ನ ಕಾರ್ಯವನ್ನು ಸಾಧಿಸಿಕೊಳ್ಳುವುದು.

(೩) ಬಾಯಿಗೆ ಬಂದ ಹಾಗೆ ಸದ್ದುಮಾಡುತ್ತಿದ್ದ ಮಗು ಈಗ ನೂರಾರು ಪದಗಳನ್ನು ಉಚ್ಚರಿಸಬಲ್ಲುದು. ಕೋಪ ಬಂದಾಗ ಮುಂಚಿನ ಹಾಗೆ ಅರ್ಥವಿಲ್ಲದ ಶಬ್ದಗಳನ್ನು ಹೇಳುವುದು. 'ಈ ಕೆಲಸ ಯಾರು ಮಾಡಿದರು' ಎಂದರೆ 'ನಾನು ಮಾಡಿದೆ' ಎನ್ನುವುದಕ್ಕೆ ಬದಲಾಗಿ 'ರಾಮ ಮಾಡಿದ' ಎಂದು ಹೇಳುವುದು. ತನ್ನ ವಿಷಯವನ್ನು ಹೇಳಿಕೊಳ್ಳಬೇಕಾದರ ತನ್ನ ಹೆಸರನ್ನೇ ಉಪಯೋಗಿಸುವುದು. ಅನೇಕ ವೇಳೆ ತನ್ನಷ್ಟಕ್ಕೆ ತಾನೆ ಮಾತನಾಡಿಕೊಳ್ಳುತ್ತಿರುವುದು. ತಾನು ಕೇಳಿದ ಮಾತುಗಳನ್ನು ಜಪಮಾಡುವಹಾಗೆ ಪದೇ ಪದೇ ಹೇಳಿಕೊಳ್ಳುತ್ತಿರುವುದು. ತನ್ನ ಅನುಭವಗಳನ್ನು ವಿವರಿಸಲು ಪ್ರಯತ್ನಿಸುವುದು. ವಸ್ತುಗಳನ್ನು ಗುರುತಿಸಿ ಅವುಗಳ ಹೆಸರನ್ನು ಹೇಳುವುದೆಂದರೆ ಮಗುವಿಗೆ ಬಹಳ ಇಷ್ಟ.

(೪) ಒಂದು ವರ್ಷದ ಮಗುವಿನಲ್ಲಿ ತನ್ನ ವ್ಯಕ್ತಿತ್ವದ ಅರಿವು ಬಹಳ ಕಡಿಮೆಯಾಗಿರುವುದು. ೧೮ ತಿಂಗಳ ಮಗುವಿನಲ್ಲಿ 'ಇದು ನನ್ನದು' ಎಂಬ ತಿಳಿವಳಿಕೆಯು ಸ್ವಲ್ಪಮಟ್ಟಿಗಿರುವುದು. ಆದರೆ ಎರಡು ವರ್ಷದ ಮಗುವಿನಲ್ಲಿ 'ಈ ವಸ್ತುಗಳು ನನ್ನವು' 'ಇವರು ನನ್ನ ತಂದೆ ತಾಯಿ' ಎಂಬ ಪರಿಜ್ಞಾನವು ದೃಢವಾಗಿರುವುದು. ಕನ್ನಡಿಯಲ್ಲಿ ತನ್ನ ಪ್ರತಿಬಿಂಬವನ್ನು ನೋಡಿದರೆ ಇದು 'ನಾನು' ಎಂದು ಗುರುತಿಸುವುದು ಅಥವಾ 'ಪಾಪನನ್ನು ನೋಡು' ಎನ್ನುವುದು. ಬೇರೆ ಮಕ್ಕಳ ಜೊತೆಯಲ್ಲಿ ಆಡುವುದು. ಈಗ ಮುಖ್ಯವಾಗಿ ಅವರ ಜೊತೆಯಲ್ಲಿ ಇರುವುದೇ ಹೊರತು ಅವರೊಡನೆ ಮಾತನಾಡಿ ಸಾಮಾಜಿಕ ಸಂಬಂಧವನ್ನು ಬೆಳೆಸುವುದಿಲ್ಲ. ಮನೆಯಲ್ಲಿ ದಿನಚರಿಯನ್ನು ತಕ್ಕಮಟ್ಟಿಗೆ ಅವಲಂಬಿಸಿರುವುದು. ಬಟ್ಟೆ ಹಾಕಿಕೊಳ್ಳುವಾಗ ತೆಗೆಯುವಾಗ ತಾಯಿಯೊಡನೆ ಸಹಕರಿಸುವುದು. ತನ್ನ ಅಂಗಿಯ ಗುಂಡಿಯನ್ನು ಹಾಕುವುದರಲ್ಲಿಯೂ, ತೆಗೆಯುವುದರಲ್ಲಿಯೂ ಆಸಕ್ತಿಯನ್ನು ತೋರಿಸುವುದು. ಚಮಚದಲ್ಲಿ ತಿಂಡಿಯನ್ನು ಚೆಲ್ಲದೆ ಬಾಯೊಳಗೆ ಹಾಕಿಕೊಳ್ಳುವುದು. ರಾತ್ರಿಯಲ್ಲಿ ಹಾಸಿಗೆಯಲ್ಲಿ ಉಚ್ಚೆ ಮಾಡದೆ ನಿದ್ರಿಸುವುದು. ಬೆಳಗಿನ ಹೊತ್ತು ಜಲಮಲ ವಿಸರ್ಜನೆಯನ್ನು ಕ್ರಮಬದ್ಧವಾಗಿ ಮಾಡುವುದು. ತಾಯಿತಂದೆಗಳು ಹೇಳಿದ ಸಣ್ಣ ಪುಟ್ಟ ಕೆಲಸಗಳನ್ನು ಮಾಡುವುದು. ಇತರರು ನಕ್ಕರೆ ಅವರೊಡನೆ ತಾನೂ ನಗುವುದು. ಬೇರೆಯವರನ್ನು ನಗಿಸಲು ಸಿಕ್ಕಾಬಟ್ಟೆ ಚೇಷ್ಟೆಮಾಡುವುದು. ಕರುಣೆ, ಅನುಕಂಪ, ನಾಚಿಗೆ, ಲಜ್ಜೆ ಮುಂತಾದ ಭಾವನೆಗಳನ್ನು ತೋರಿಸುವುದು. ಬೈದರೆ ಅಸಮಾಧಾನ ಹೊಂದುವುದು. ಹೊಗಳಿದರೆ ಸಂತೋಷಪಡುವುದು. ಹಾಸಿಗೆಯಲ್ಲೇನಾದರೂ ರಾತ್ರಿಯ ವೇಳೆ ಉಚ್ಚೆಮಾಡಿದರೆ ಬೆಳಗ್ಗೆ ನಾಚಿಗೆಯಿಂದ ತಲೆಬಾಗಿಸುವುದು.

## ಮೂರು ವರ್ಷಗಳಲ್ಲಿ

(೧) ಎರಡು ವರ್ಷದ ಮಗುವಿನಂತೆ ಮೂರು ವರ್ಷದ ಮಗುವಿಗೂ ಓಡಾಡುವುದೆಂದರೆ ಇಷ್ಟ. ಆದರೆ ಒಂದು ಕಡೆ ಕುಳಿತು

ಆಡುವುದೂ ಇಷ್ಟ. ಈ ವಯಸ್ಸಿನಲ್ಲ ಮಗು ಸೀಮೆಸುಣ್ಣ, ಬಳಪ, ಇದ್ದಿಲುಚೂರು ಮುಂತಾದುವುಗಳಿಂದ ಚಿತ್ರಬರೆಯುವುದು. ಕೈಯಿಂದ ಸಣ್ಣ ಕೆಲಸಗಳನ್ನು ಮಾಡುವುದೆಂದರೆ ಬಹಳ ಆಸೆ. ಎರಡು ವರ್ಷದ ಮಗು ೬-೭ ಮರದ ತುಂಡುಗಳಿಂದ ಗೋಪುರವನ್ನು ಕಟ್ಟಿದರೆ ಮೂರು ವರ್ಷದ ಮಗು ೯-೧೦ ತುಂಡುಗಳನ್ನು ಒಂದರಮೇಲೊಂದನ್ನಿಟ್ಟು ಗೋಪುರ ಕಟ್ಟುವುದು. ಕಾಗದವನ್ನು ಉದ್ದವಾಗಿ ಮಡಿಸುವುದು, ಅಗಲವಾಗಿ ಮಡಿಸುವುದು. ಆದರೆ ಮೂಲೆಯಿಂದ ಮೂಲೆಗೆ ಮಡಿಸಲಾರದು. ಎರಡು ಕಾಲುಗಳನ್ನು ಜೋಡಿಸಿ ನೆಗೆಯಬಲ್ಲುದು. ಮೂರು ಚಕ್ರದ ಸೈಕಲ್ಲಿನ ಮೇಲೆ ಸವಾರಿ ಮಾಡುವುದು.

(೨) ಈಗ ಮಗುವಿನ ಚಲನವಲನಗಳು ಅಚ್ಚುಕಟ್ಟಾಗಿರುವುವು. ನಾಲ್ಕು ಮರದ ತುಂಡುಗಳನ್ನು ಕೊಟ್ಟರೆ ಚದರಾಕಾರದಲ್ಲಿ ಜೋಡಿಸುವುದು; ಇಲ್ಲವೆ ಒಂದರ ಮಗ್ಗುಲಲ್ಲಿ ಮತ್ತೊಂದನ್ನಿಟ್ಟು 'ಇಂಜಿನ್' ಎನ್ನುವುದು. ಚಕ್ರಾಕಾರ ತ್ರಿಕೋಣ ಮತ್ತು ಚೌಕದ ಮರದ ತುಂಡುಗಳನ್ನು ಆಯಾ ಆಕಾರಗಳ ರಂಧ್ರಗಳಲ್ಲಿ ಜೋಡಿಸುವುದು. ಮೇಲಿನಿಂದ ಕೆಳಕ್ಕೂ, ಅಡ್ಡಡ್ಡಲಾಗಿಯೂ ಗೆರೆಗಳನ್ನು ಎಳೆಯಬಲ್ಲುದೇ ಹೊರತು, ಈ ಎರಡು ಗೆರೆಗಳನ್ನೂ ಬರೆದು ಶಿಲುಬೆಯ (†) ಆಕಾರವನ್ನು ಮಾಡಲಾರದು. ವೃತ್ತವನ್ನು ಬರೆದು ತೋರಿಸಿದರೆ ಅದನ್ನು ಅನುಕರಿಸಿ ಬರೆಯುವುದು. ಹೇಳಿದ ಮಾತಿಗೆ ತಕ್ಕಂತೆ ತನ್ನ ಚಲನೆಯನ್ನು ಬದಲಾಯಿಸಿಕೊಳ್ಳುವುದು. 'ಒಳಗೆ-ಹೊರಗೆ' 'ಮೇಲೆ-ಕೆಳಗೆ' 'ಹಿಂದೆ-ಮುಂದೆ' ಮುಂತಾದ ಸ್ಥಾನ ಸಂಬಂಧಗಳನ್ನು ತಿಳಿದು ಕೆಲಸ ಮಾಡುವುದು.

(೩) ಹದಿನೆಂಟು ತಿಂಗಳ ವಯಸ್ಸಿನಲ್ಲಿ ಸಿಕ್ಕಾಬಟ್ಟೆ ಸದ್ದುಗಳನ್ನು ಮಾಡುತ್ತಿದ್ದ ಮಗು ಎರಡು ವರ್ಷ ವಯಸ್ಸಿನಲ್ಲಿ ಪದಗಳನ್ನು ಉಪಯೋಗಿಸಲಾರಂಭಿಸಿ ಮೂರು ವರ್ಷದ ವಯಸ್ಸಿಗೆ ವಾಕ್ಯಗಳಿಂದ ಮಾತನಾಡುವುದು. ಎರಡು ವರ್ಷದ ಮಗು ಪದಗಳನ್ನು ಕಲಿತರೆ ಮೂರು ವರ್ಷದ ಮಗು ಪದಗಳನ್ನು ವಾಕ್ಯದಲ್ಲಿ ಉಪಯೋಗಿಸು

ವುದು. ತಾನು ನೋಡಿದುದನ್ನು, ಯೋಚಿಸಿದುನ್ನು, ಪದಾರ್ಥಗಳ ಪರಸ್ಪರ ಸಂಬಂಧವನ್ನೂ ವಾಕ್ಯಗಳ ಮೂಲಕ ಇತರರಿಗೆ ತಿಳಿಯ ಪಡಿಸುವುದು. ಸಾಧಾರಣವಾಗಿ ಒಂದು ಸಾವಿರ ಪದಗಳನ್ನು ಅರಿತಿರುವುದು. ಈಗಲೂ ತನ್ನಷ್ಟಕ್ಕೆ ತಾನೆ ನಟನೆ ಮಾಡಿ, ಮಾತನಾಡಿ ಮಾತುಗಳ ಮೇಲೆ ಹತೋಟಿಯನ್ನು ಮುಂದುವರಿಸುವುದು. ಮೊಸರು ಮಾರುವವಳ ಹಾಗೆ, ಮಿಠಾಯಿ ಮಾರುವವನ ಹಾಗೆ, ಮನೆಗೆ ಬಂದ, ವೈದ್ಯರ ಹಾಗೆ ನಟನೆ ಮಾಡಿ ಮಾತನಾಡಿ ಎಲ್ಲರನ್ನೂ ನಗಿಸುವುದು. ಈಗ ಬೇರೆಯವರು ಮಾತನಾಡಿದರೆ ಗಮನವಿಟ್ಟು ಕೇಳುವುದು. ಕೇಳಿ ತಿಳಿದುಕೊಳ್ಳುವುದು. ಯಾವಾಗ ನೋಡಿದರೂ ಪದಾರ್ಥಗಳ ಹೆಸರುಗಳನ್ನು ಹೇಳುತ್ತಿರುವುದೇ ಅಲ್ಲದೆ 'ಇದು ಏನು' 'ಇದು ಎಲ್ಲಿಗೆ' ಎಂದು ಪ್ರಶ್ನಿಸುತ್ತಿರುವುದು. ಈ ಪ್ರಶ್ನೆಗಳು ಮಗು ತಾನು ಕಂಡಿದ್ದನ್ನು ವರ್ಗೀಕರಣ ಮಾಡುವುದರ ಪ್ರಾರಂಭದ ಚಿಹ್ನೆ.

(ಳ) ತನ್ನ ಬಯಕೆಗಳನ್ನು ಮುಂದೆ ಸಫಲಮಾಡಿಕೊಳ್ಳಲು ಒಪ್ಪಿಕೊಳ್ಳುವುದು. 'ನಾಳೆ ಕೊಡುವೆನು' ಎಂದರೆ ಸುಮ್ಮನಾಗುವುದು. ತಿಂಡಿಯಲ್ಲಿ ಈಗ ಸ್ವಲ್ಪ ಕೊಟ್ಟು ಉಳಿದಿದ್ದು 'ನಾಳೆಗೆ ಇರಲಿ' ಎಂದರೆ ಒಪ್ಪಿಕೊಳ್ಳುವುದು. 'ಊಟ ಮಾಡಿದರೆ ಪೇಟೆಗೆ ಕರೆದುಕೊಂಡು ಹೋಗುವೆನು' ಎಂದರೆ ಊಟಮಾಡಿಕೊಳ್ಳುವುದು. ಈ ವಯಸ್ಸಿನಲ್ಲಿ ಭವಿಷ್ಯದ ಆಸೆ ತಲೆದೋರುವುದು. ಇತರರನ್ನು ಸಂತೋಷಪಡಿಸಬೇಕೆಂಬ ಇಚ್ಛೆಯು ಪ್ರಬಲವಾಗಿರುವುದು. ಬುದ್ಧಿಯ ಪರೀಕ್ಷಣಗಳಿಗೆ ಚೆನ್ನಾಗಿ ಹೊಂದಿಕೊಂಡು ಉತ್ತರ ಕೊಡುವುದು. ಸಣ್ಣ ಕೆಲಸಗಳಿಗಾಗಿ ಮನೆಯಲ್ಲಾಗಲೀ, ಮನೆಗೆ ಹತ್ತಿರದಲ್ಲಾಗಲೀ ಹೋಗಿಬರುವುದು. ಬೇರೆಯವರ ವ್ಯಕ್ತಿತ್ವವು ಇನ್ನೂ ಚೆನ್ನಾಗಿ ಮನದಟ್ಟಾಗಿರುವುದಿಲ್ಲ. ಈಗಲೂ ಕುರ್ಚಿ ಆಟಗೆಗಳ ಮೇಲೆ ಕೋಪಗೊಂಡು ಅವುಗಳನ್ನು ಬೈದು ಹೊಡೆದು ಮಾಡುವುದು. ಹೊಟ್ಟೆಯ ಕಿಚ್ಚು ಈ ವಯಸ್ಸಿನಲ್ಲಿ ತಲೆದೋರುವುದು. ಬೇರೆ ಮಕ್ಕಳನ್ನು ಪ್ರೀತಿಸಿದರೆ ಕೆಳಗೆ ಬಿದ್ದು ಹೊರಳಾಡಿ ಕೂಗಾಡುವುದು. ಆದರೆ ಬಹಳ ಹೊತ್ತು ಹಟಮಾರಿತನ ಮಾಡದೆ ಬೇಗ ಸಮಾಧಾನ ಹೊಂದುವುದು.

## ನಾಲ್ಕು ವರ್ಷಗಳಲ್ಲಿ

(೧) ಮಗು ಈ ವಯಸ್ಸಿನಲ್ಲಿ ನಿಂತ ಕಡೆಯಿಂದ ನೆಗೆಯುವುದೇ ಅಲ್ಲದೆ ಓಡುತ್ತ ಓಡುತ್ತ ನೆಗೆಯುವುದು. ಹಗ್ಗದ ಕುಣಿತ ವಾಡುವುದು. ಮೂರು ವರ್ಷದ ಮಗುವಿಗಿಂತಲೂ ಹೆಚ್ಚುಕಾಲ ಒಂದೇ ಕಾಲಿನ ಮೇಲೆ ನಿಲ್ಲಬಲ್ಲುದು. ಎರಡೂವರೆ ಅಂಗುಲದ ಹಲಗೆಯ ಮೇಲೆ ಬೀಳದೆ ನಡೆಯಬಲ್ಲುದು. ಚೆಂಡನ್ನು ಹಿಡಿದು ಚೆನ್ನಾಗಿ ಕೈಬೀಸಿ ತಲೆ ಬಳಸಿ ಎಸೆಯಬಲ್ಲುದು. ತನ್ನ ಅಂಗಿಯ ಗುಂಡಿಯನ್ನು ತಾನೇ ಹಾಕಿಕೊಳ್ಳುವುದು. ಜೋಡಿನ ದಾರವನ್ನು ತಾನೇ ಕಟ್ಟಿಕೊಳ್ಳುವುದು. ಶಿಲುಬೆ(†)ಆಕೃತಿಯಲ್ಲಿ ಗೆರೆ ಎಳೆದು ತೋರಿಸಿದರೆ ಅದರಂತೆ ಬರೆಯುವುದು; ಆದರೆ ವಜ್ರದ (◊) ಆಕಾರವನ್ನು ನೋಡಿ ಬರೆಯಲು ಇನ್ನೂ ಸಾಮರ್ಥ್ಯ ಸಾಲದು. ಕಾಗದವನ್ನು ಅಡ್ಡಲಾಗಿ, ನಂತರ ಉದ್ದವಾಗಿ ಆಮೇಲೆ ಮೂಲೆಯಿಂದ ಮೂಲೆಗೆ ಈ ರೀತಿ ಮೂರು ಮಡಿಕೆಗಳಲ್ಲಿ ಮಡಿಸುವುದು.

(೨) ವರ್ಗೀಕರಣಮಾಡುವುದೆಂದರೆ ಮಗುವಿಗೆ ಈ ವಯಸ್ಸಿನಲ್ಲಿ ಬಹು ಇಷ್ಟ. ಒಂದರಿಂದ ನಾಲ್ಕರವರೆವಿಗೂ ಎಣಿಸಲು ಬಂದರೂ, ಪದಾರ್ಥಗಳನ್ನು ಒಂದು ಎರಡು ತುಂಬ (ಬಹಳ) ಎಂದು ಎಣಿಸುವುದು. 'ಕಾಲ್ಪನಿಕ ಜೊತೆಗಾರನೊಂದಿಗೆ ಆಟವಾಡಿಕೊಳ್ಳುವುದು. ಯೋಚನೆಗಳು ಒಂದರ ಹಿಂದೆ ಒಂದು ಹೋಗುವುದೇ ಹೊರತು ಸಂಯುಕ್ತವಾಗಿ ಒಮ್ಮೆಗೇ ಹೊಳೆಯುವುದಿಲ್ಲ. ನಾಲ್ಕಾರು ಘಟನೆಗಳನ್ನು ಒಟ್ಟುಗೂಡಿಸುವ ಯೋಚನೆಯು ಹುಟ್ಟುವುದಿಲ್ಲ. ಅಲ್ಲದೆ ಪದಗಳನ್ನು ಅಕ್ಷರಶಃ ಅರ್ಥಮಾಡಿಕೊಳ್ಳುವುದರಿಂದ ಉಪಮಾನಗಳು, ಕಟ್ಟುಕತೆಗಳು ನಿಜವೆಂದೇ ತಿಳಿದುಕೊಳ್ಳುವುದು. ಒಬ್ಬ ಮನುಷ್ಯನ ಆಕಾರವನ್ನು ಬರೆಯಲಾರಂಭಿಸುವುದು. ಆದರೆ ಆ ಚಿತ್ರದಲ್ಲಿ ತಲೆ ಕೈಕಾಲುಗಳನ್ನು ಮಾತ್ರ ಬರೆಯುವುದು. ಕೆಲವು ವೇಳೆ ಕಣ್ಣುಗಳನ್ನು ಸಹ ಗುರುತಿಸಿದರೂ ಗರುತಿಸಬಹುದು.

(೩) ಈ ಕಾಲದಲ್ಲಿ ಪ್ರಶ್ನೆಗಳನ್ನು ಕೇಳುವುದು ಬಹಳ. "ಏಕೆ ಹೀಗಾಗುವುದು?" "ಇದು ಹೇಗೆ ಆಗುವುದು?" ಎಂದ್ಯ

ಕಾರಣಗಳನ್ನು ತಿಳಿಯುವ ಪ್ರಶ್ನೆಗಳನ್ನು ಕೇಳುವುದು.

(೪) ತನ್ನ ಕೆಲಸಗಳನ್ನು ಸ್ವತಃ ಮಾಡಿಕೊಳ್ಳಲು ಇಷ್ಟಪಡುವುದು. ತಂದೆತಾಯಿಗಳ ಮೇಲೆ ಈಗ ಅಷ್ಟೊಂದು ಆಧಾರವಾಗಿರುವುದಿಲ್ಲ. ತನ್ನ ಬಟ್ಟೆಗಳನ್ನು ತಾನೇ ಹಾಕಿಕೊಳ್ಳುವುದು ತೆಗೆಯುವುದು. ಹಲ್ಲು ತಿಕ್ಕಿಕೊಳ್ಳುವುದು. ಈಗಲೂ ಒಂಟಿಯಾಗಿ ಆಡಿಕೊಳ್ಳುವುದು. ಆದರೆ ಇತರರ ಜೊತೆಯಲ್ಲಿ ಆಡಲು ಬಹಳ ಇಷ್ಟ. ಆಟದಲ್ಲಿ ಒಬ್ಬರಾದ ಮೇಲೊಬ್ಬರು ಎಂದು ನಿಶ್ಚಯಿಸಿಕೊಂಡು ತನ್ನ ಸರದಿಗಾಗಿ ಕಾಯುವುದು. ಆಟದಲ್ಲಿ ಯಜಮಾನತನವನ್ನು ವಹಿಸಿ ಬೇರೆಯವರು ಏನೇನು ಮಾಡಬೇಕೆಂದು ಅಪ್ಪಣೆ ಮಾಡುವುದು. 'ನಾನು' 'ನನ್ನದು' ಎಂಬ ಸರ್ವನಾಮಗಳನ್ನು ಯಥೇಚ್ಛವಾಗಿ ಉಪಯೋಗಿಸುವುದು. 'ನನಗೆಲ್ಲಾ ಗೊತ್ತು' 'ನಾನು ಎಲ್ಲಾ ಕೆಲಸಗಳನ್ನೂ ಮಾಡುತ್ತೇನೆ' ಎಂಬ ಆತ್ಮಭರವಸೆಯ ಮಾತುಗಳು ಹೇರಳವಾಗಿರುವುವು. ಈ ಕಾಲದಲ್ಲಿ ನಿಷ್ಕಾರಣವಾದ ಹೆದರಿಕೆಗಳು ತಲೆದೋರುವುವು. ಕತ್ತಲೆಯನ್ನು ನೋಡಿದರೆ, ಮುದುಕರನ್ನು ಕಂಡರೆ, ಹೆದರಿಕೊಳ್ಳುವುದು. 'ಬುರುಡೆ ಹೊಡೆಯುವುದು' ಈ ವಯಸ್ಸಿನ ವಿಶೇಷಸಂಗತಿ. ತಾನು 'ಮಾಡಬೇಕೆಂ'ಬುದನ್ನು 'ಮಾಡಿ ಆಯಿತು' ಎಂದು ಹೇಳುವುದು. ಈ ವಯಸ್ಸಿನಲ್ಲಿ, ಮಗು ಸತ್ಯವಾಗಿ ನಡೆದುದಕ್ಕೂ ಊಹೆಗಳಿಗೂ ಇರುವ ವ್ಯತ್ಯಾಸವನ್ನು ಸ್ಪಷ್ಟವಾಗಿ ತಿಳಿಯಲಾರದು.

## ಐದು ವರ್ಷಗಳಲ್ಲಿ

ಐದು ವರ್ಷಗಳ ವಯಸ್ಸಿಗೆ ಮಗು ಹುಡುಗನಾಗುವನು. ಮನೆಯನ್ನೇ ಸೇರಿಕೊಂಡಿರುವುದಿಲ್ಲ. ಮನೆಯ ಹೊರಗೆ ಹೋಗುವುದಕ್ಕೂ ಹೊರಗಿನವರ ಜೊತೆಯಲ್ಲಿ ಆಟವಾಡಿಕೊಳ್ಳುವುದಕ್ಕೂ ಬಹಳ ಇಷ್ಟವಿರುವುದು. ನಾಲ್ಕು ವರ್ಷದ ಮಗುವಿಗಿಂತ ಐದು ವರ್ಷದ ಮಗುವಿಗೆ ಪ್ರಕೃತಿಯ ಜ್ಞಾನ, ಇತರರ ಸ್ವಭಾವ ನಡೆವಳಿಕೆಗಳು ಮತ್ತು ತನ್ನ ವ್ಯಕ್ತಿತ್ವ ಇವುಗಳನ್ನು ಹೆಚ್ಚಾಗಿ ತಿಳಿದುಕೊಂಡಿರುವುದು.

(೧) ಹಗ್ಗದ ಕುಣಿತವನ್ನು ಸರಾಗವಾಗಿ ಮಾಡುವುದು.

ಒಂದು ಕಾಲಿನಮೇಲೆ ಕಷ್ಟವಿಲ್ಲದೆ ನಿಲ್ಲುವುದು. ಒಂದೆರಡು ನಿಮಿಷ ಕಾಲು ಬೆರಳುಗಳ ಮೇಲೆಯೂ ನಿಂತು ಶರೀರವನ್ನು ಸಮತೂಕದಲ್ಲಿಡುವುದು. ನೃತ್ಯವನ್ನು ಕಲಿಯುವಷ್ಟು ಸಾಮರ್ಥ್ಯವು ಬರುವುದು. ವ್ಯಾಯಾಮ ಮಾಡುವುದು. ಸೀಮೆಸುಣ್ಣವನ್ನು ಯಾವ ಸಂದೇಹವೂ ಇಲ್ಲದೆ ಕೈಯಲ್ಲಿ ಹಿಡಿದು ಬರೆಯುವುದು. ಗೆರೆಗಳನ್ನು ಅಡ್ಡಲಾಗಿ, ಉದ್ದವಾಗಿ, ಮೂಲೆಯಿಂದ ಮೂಲೆಗೆ, (— | /) ನೇರವಾಗಿ ಬರೆಯುವುದು. ಚೌಕ ಮತ್ತು ತ್ರಿಕೋಣಾಕಾರಗಳನ್ನು ಸುಲಭವಾಗ ನೋಡಿ ಬರೆಯುವುದು. ಆದರೆ ಇನ್ನೂ, ಕಷ್ಟಪಟ್ಟೇ ◊ ವಜ್ರದ ಆಕಾರವನ್ನು ಬರೆಯುವುದು. ಇದರಿಂದಲೇ ಮಗುವಿಗೆ ಐದು ವರ್ಷ ವಯಸ್ಸಾದರೂ, ಓದುಬರೆಹಗಳನ್ನು ಕಲಿಯುವಷ್ಟು ಶಕ್ತಿ ಬಂದಿರುವುದಿಲ್ಲ. ಐದು ವರ್ಷದ ಮಗುವಿಗೆ ಪ್ರಾಥಮಿಕ ಶಾಲೆ ಗಳಿಗೆ ಕಳುಹಿಸಿ ವಿದ್ಯಾಭ್ಯಾಸವನ್ನು ಆರಂಭಿಸುವುದು ಅನುಚಿತ; ಮತ್ತು ನಿಷ್ಪ್ರಯೋಜಕವಾದುದು. ಇನ್ನೊಂದು ವರ್ಷವಾದ ಮೇಲೆ ಹೆಚ್ಚು ಬೆಳವಣಿಗೆಯನ್ನು ಹೊಂದಿ ಓದುಬರೆಹಗಳನ್ನು ಸುಲಭವಾಗಿ ಕಲಿಯುವುದು.

(೨) ಆಕೃತಿಯ ತಿಳಿವಳಿಕೆಯು ಇನ್ನೂ ಸ್ವಲ್ಪ ಮುಂದುವರಿಯುವುದು. ಎರಡು ತ್ರಿಕೋಣಗಳನ್ನು ಸೇರಿಸಿ ಚತುರ್ಭುಜವನ್ನು ನಿರ್ಮಿಸುವುದು. ಗೊಡ್ಡಾರ್ಡ್ ಫಾರ್ಮ್ ಬೋರ್ಡನ್ನು* ಈಗ ಸರಾಗವಾಗಿ ಬಗೆಹರಿಸುವುದು. ತನ್ನ ಕೆಲಸಗಳನ್ನು ಒಂದು ಕ್ರಮದಿಂದ ಮಾಡುವುದು. ಆಟವಾಡಿದ ಮೇಲೆ ತನ್ನ ಆಟಿಗೆಗಳನ್ನು ಅವುಗಳ ಜಾಗದಲ್ಲಿ ಇಡುವುದು. ಈಗ ಮಗು ಬರೆಯುವ ಮನುಷ್ಯ ಚಿತ್ರದಲ್ಲಿ ಹೆಚ್ಚು ವಿವರಗಳಿರುವುವು. ಪ್ರಾರಂಭಮಾಡಿದ ಕೆಲಸವನ್ನು ಮುಗಿಸ

---

* ಇದರಲ್ಲಿ ಚೌಕ, ತ್ರಿಕೋಣ, ವೃತ್ತ ಮುಂತಾದ ಆಕಾರದಲ್ಲಿ ಒಂದು ಮರದ ಹಲಗೆಯಲ್ಲಿ ಹಳ್ಳಗಳನ್ನು ಕೆತ್ತಿರುವರು. ಈ ಆಕಾರದ ಮರದ ತುಂಡುಗಳನ್ನು ಆಯಾ ಆಕಾರದ ಹಳ್ಳಗಳಲ್ಲಿ ಜೋಡಿಸಲು ಮಗು ತೆಗೆದುಕೊಳ್ಳುವ ಕಾಲವನ್ನು ಗುರುತು ಹಚ್ಚಿ ಅದರ ಬುದ್ಧಿಶಕ್ತಿಯನ್ನು ಅಳೆಯಬಹುದು.

ಬೇಕೆನ್ನುವ ದೃಢಬುದ್ಧಿ ಹುಟ್ಟುವುದು. ಆದರೆ ನಾಲ್ಕು ವರ್ಷ ವಯಸ್ಸಿನ ಮಗುವಿಗೆ ಕೆಲಸವನ್ನು ಮುಗಿಸಬೇಕೆಂಬ ಯೋಚನೆಯಿರುವುದಿಲ್ಲ. ಐದುವರ್ಷದ ಮಗು ಒಂದರಿಂದ ಹತ್ತರವರೆವಿಗೆ ಎಣಿಸುವುದು. ತನ್ನ ವಯಸ್ಸನ್ನು ಸಹ ಹೇಳಬಲ್ಲುದು. ಕಾಲದ ಪರಿಜ್ಞಾನವು ಹೆಚ್ಚುವುದು. ಕತೆ ಹೇಳುವಾಗ ಕಾಲದ ಕ್ರಮದಲ್ಲಿ ತಪ್ಪುಮಾಡುವುದಿಲ್ಲ.

(೩) ಐದುವರ್ಷದ ಮಗು ಬಾಲಭಾಷೆಯನ್ನು ಬಿಟ್ಟು ಶಬ್ದಗಳನ್ನು ಸ್ಪಷ್ಟವಾಗಿ ಉಚ್ಚರಿಸುವುದು. ಪ್ರಶ್ನೆಗಳು ಕಡಿಮೆಯಾಗುವುವು. ತನಗೆ ಯಾವ ಅಂಶದಲ್ಲಿ ಉತ್ತರ ದೊರೆಯಬೇಕೋ ಅದನ್ನು ಮಾತ್ರ ಕುರಿತು ಪ್ರಶ್ನಿಸುವುದು. ಇದುವರೆವಿಗೂ ಪ್ರಶ್ನೆ ಕೇಳುತ್ತಿದ್ದುದು ತಿಳಿವಳಿಕೆಗೋಸ್ಕರವಲ್ಲ. ಜೊತೆಯವರೊಡನೆ ಸಂಭಾಷಣೆಯನ್ನು ಮುಂದುವರಿಸಲು ಮಾತ್ರ ಮತ್ತು ಮಾತನ್ನು ಅಭ್ಯಾಸ ಮಾಡುವುದಕ್ಕೋಸ್ಕರ. ಒಂದು ಪದದ ಲಕ್ಷಣ ನಿರೂಪಣೆಯನ್ನು ಮಾಡಬೇಕಾದರೆ ಆ ವಸ್ತುವಿನ ಉಪಯೋಗವನ್ನೇ ಆಧಾರವಾಗಿಟ್ಟುಕೊಳ್ಳುವುದು. ‘ ಕುದುರೆ ಏನು ’ ಎಂದರೆ ‘ ಗಾಡಿ ಎಳೆಯುವುದು ’ ‘ ಅದರ ಮೇಲೆ ಸವಾರಿ ಮಾಡುವರು ’ ಎಂದು ಉತ್ತರ ಕೊಡುವುದು. ಈ ವಯಸ್ಸಿನಲ್ಲಿ ಮಗು, ಕಟ್ಟುಕತೆಗಳಲ್ಲಿ ಅಭಿರುಚಿ ಕಡಿಮೆಯಾಗಿ, ಸತ್ಯಾಂಶವನ್ನು ತಿಳಿಯಲು ಹೆಚ್ಚು ಆಸಕ್ತಿಯನ್ನು ತೋರಿಸುವುದು. ಅದರ ವಾಕ್ಯಗಳು ಪೂರ್ಣವಾಕ್ಯಗಳಾಗಿರುವುವು. ಎಲ್ಲಾ ತರಹದ ವಾಕ್ಯಗಳನ್ನೂ ಉಪಯೋಗಿಸುವುದು.

(೪) ತಂದೆತಾಯಿಗಳಲ್ಲಿ ವಿಧೇಯತೆಯನ್ನು ತೋರಿಸುವುದು. ಮನೆಕೆಲಸಗಳಲ್ಲಿ ಹೆಚ್ಚು ಆಸಕ್ತಿಯನ್ನು ತೋರಿಸಿ, ಗುಡಿಸುವುದು, ಒರಸುವುದು, ಮುಂತಾದ ಕೆಲಸಗಳನ್ನು ಮಾಡುವುದು. ಚಿಕ್ಕಮಕ್ಕಳನ್ನು ಆದರದಿಂದ ಕಾಣುವುದು. ತನ್ನ ಹೆಸರು, ತಂದೆಯ ಹೆಸರು, ವಿಳಾಸಗಳನ್ನು ಹೇಳಬಲ್ಲುದು. ಮೂರುನಾಲ್ಕು ಮಕ್ಕಳ ಜೊತೆಯಲ್ಲಿ ಸೇರಿ ಆಡುವುದು. ಸ್ಪರ್ಧೆಯ ಭಾವನೆಯು ಹೆಚ್ಚುವುದು. ಮೂರು ಚಕ್ರದ ಗಾಡಿಯಮೇಲೆ ಕುಳಿತು ಓಡಾಡುವುದು. ಬಣ್ಣದ ಸೀಸದ ಕಡ್ಡಿಗಳಿಂದ ಚಿತ್ರವನ್ನು ಬರೆಯುವುದು. ಕತ್ತರಿಯಿಂದ ಕಾಗದ

ಕತ್ತರಿಸುವುದು. ಮನೆ ಬಿಟ್ಟು ವಿಹಾರಾರ್ಥವಾಗಿ ಸಂಚರಿಸುವುದೆಂದರೆ ಬಹಳ ಇಷ್ಟ. ಇತರ ಮಕ್ಕಳ ಜೊತೆಯಲ್ಲಿ ಸೇರಿ, ಮನೆ ಕಟ್ಟುವುದು, ಮೃಗಶಾಲೆಯನ್ನು ನಿರ್ಮಿಸುವುದು, ಈ ಆಟಗಳಲ್ಲಿ ಒಂದೊಂದು ಮಗೂ ಪ್ರತ್ಯೇಕ ಕೆಲಸಗಳನ್ನು ಮಾಡಿ ಒಂದು ಯೋಜನೆಯನ್ನು ಮುಗಿಸಲು ನೆರವಾಗುವುದು.

## ೨. ಬುದ್ಧಿಶಕ್ತಿಯನ್ನು ಅಳೆಯುವ ಕ್ರಮ

ಮಕ್ಕಳು ಬೆಳೆಯುತ್ತ ಬೆಳೆಯುತ್ತ ಒಂದೊಂದು ಅಂಶದಲ್ಲಿಯೂ ಅಭಿವೃದ್ಧಿಯನ್ನು ಪಡೆಯುವರೆಂದು ಮೇಲಿನ ವಿವರಗಳು ವ್ಯಕ್ತಪಡಿಸುವುವು. ಅಭಿವೃದ್ಧಿ ಹೊಂದುವುದೇ ಅಲ್ಲದೆ ಒಂದೊಂದು ವಯಸ್ಸಿನಲ್ಲಿಯೂ ಯಾವ ಕೆಲಸವನ್ನು ಮಾಡಲು ಚೈತನ್ಯವಿಲ್ಲ; ಎಂಬುದನ್ನು ನಿರ್ಧರವಾಗಿ ಕಂಡುಹಿಡಿಯಲು ಸಾಧ್ಯ ಎಂದು ತಿಳಿದುಬಂದಿದೆ. ಇದರ ಆಧಾರದಮೇಲೆ ಮಗುವಿನ ಬೆಳೆವಣಿಗೆಯನ್ನು ಅಳೆಯಲು ಪ್ರಯತ್ನಗಳು ನಡೆದಿವೆ.

ಆರು ತಿಂಗಳ ವಯಸ್ಸಿನ ಮಗುವಿನ ಬುದ್ಧಿಶಕ್ತಿಯನ್ನು ಅಳೆಯಬೇಕಾದರೆ ಅದಕ್ಕೆ ಮೂರುತಿಂಗಳು ವಯಸ್ಸಿನ ಮಗು ಮಾಡುವ ಕೆಲಸವನ್ನೂ, ಆರುತಿಂಗಳು ವಯಸ್ಸಿನ ಮಗು ಮಾಡುವ ಕೆಲಸಗಳನ್ನೂ ಮತ್ತು ಒಂಭತ್ತು ತಿಂಗಳು ವಯಸ್ಸಿನ ಮಗು ಮಾಡುವ ಕೆಲಸಗಳನ್ನೂ ಕೊಟ್ಟರೆ ಆ ಮಗು ಮೂರು ತಿಂಗಳ ಆರು ತಿಂಗಳ ವಯಸ್ಸಿನ ಮಕ್ಕಳು ಮಾಡುವ ಕೆಲಸಗಳನ್ನು ಮಾಡಿ ಒಂಭತ್ತು ತಿಂಗಳ ಮಗು ಮಾಡುವ ಕೆಲಸಗಳನ್ನು ಮಾಡದೆ ಹೋದರೆ ಅದರ ಬುದ್ಧಿಶಕ್ತಿಯು ಅದರ ವಯಸ್ಸಿಗೆ ಸರಿಯಾಗಿದೆಯೆಂದು ನಿರ್ಣಯಿಸಬಹುದು. ಮತ್ತೊಂದು ಮಗು ಆರೇ ತಿಂಗಳು ವಯಸ್ಸಿನದಾದರೂ, ಒಂಭತ್ತು ತಿಂಗಳ ಮಗು ಮಾಡುವ ಕೆಲಸಗಳನ್ನು ಮಾಡಿದರೆ ಆಗ ಅದು ತನ್ನ ವಯಸ್ಸಿಗಿಂತಲೂ ಹೆಚ್ಚು ಬುದ್ಧಿಶಕ್ತಿಯನ್ನು ಪಡೆದಿರುವುದೆಂದು ಹೇಳಬಹುದು. ಅಂದರೆ ವಯಸ್ಸು ಆರು ತಿಂಗಳಾದರೂ, ಒಂಭತ್ತು ತಿಂಗಳ ವಯಸ್ಸಿನ ಮಗುವಿನ ಬುದ್ಧಿಶಕ್ತಿ ಅಷ್ಟಿರುವುದೆಂದು

ಹೇಳಬಹುದು. ಮತ್ತೊಂದು ಮಗು ವಯಸ್ಸು ಆರು ತಿಂಗಳಾದರೂ ಮೂರು ತಿಂಗಳ ಮಗು ಮಾಡುವ ಕೆಲಸಗಳನ್ನು ಮಾತ್ರ ಮಾಡಿ, ಆರು ತಿಂಗಳ ಮಗು ಮಾಡುವ ಕೆಲಸಗಳಲ್ಲಿ ಒಂದೆರಡನ್ನು ಮಾಡಿ ಮಿಕ್ಕುವನ್ನು ಮಾಡದಿರಬಹುದು. ಇಂತಹ ಮಗುವಿಗೆ ದೈಹಿಕ ವಯಸ್ಸು ಆರು ತಿಂಗಳಾದರೂ, ಮಾನಸಿಕ ವಯಸ್ಸು ಮೂರು-ನಾಲ್ಕು ತಿಂಗಳೆಂದೇ, ನಿರ್ಣಯಿಸಬಹುದು. ಈ ರೀತಿ ಯಾವ ವಯಸ್ಸಿನ ಮಗುವನ್ನು ತೆಗೆದುಕೊಂಡರೂ, ಅದರ ದೈಹಿಕ ವಯಸ್ಸಿಗೂ ಮಾನಸಿಕ ವಯಸ್ಸಿಗೂ ಇರುವ ಸಂಬಂಧವನ್ನು ಈ ಪರೀಕ್ಷೆಗಳ ಮೂಲಕ ನಿರ್ಧರಿಸಬಹುದು.

ಮೈಸೂರು ವಿಶ್ವವಿದ್ಯಾಲಯದಲ್ಲಿ ೧೯೩೦ ನೆಯ ಇಸವಿಯಲ್ಲಿ ಶ್ರೀಮರ್ಾ, ವಿ. ವೆಂಕಟಾಚಾರ್ ಅವರು ತಮ್ಮ ಎಂ.ಎ. ಪರೀಕ್ಷೆಗೆ ಕುಳಿತಿದ್ದಾಗ ಒಂದು ವರ್ಷದೊಳಗಿನ ವಯಸ್ಸಿನ ಮಕ್ಕಳ ಬುದ್ಧಿಶಕ್ತಿಯನ್ನು ಅಳೆದು ಒಂದೊಂದು ವಯಸ್ಸಿಗೆ ಯಾವಯಾವ ಪರೀಕ್ಷಣಗಳನ್ನು ನಡೆಸಿದರೆ ಉಚಿತವಾಗುವುದು ಎಂಬುದನ್ನು ಕಂಡುಹಿಡಿಯಲು ಅಮೆರಿಕದ ಗೆಸೆಲ್ ಮಾಡಿದ ಕೆಲಸವನ್ನು ಇವರು ಮೈಸೂರುದೇಶದಲ್ಲಿ ಮುಂದುವರಿಸಿದರು. ಇದರ ಫಲಿತಾಂಶವಾಗಿ ಕಂಡುಬಂದ ಅಂಶಗಳನ್ನು ಇಲ್ಲಿ ಸಂಗ್ರಹಿಸಲಾಗಿದೆ. ೧೦೫ ಮಕ್ಕಳನ್ನು ಪರೀಕ್ಷಿಸಲಾಯಿತು. ಈ ಮಕ್ಕಳ ವಯಸ್ಸು ೪ ತಿಂಗಳಿನಿಂದ ೧೨ ತಿಂಗಳವರೆಗೆಯಿತ್ತು. ಈ ಮಕ್ಕಳು ಎಲ್ಲಾ ಕೋಮುಗಳಿಗೆ ಸೇರಿದ ಮಕ್ಕಳಾಗಿದ್ದರು. ಅವರಲ್ಲಿ ಅನಕ್ಷರಸ್ಥರ ಮನೆಯ ಮಕ್ಕಳೂ, ನಾನಾಮಟ್ಟದ ಸಂಸ್ಕೃತಿಯ ಮತ್ತು ಆರ್ಥಿಕಸ್ಥಿತಿಯ ಮನೆತನದ ಮಕ್ಕಳೂ ಇದ್ದರು. ಈ ಮಕ್ಕಳನ್ನು ಅವರ ನಾಲ್ಕನೆಯ ತಿಂಗಳ ಹುಟ್ಟಿದ ದಿವಸ, ೬, ೯, ಮತ್ತು ೧೨ ತಿಂಗಳ ಹುಟ್ಟಿದ ದಿನಗಳಲ್ಲಿ ಸರಿಯಾಗಿ ಅಥವಾ ಆ ವಾರದೊಳಗೆಯೇ ಪರೀಕ್ಷಿಸಲಾಯಿತು. ೪, ೬, ೯ ಮತ್ತು ೧೨ ತಿಂಗಳ ಮಕ್ಕಳಿಗೆ ಉಚಿತವಾದ ಪರೀಕ್ಷಣಗಳನ್ನು ನಿರ್ಧರಿಸಲು ಒಂದು ಮಾರ್ಗವನ್ನು ಅವಲಂಬಿಸಲಾಯಿತು. ಇದನ್ನು ಮುಂದಿನ ಪಟ್ಟಿಯಲ್ಲಿ ವಿವರಿಸಲಾಗಿದೆ.

## ಪಟ್ಟಿ ೪.

## ವಯಸ್ಸಿಗೆ ತಕ್ಕ ಕೆಲಸಗಳನ್ನು ನಿರ್ಧರಿಸುವ ಕ್ರಮ.

I. ನಾಲ್ಕು ತಿಂಗಳ ವಯಸ್ಸಿಗೆ—

| ಪರೀಕ್ಷಣದ ಕಾರ್ಯ | ಉತ್ತೀರ್ಣರಾದವರ ಶೇಕಡ ೪ ತಿಂಗಳ ವಯಸ್ಸಿನಲ್ಲಿ | ೬ ತಿಂಗಳ ವಯಸ್ಸಿನಲ್ಲಿ |
|---|---|---|
| ೧) ತಲೆಯನ್ನು ಎತ್ತಿ ಹಿಡಿಯುವುದು | ೮೮ | ೧೦೦ |
| ೨) ಚಮಚವನ್ನು ದೃಷ್ಟಿಸಿ ನೋಡುವುದು | ೮೫ | ೧೦೦ |
| ೩) ಗಂಟೆಯ ಶಬ್ದಕ್ಕೆ ತಲೆ ತಿರುಗಿಸುವುದು | ೭೬ | ೧೦೦ |

II. ಆರು ತಿಂಗಳ ವಯಸ್ಸಿಗೆ—

| | ೪ ತಿಂಗಳ ವಯಸ್ಸಿನಲ್ಲಿ | ೬ ತಿಂಗಳ ವಯಸ್ಸಿನಲ್ಲಿ | ೯ ತಿಂಗಳ ವಯಸ್ಸಿನಲ್ಲಿ |
|---|---|---|---|
| ೧) ಘನಾಕಾರದ ಮರದ ತುಂಡನ್ನು ಎತ್ತಿಕೊಳ್ಳುವುದು | ೧೬ | ೮೮ | ೧೦೦ |
| ೨) ಬೋರಲಾಗಿರುವ ಬಟ್ಟಲನ್ನು ಮಗುಚಿಹಾಕುವುದು | ೦ | ೮೮ | ೧೦೦ |
| ೩) ನೇತಾಡುತ್ತಿರುವ ಬಳೆಯನ್ನು ಹಿಡಿಯುವುದು | ೨೪ | ೮೪ | ೧೦೧ |
| ೪) ಸಹಾಯದಿಂದ ಕುಳಿತುಕೊಳ್ಳುವುದು | ೪೦ | ೭೫ | ೧೦೦ |

III. ಒಂಭತ್ತು ತಿಂಗಳ ವಯಸ್ಸಿಗೆ—

| | ೬ ತಿಂಗಳ ವಯಸ್ಸಿನಲ್ಲಿ | ೯ ತಿಂಗಳ ವಯಸ್ಸಿನಲ್ಲಿ | ೧೨ ತಿಂಗಳ ವಯಸ್ಸಿನಲ್ಲಿ |
|---|---|---|---|
| ೧) ಸ್ವತಃ ಕುಳಿತುಕೊಳ್ಳುವುದು | ೨೧ | ೮೮ | ೧೦೦ |

| | | | |
|---|---|---|---|
| ೨) ಪ್ರತಿಬಿಂಬದೊಡನೆ ಆಡುವುದು | ೫೬ | ೮೦ | ೯೬ |
| ೩) ಮುಚ್ಚಿಟ್ಟಿರುವ ಮರದ ತುಂಡನ್ನು ಬಟ್ಟಲನ್ನೆತ್ತಿ ತೆಗೆದುಕೊಳ್ಳುವುದು | ೧೬ | ೬೪ | ೯೬ |

**IV.** ಹನ್ನೆರಡು ತಿಂಗಳ ವಯಸ್ಸಿಗೆ—

| | ೯ ತಿಂಗಳ ವಯಸ್ಸಿನಲ್ಲಿ | ೧೨ ತಿಂಗಳ ವಯಸ್ಸಿನಲ್ಲಿ |
|---|---|---|
| ೧) ಸಹಾಯದಿಂದ ನಡೆಯುವುದು | ೨೮ | ೮೭ |
| ೨) ಸಹಾಯದಿಂದ ನಿಲ್ಲುವುದು | ೫೨ | ೯೬ |
| ೩) ಬಾಯಲ್ಲಿ ಆಟಿಕೆಯನ್ನಿಟ್ಟುಕೊಳ್ಳುವ ಇಚ್ಛೆಯನ್ನು ತಡೆಯುವುದು | ೩೨ | ೬೫ |

ಈ ಪಟ್ಟಿಯಿಂದ ಯಾವ ಕೆಲಸವನ್ನು ಒಂದು ನಿರ್ದಿಷ್ಟವಯಸ್ಸಿನ ಮಕ್ಕಳಲ್ಲಿ ಶೇಕಡ ೭೫ರಷ್ಟು ಮಂದಿ ಮಾಡಬಲ್ಲರೆಂಬುದನ್ನು ಕಂಡುಹಿಡಿಯಬಹುದು. ೬ ತಿಂಗಳ ವಯಸ್ಸಿನ ಮಕ್ಕಳ ಕೆಲಸಗಳನ್ನು ನೋಡಿದರೆ ಈ ಮಾರ್ಗವು ಸರಿಯಾಗಿ ಗೊತ್ತಾಗುವುದು. ಮರದ ತುಂಡನ್ನು ಕೈಯಲ್ಲಿ ಎತ್ತಿಕೊಳ್ಳುವ ಕೆಲಸವನ್ನು ನಾಲ್ಕು ತಿಂಗಳ ವಯಸ್ಸಿನ ಮಕ್ಕಳಲ್ಲಿ ಶೇಕಡ ೧೬ ಮಂದಿ ಮಾತ್ರ ಮಾಡಬಲ್ಲರು. ಅಂದರೆ ಈ ಕೆಲಸವು ವಯಸ್ಸಿಗೆ ತಕ್ಕ ಕೆಲಸವಲ್ಲ. ಬಹಳ ಕಠಿಣವಾದುದು. ಇದೇ ಕೆಲಸವನ್ನು ಒಂಭತ್ತು ತಿಂಗಳ ವಯಸ್ಸಿನ ಮಕ್ಕಳಲ್ಲಿ ಶೇಕಡ ೧೦೦ ರಷ್ಟು ಮಂದಿ ಮಾಡಬಲ್ಲರು. ಈ ವಯಸ್ಸಿಗೆ ಈ ಕೆಲಸವು ಬಹು ಸುಲಭ. ಆದರೆ ೬ ತಿಂಗಳ ವಯಸ್ಸಿನ ಮಕ್ಕಳಲ್ಲಿ ಶೇಕಡ ೮೮ ಮಂದಿ ಇದನ್ನು ಮಾಡಬಲ್ಲರು. ಆದುದರಿಂದ ಈ ಕೆಲಸವು ೬ ತಿಂಗಳ ಮಕ್ಕಳಿಗೆ ತಕ್ಕ ಪರೀಕ್ಷಣ. ಈ ಕೆಲಸವನ್ನು ಕೊಟ್ಟರೆ ೪ ತಿಂಗಳ ವಯಸ್ಸಿನ ಮಕ್ಕಳಲ್ಲಿ ಅನೇಕರು ಮಾಡಲಾರರು. ಆದುದರಿಂದ ಒಬ್ಬೊಬ್ಬರಿಗೆ ಇರುವ ತಾರತಮ್ಯವನ್ನು ಇದರ ಮೂಲಕ

ಕಂಡುಹಿಡಿಯಲು ಸಾಧ್ಯವಿಲ್ಲ. ಅತ್ತಕಡೆ ೯ ತಿಂಗಳಿನ ಮಕ್ಕಳೆಲ್ಲರೂ ಈ ಕೆಲಸವನ್ನು ಮಾಡಬಲ್ಲರು; ಅವರ ತಾರತಮ್ಯಗಳನ್ನು ಇದರಿಂದ ಅಳೆಯಲು ಸಾಧ್ಯವಿಲ್ಲ. ಆದುದರಿಂದ ಯಾವ ಕೆಲಸವು ಒಂದು ವಯಸ್ಸಿನ ಮಕ್ಕಳಲ್ಲಿ ಮುಕ್ಕಾಲು ಮೂರು ವೀಸೆ ಭಾಗದಷ್ಟು ಮಂದಿ ಮಾಡಬಲ್ಲರೋ ಅದೇ ಕೆಲಸವನ್ನು ಆ ವಯಸ್ಸಿಗಿಂತ ಕಡಿಮೆ ಮಕ್ಕಳಲ್ಲಿ ಅರ್ಧಕ್ಕಿಂತ ಕಡಿಮೆಯಷ್ಟು ಮಂದಿ ಮಕ್ಕಳು ಮಾಡ ಲಾಗದೇ ಇರಬೇಕು. ಆ ವಯಸ್ಸಿಗಿಂತ ಹೆಚ್ಚಿನ ವಯಸ್ಸಿನ ಮಕ್ಕ ಳೆಲ್ಲರೂ ಆ ಕೆಲಸವನ್ನು ಮಾಡಬಲ್ಲವರಾಗಿರಬೇಕು. ಈ ತರಹದ ಕೆಲಸಗಳನ್ನು ಮಾತ್ರವೇ ಆ ವಯಸ್ಸಿನ ಮಗುವಿನ ಬುದ್ಧಿಶಕ್ತಿಯನ್ನು ಅಳೆಯಲು ತಕ್ಕ ಪರೀಕ್ಷಣಗಳ ಪಟ್ಟಿಯಲ್ಲಿ ಸೇರಿಸಿಕೊಳ್ಳಬೇಕು. ಅತಿ ಸುಲಭವಾದ ಕೆಲಸಗಳನ್ನಾಗಲೀ, ಅತಿ ಕಠಿಣವಾದ ಕೆಲಸಗಳ ನ್ನಾಗಲೀ ಸೇರಿಸಬಾರದು.

ಈ ಪರೀಕ್ಷಣಗಳನ್ನು ನಡೆಸಬೇಕಾದರೆ ಯಾವ ಯಾವ ಕೆಲಸ ಗಳು ಯಾವ ಯಾವ ವಯಸ್ಸಿಗೆ ತಕ್ಕವು ಎಂಬುದನ್ನು ಅರಿಯುವು ದೊಂದೇ ಅಲ್ಲದೆ ಆ ಪರೀಕ್ಷಣಗಳಿಗೆ ತಕ್ಕ ಸಲಕರಣೆಗಳನ್ನು ಒದಗಿಸಿ ಕೊಂಡು, ವೈಜ್ಞಾನಿಕರು ನಿರ್ಧರಿಸಿರುವ ಕ್ರಮವನ್ನು ಅನುಸರಿಸಿ, ಕಂಡುಬಂದ ಫಲಿತಾಂಶವನ್ನು ವೈಜ್ಞಾನಿಕರೀತಿಯಿಂದ ವಿಮರ್ಶಿಸ ಬೇಕು. ಮೇಲಿನ ಪಟ್ಟಿಯಲ್ಲಿ ಕೊಟ್ಟಿರುವ ಅಂಶಗಳು ಕೆಲವು ಮಾತ್ರ. ಒಂದೊಂದು ವಯಸ್ಸಿಗೂ ೪೦-೫೦ ಪರೀಕ್ಷಣಗಳಿವೆ. ಇವು ಗಳೆಲ್ಲವನ್ನೂ ನಡೆಸುವುದೇ ಅಲ್ಲದೆ ಆ ವಯಸ್ಸಿಗೆ ಕೆಳಗಿನ ದರ್ಜೆಯ ಪರೀಕ್ಷಣಗಳನ್ನೂ, ಮೇಲ್ದರ್ಜೆಯ ಪರೀಕ್ಷಣಗಳನ್ನೂ ಕ್ರಮಬದ್ಧ ವಾಗಿ ಕೊಟ್ಟು ನಂತರ ಆ ವಯಸ್ಸಿನ ಮಗುವಿನ ಬುದ್ಧಿಶಕ್ತಿಯನ್ನು ಅಳೆಯಲು ಸಾಧ್ಯ.

ಮಗುವಿನ ಬುದ್ಧಿಶಕ್ತಿಯು ಮೊದಲಿನ ೫-೬ ವರ್ಷಗಳೊಳಗೆ ಅತಿ ತೀವ್ರವಾಗಿ ಬೆಳೆಯುವುದು. ಆರು ವರ್ಷದ ನಂತರ ಸುಮಾರು ಹದಿನಾರು ವರ್ಷ ವಯಸ್ಸಿನವರೆಗೂ ಬುದ್ಧಿಶಕ್ತಿಯು ಬೆಳೆಯುತ್ತಾ ಹೋಗುವುದು. ಆದರೆ ಈ ಕಾಲದಲ್ಲಿ ಬೆಳೆವಣಿಗೆಯು ಮೊದಲಿನಷ್ಟು

ತೀವ್ರವಾಗಿರುವುದಿಲ್ಲ. ೧೬ ವರ್ಷಗಳು ಕಳೆದನಂತರ ಸಾಧಾರಣವಾಗಿ ಬುದ್ಧಿಶಕ್ತಿಯು ಬೆಳೆಯುವುದಿಲ್ಲ. ಮಗುವಿಗೆ ಆರು ವರ್ಷಗಳಾಗು




ಚಿತ್ರ ೨೩. ಮೆದುಳಿನ ಬೆಳವಣಿಗೆಯ ಶೇಕಡಾ ಕ್ರಮ.

ವಷ್ಟರಲ್ಲಿಯೇ ಮೆದುಳಿನ ತೂಕವು ವಯಸ್ಕನ ಮೆದುಳಿನ ತೂಕರದ ಶೇಕಡ ೯೦ ರಷ್ಟಿರುವುದು. ಇದೇ ರೀತಿ ಮಗುವಿಗೆ ೬ ವರ್ಷಗಳು ತುಂಬುವುದರೊಳಗೆ ವಯಸ್ಕನ ಬುದ್ಧಿಶಕ್ತಿಯ ಶೇಕಡ ೮೦ ರಷ್ಟಿರುವುದು. ಅಂದರೆ ಮನುಷ್ಯನ ಮೊದಲ ೬ ವರ್ಷಗಳಲ್ಲಿ ಆಗುವಷ್ಟು ಬುದ್ಧಿಯ ಬೆಳವಣಿಗೆಯು ಅವನ ಉಳಿದ ಜೀವಮಾನದಲ್ಲಿಯೇ ಆಗುವುದೂ ಇಲ್ಲ; ಆಗಲು ಅವಕಾಶವೂ ಇಲ್ಲ.

ಗೆಸೆಲ್ ಅನೇಕ ಮಕ್ಕಳನ್ನು ಪರೀಕ್ಷಿಸಿ ಬುದ್ಧಿಯ ಬೆಳವಣಿಗೆಯನ್ನು ಈ ಕೆಳಗಿನ ನಕ್ಷೆಯಲ್ಲಿರುವಂತೆ ಸಂಗ್ರಹಿಸಿರುವನು. ಈ ನಕ್ಷೆಯ ಪ್ರಕಾರ ಬುದ್ಧಿಯ ಬೆಳವಣಿಗೆಯ ಶೇಕಡ ೭೫ ರಷ್ಟು ಭಾಗಕ್ಕಿಂತಲೂ ಹೆಚ್ಚಾಗಿ ಮೊದಲ ಎರಡು ವರ್ಷಗಳಲ್ಲಿ ನಡೆಯುವುದೆಂದು

ಗೊತ್ತಾಗುವುದು. ಎರಡು ವರ್ಷಗಳಿಂದ ಐದು ವರ್ಷಗಳವರೆವಿಗೂ ಬೆಳೆವಣಿಗೆಯ ತೀವ್ರತೆಯು ಕಡಿಮೆಯಾಗುತ್ತಾ ಹೋಗಿ, ೫ ವರ್ಷಗಳಿಂದ ೧೬ ವರ್ಷಗಳವರೆಗೆ ಆಗುವ ಬೆಳೆವಣಿಗೆಯು ಇನ್ನೂ ಕಡಿಮೆಯ ತೀವ್ರತೆಯಿಂದ ನಡೆಯುವುದು.




ಚಿತ್ರ ೨೪. ಬುದ್ಧಿಶಕ್ತಿಯ ಬೆಳೆವಣಿಗೆ.

ಇದರ ಮುಖ್ಯಾಂಶವೇನೆಂದರೆ ಚಿಕ್ಕಮಕ್ಕಳಾಗಿರುವಾಗಲೇ ಅವರನ್ನು ತಂದೆತಾಯಿಗಳೂ, ಸಮಾಜವೂ ಗಮನಕ್ಕೆ ತೆಗೆದುಕೊಳ್ಳದೆ ಮಕ್ಕಳು ದೊಡ್ಡವರಾದ ಮೇಲೆ ಅವರಿಗೆ ಎಷ್ಟೇ ಅವಕಾಶಗಳನ್ನು ಕಲ್ಪಿಸಿಕೊಟ್ಟರೂ, ಅದರಿಂದ ಅಷ್ಟೇನೂ ಪ್ರಯೋಜನವಾಗುವುದಿಲ್ಲ. ಹಳ್ಳಿಯ ಮಕ್ಕಳಿಗೂ ಪೇಟೆಯ ಮಕ್ಕಳಿಗೂ, ಕಸುಬುದಾರರ ಮಕ್ಕಳಿಗೂ ವಿದ್ಯಾವಂತರ ಮಕ್ಕಳಿಗೂ ಹರಿಜನ ಮಕ್ಕಳಿಗೂ ಉತ್ತಮ ವರ್ಣದವರ ಮಕ್ಕಳಿಗೂ, ಏಷ್ಯಾಖಂಡದ ಮಕ್ಕಳಿಗೂ

ಯೂರೋಪು ಖಂಡದ ಮಕ್ಕಳಿಗೂ ಇರುವ ತಾರತಮ್ಯಗಳು ಬುದ್ಧಿ ಶಕ್ತಿಯ ತಾರತಮ್ಯಗಳಲ್ಲ! ಅವರ ಚಿಕ್ಕ ವಯಸ್ಸಿನಲ್ಲಿರುವ ಆವರಣದ ತಾರತಮ್ಯಗಳು. ಚಿಕ್ಕ ವಯಸ್ಸಿನಲ್ಲಿ ಬೆಳೆವಣಿಗೆಗೆ ತಕ್ಕ ಅನುಕೂಲ ಗಳಲ್ಲಿ ತಾರತಮ್ಯಗಳಿರುವವರೆಗೂ, ಕುಲಗೋತ್ರ ಮತ್ತು ಬಣ್ಣಗಳ ತಾರತಮ್ಯಗಳಿದ್ದೇ ಇರುವುವು. ಮನಶ್ಶಾಸ್ತ್ರದ ಪರಿಶೋಧನೆಗಳಿಂದ ವಿಶಧವಾಗುವುದೇನೆಂದರೆ, ಚಿಕ್ಕ ವಯಸ್ಸಿನಲ್ಲಿ ಮಕ್ಕಳ ಆವರಣವನ್ನು ಸಾಧ್ಯವಾದಮಟ್ಟಿಗೆ ಎಲ್ಲಾ ದೇಶಗಳಲ್ಲಿಯೂ, ಎಲ್ಲಾ ಮತಗಳಲ್ಲಿಯೂ ಎಲ್ಲ ಜಾತಿಗಳಲ್ಲಿಯೂ ಒಂದೇ ರೀತಿಯಾಗಿಡಬೇಕು. ಹೀಗೆ ಎಲ್ಲ ಮಕ್ಕಳಿಗೂ ಬೆಳೆವಣಿಗೆಗೆ ಅನುಕೂಲವಾದ ಅವಕಾಶಗಳನ್ನು ಕಲ್ಪಿಸಿ ಕೊಟ್ಟರೆ ಪ್ರತಿ ಒಂದು ಮಗುವೂ ತನ್ನ ಸ್ವಭಾವಕ್ಕೆ ಅನುಸಾರವಾಗಿ ಪೂರ್ಣ ಬೆಳೆವಣಿಗೆಯನ್ನು ಪಡೆಯಲು ಸಾಧ್ಯವಾಗುವುದು. ಇದನ್ನು ಸಾಧಿಸಲು ಎಲ್ಲ ಕಡೆಗಳಲ್ಲಿಯೂ ಶಿಶುವಿಹಾರಗಳನ್ನೇರ್ಪಡಿಸಿ ಅಲ್ಲಿ ಸಣ್ಣಪುಟ್ಟ ಮಕ್ಕಳಿಗೆ ಶಾಸ್ತ್ರೀಯವಾದ ಶಿಕ್ಷಣವನ್ನು ಕೊಡಬೇಕು. ಎಲ್ಲಾ ಮಕ್ಕಳಿಗೂ ಶಿಶುವಿಹಾರಗಳಲ್ಲಿ ಒಂದೇ ವಿಧವಾದ ತರ ಬೇತನ್ನು ಕೊಟ್ಟರೆ ಎಲ್ಲರೂ ಒಂದೇ ಬುದ್ಧಿಶಕ್ತಿಯುಳ್ಳವರಾಗ ದಿದ್ದರೂ, ಎಲ್ಲರ ಬುದ್ಧಿಶಕ್ತಿಯ ಬೆಳವಣಿಗೆಯೂ ಸರಿಯಾಗಿ ಮುಂದು ವರಿಯಲು ಸಾಧ್ಯವಾಗುವುದು. ಮಕ್ಕಳ ಬೆಳವಣಿಗೆಗೆ ಅನುಗುಣ ವಾದ ಅವಕಾಶಗಳನ್ನು ಕಲ್ಪಿಸಿಕೊಟ್ಟರೆ ಆಗ ಜನತೆಯ ಸಂಸ್ಕೃತಿ ಬೆಳೆಯುವುದು. ಒಂದೊಂದು ವ್ಯಕ್ತಿಯೂ ತನ್ನ ಪೂರ್ಣತೆಯನ್ನು ಪಡೆದು ಸಮಾಜದ ಉನ್ನತಿಗೆ ದುಡಿಯಲು ಶಕ್ತಿಪಡೆಯುವನು.

# ಅಧ್ಯಾಯ ೯.

## ಭಾಷೆಯ ಬೆಳವಣಿಗೆ

ಮನುಷ್ಯನ ಜೀವಮಾನದಲ್ಲಿ ಭಾಷೆಯು ಬಹು ಮುಖ್ಯವಾದುದು. ಒಂದು ವ್ಯಕ್ತಿಯು ಅತಿ ಚಿಕ್ಕವಯಸ್ಸಿನಿಂದ ಹಿಡಿದು ೩೦-೪೦ ವರ್ಷಗಳಾದರೂ ಭಾಷೆಯನ್ನು ಕಲಿಯುತ್ತಲೇ ಇರುವನು. ಚಿಕ್ಕವಯಸ್ಸಿನಲ್ಲಿಯೂ, ಬೆಳೆದ ಮೇಲೆಯೂ, ಯಾವ ಕೆಲಸವನ್ನೇ ಆಗಲಿ ಚೆನ್ನಾಗಿ ಮಾಡುವುದಕ್ಕೂ ಮತ್ತು ಇತರರ ಕೈಯಲ್ಲಿ ಮಾಡಿಸುವುದಕ್ಕೂ ಭಾಷೆಯಮೇಲಿನ ಹತೋಟಿಯು ಬಹು ಮುಖ್ಯಸಾಧನ. ಮಗು ಭಾಷೆಯನ್ನು ಹೇಗೆ ಕಲಿಯುವುದು ಎಂದು ಬಹಳ ವರ್ಷಗಳಿಂದ ವೈಜ್ಞಾನಿಕರು ಪರಿಶೀಲನ ಮಾಡಿರುವನು. ಮೊದಮೊದಲು ವೈಜ್ಞಾನಿಕನು ತನ್ನ ಮಗು ಯಾವ ವಯಸ್ಸಿನಲ್ಲಿ ಪದಗಳನ್ನು ಉಪಯೋಗಿಸಲು ಆರಂಭಿಸಿತು, ಒಂದೊಂದು ವಯಸ್ಸಿನಲ್ಲಿಯೂ ಎಷ್ಟು ಪದಗಳನ್ನುಚ್ಛರಿಸುವುದು, ಮತ್ತು ಮಗುವಿನ ಭಾಷೆಯ ರಚನೆಯು ಯಾವ ವಿಧವಾಗಿರುವುದು ಎಂದು ಬಹಳ ಜಾಗರೂಕತೆಯಿಂದ ಗುರುತು ಮಾಡುತ್ತಿದ್ದನು. ಈ ಪದ್ಧತಿಯು ನಮಗೆ ಎಷ್ಟೋ ವಿಷಯಗಳನ್ನು ಸಂಗ್ರಹಿಸಿ ಕೊಟ್ಟಿದ್ದರೂ ಅದು ಒಂದೆರಡು ಮಕ್ಕಳ ವರ್ತನೆಯ ಮೇಲೆ ಆಧಾರವಾಗಿರುವುದರಿಂದ ದೋಷ ರಹಿತವಾದುದಲ್ಲ. ಇತ್ತೀಚೆಗೆ ವೈಜ್ಞಾನಿಕನು ತನ್ನ ಮಗುವನ್ನು ಪರೀಕ್ಷಿಸುವುದೊಂದೇ ಅಲ್ಲದೆ ನೂರಾರು ಮನೆಗಳಿಗೆ ಹೋಗಿ ಪ್ರತ್ಯೇಕ ವಯಸ್ಸಿನ ಮಗುವಿನ ಭಾಷೆಯ ಬೆಳವಣಿಗೆಯನ್ನು ಪರಿಶೀಲಿಸಿರುವನು. ಇದೂ ಅಲ್ಲದೆ ಮಕ್ಕಳ ಶಾಲೆಗಳಿಗೆ ಹೋಗಿ ಅವರನ್ನು ಕ್ರಮವಾಗಿ ಆವೀಕ್ಷಿಸಿರುವನು. ಈ ವಿಧಾನಗಳನ್ನನುಸರಿಸಿ ಮಕ್ಕಳ ಭಾಷೆಯ ಬೆಳವಣಿಗೆಯನ್ನು ಕುರಿತು ನಮಗೆ ಇದುವರೆಗೆ ಒದಗಿರುವ ವಿಷಯಗಳನ್ನು ಈ ಅಧ್ಯಾಯದಲ್ಲಿ ಸಂಗ್ರಹಿಸಲಾಗಿದೆ.

## ಭಾಷಾಭಿವೃದ್ಧಿಯ ಅಂತಸ್ತುಗಳು

ಭಾಷಾಭಿವೃದ್ಧಿಯ ಅಂತಸ್ತುಗಳನ್ನು ಈ ರೀತಿಯಾಗಿ ವಿಂಗಡಿಸ ಬಹುದು. (೧) ಪ್ರಾರಂಭದ ಸದ್ದುಗಳು (೨) ಮೊದಲಮಾತು (೩) ಒಂದು ಪದದ ವಾಕ್ಯ (೪) ವಾಕ್ಯಗಳ ರಚನೆಯ ಬೆಳವಣಿಗೆ.

## ಪ್ರಾರಂಭದ ಸದ್ದುಗಳು

ಮಗು ಹುಟ್ಟಿದಾಗ ಅಳುವುದೆಂಬುದು ಎಲ್ಲರಿಗೂ ಗೊತ್ತಿರುವ ವಿಷಯ. ಈ ಅಳುವಿನ ಶಬ್ದವು ಪ್ರತ್ಯೇಕ ಪ್ರತಿಕ್ರಿಯೆಯಲ್ಲ. ಮೇಲೆ ನೋಡಿದ ಹಾಗೆ ಹುಟ್ಟುವುದಕ್ಕಿಂತ ಮುಂಚೆ, ಹುಟ್ಟಿದ ಕೂಡಲೆ ಪ್ರಚೋದನೆ ಯಾದರೆ ಮಗುವಿನ ದೇಹಾದ್ಯಂತವೂ ಅಲುಗುವುದು. ಹುಟ್ಟಿದಾಗಿನ ಅಳುವು ಈ ವ್ಯಾಪಕ ಪ್ರತಿಕ್ರಿಯೆಯ ಒಂದು ಅಂಶ. ಹುಟ್ಟಿದ ತಕ್ಷಣ ಮಗು ಉಸಿರಾಡಲು ಗಾಳಿಯನ್ನು ಒಳಕ್ಕೆ ಎಳೆದು ಕೊಂಡಾಗ ಆ ಗಾಳಿಯು ಗಂಟಲಿನಲ್ಲಿ ಶಬ್ದೋತ್ಪತ್ತಿಗೆ ಕಾರಣವಾದ ಒಂದು ಅವಯವದ ಮೂಲಕ ಪ್ರವೇಶಿಸುವುದರಿಂದ ಶಬ್ದವಾಗುವುದು ಮೊದಲ ಎರಡು ಮೂರು ತಿಂಗಳುಗಳಲ್ಲಿ ಕೂಗುವುದು, ಕಿರುಚುವುದು ಮುಂತಾದ ಶಬ್ದಗಳನ್ನು ಮಾಡುವುದು. ಬ್ಲೀ ಎಂಬಾತನು ಮಕ್ಕಳು ಮಾಡುವ ಸ್ವರಗಳಲ್ಲಿ ಒಂದು ಅರ್ಥವಿದೆ ಎಂದು ವಾದಿಸಿದನು. ದೇಹಾಲಸ್ಯ ಮತ್ತು ಹಸಿವು ಆದಾಗ 'ಊ ಆ' ಎಂದೂ ನೋವುಂ ಟಾದಾಗ 'ಆ ಈ' ಎಂದೂ ಕೂಗುವುದೆಂದು ಹೇಳಿದನು ಆದರೆ ಬೇರೆ ವೈಜ್ಞಾನಿಕರು ಈ ವಿಧವಾದ ಧ್ವನಿಗಳ ಸ್ಪಷ್ಟ ಉಪಯೋಗ ವನ್ನು ಮಗು ಮಾಡುವುದಿಲ್ಲವೆಂದು ಅಪೇಕ್ಷಿಸಿದರು. ಈ ಸ್ವರಗಳ ಉಚ್ಚಾರಣೆ ಬಂದಮೇಲೆ 'ಮ' 'ಪ' 'ಬ' ಎಂಬ ಓಷ್ಠ್ಯ ವ್ಯಂಜನ ಗಳನ್ನು ಉಚ್ಚರಿಸುವುದು. ಮಗುವಿನ ಮೂರನೆಯ ತಿಂಗಳಿನಲ್ಲಿ 'ಮಾ' 'ಬಾ' 'ಗೂ' 'ಬೂ' ಎಂಬ ಶಬ್ದಗಳನ್ನು ಮಾಡುವುದು. ಗೆಸೆಲ್ ಆರು ತಿಂಗಳ ಮಗು ಮಾಡುವ ಶಬ್ದಗಳನ್ನೆಲ್ಲ ಗುರುತು ಮಾಡಿ ಈ ವಯಸ್ಸಿನಲ್ಲಿ ದಿನ ಒಂದಕ್ಕೆ ೧೪೪ ಸಲ ಶಬ್ದಗಳನ್ನು ಮಾಡುವುದೆಂದು ಕಂಡುಹಿಡಿದನು. ಮಗುವಿನ ಜಾಗ್ರತಾವಸ್ಥೆಯಲ್ಲಿ ಮಾಡುವ ಕೆಲಸಗಳು ಈ ಶಬ್ದಮಾಡುವುದು ಶೇಕಡ ಮೂರರಷ್ಟಿರು

ವುದೆಂದೂ ಕಂಡು ಹಿಡಿದನು. ಈ ವಿಧವಾದ ಶಬ್ದಗಳೇ ಭಾಷೆಯ ಬೆಳವಣಿಗೆಗೆ ತಳಹದಿ. ಷರ್ಲಿ ಎಂಬುವರು ಹತ್ತು ಹನ್ನೊಂದು ತಿಂಗಳು ವಯಸ್ಸಿನ ಮಕ್ಕಳು ಅರ್ಥವಿಲ್ಲದ ಏನೋ ಶಬ್ದಗಳನ್ನು ಪ್ರಶ್ನಾರ್ಥಕ ಆಶ್ಚರ್ಯ ಶೂಚಕ ಪ್ರತಿಪಾದಕ ಧ್ವನಿಯಿಂದ ಮಾಡುವುದೆಂದು ಕಂಡುಹಿಡಿದಿರುವರು. ಮೆಕಾರ್ತಿ ಎಂಬುವರು ಮಗು ಬೆಳೆಯುತ್ತ ಬೆಳೆಯುತ್ತ ಅರ್ಥವಿಲ್ಲದ ಸದ್ದುಗಳು ಅರ್ಥವನ್ನುಳ್ಳ ಭಾಷೆಯಾಗಿ ಹೇಗೆ ಮಾರ್ಪಡುವುವೆಂದು ಒಂದು ಪ್ರಯೋಗವನ್ನು ನಡೆಸಿ ಕಂಡು ಹಿಡಿದಿರುವರು. ಈ ಅಂಶವನ್ನು ಕೆಳಗಿನ ನಕ್ಷೆಯಿಂದ ತಿಳಿಯ ಬಹುದು. ಹದಿನೆಂಟು ತಿಂಗಳ ವಯಸ್ಸಿನಲ್ಲಿ ಶೇಕಡ ೧೫ ರಷ್ಟು




ಚಿತ್ರ ೨೫

ಮಕ್ಕಳ ಅರ್ಥಗರ್ಭಿತವಾದ ಮಾತುಗಳ ಬೆಳವಣಿಗೆ

ಶಬ್ದಗಳು ಅರ್ಥವುಳ್ಳದ್ದಾಗಿರುವುವು. ಎರಡು ವರ್ಷ ವಯಸ್ಸಿನ ಮಗು ಮಾಡುವ ಶಬ್ದಗಳಲ್ಲಿ ಸುಮಾರು ಅರ್ಧಭಾಗದಷ್ಟು ಅರ್ಥವಿರುವ ಶಬ್ದಗಳಾಗಿರುವುವು. ಮೂರು ವರ್ಷ ವಯಸ್ಸಿನಲ್ಲಿ ಹತ್ತರಲ್ಲಿ ಒಂಭತ್ತು ಭಾಗದಷ್ಟು ಶಬ್ದಗಳು ಅರ್ಥಸಹಿತವಾದುವು ನಾಲ್ಕು ವರ್ಷದ ಮಗು ಅರ್ಥವಿಲ್ಲದ ಶಬ್ದಗಳನ್ನು ಮಾಡುವುದನ್ನು ನಿಲ್ಲಿಸಿಬಿಡುವುದು.

## ಮೊದಲಿನ ಪದ

ಅರ್ಥ ಪೂರ್ಣವಾದ ಶಬ್ದವು ಪದ. ಶಬ್ದವನ್ನು ಇನ್ನೊಬ್ಬರಲ್ಲಿ ಅರ್ಥ ಬರುವ ಹಾಗೆ ಉಪಯೋಗಿಸಿದರೆ ಅದು ಪದವೆನ್ನಿಸಿಕೊಳ್ಳುವುದು. ಈ ವಿಧವಾಗಿ ಮಗು ತನ್ನ ಮೊದಲಿನ ಪದವನ್ನು ಹತ್ತು ಹನ್ನೊಂದು ತಿಂಗಳ ವಯಸ್ಸಿನಲ್ಲಿ ಮಾಡುವುದೆಂದು ಕಂಡು ಬಂದಿರುವುದು. ಬೇಟ್‌ಮನ್ ಎಂಬಾತನ ಪ್ರಕಾರ ಶೇಕಡ ೭೪ ರಷ್ಟು ಮಕ್ಕಳು ಮೊದಲ ವರ್ಷ ಮುಗಿಯುವಷ್ಟರಲ್ಲಿಯೇ ಪದಗಳನ್ನು ಉಪಯೋಗಿಸುವರು. ಮಕ್ಕಳು ಪದವನ್ನು ಉಪಯೋಗಿಸುವುದು ಇಷ್ಟು ತಡವಾದರೂ ಪದವನ್ನು ಅರ್ಥಮಾಡಿಕೊಳ್ಳುವುದು ಇನ್ನೂ ಬಹಳ ಮುಂಚೆಯೇ. ಎರಡು ತಿಂಗಳ ವಯಸ್ಸಿನ ಮಗು ತಾಯಿಯ ಧ್ವನಿಗೆ ಪ್ರತ್ಯೇಕ ವರ್ತನೆಯನ್ನು ತೋರಿಸುವುದು. ಕ್ರಮೇಣ ತಾಯಿಯ ಶಬ್ದವನ್ನು ಗುರುತಿಸುವುದು. ಪದಗಳನ್ನು ಅರ್ಥಮಾಡಿಕೊಳ್ಳುವುದಕ್ಕಿಂತ ಮುಂಚೆ ಮಕ್ಕಳು ದೊಡ್ಡವರ ಸನ್ನೆಗಳು, ಹಾವಭಾವಗಳನ್ನು ಗುರುತಿಸಿ ತಕ್ಕಹಾಗೆ ವರ್ತಿಸುವುವು. ಕೆಲವು ಮಕ್ಕಳು ಈ ಸನ್ನೆಗಳ ಮೂಲಕವೇ ತಮ್ಮ ಕೆಲಸಗಳನ್ನೆಲ್ಲಾ ಸಾಧಿಸಿಕೊಳ್ಳುವರು. ಹೀಗೆ ತಮ್ಮ ಕೆಲಸಗಳು ಸರಾಗವಾಗಿ ನಡೆಯುವುದರಿಂದ ಮಾತನ್ನು ಕಲಿಯಲು ಸಾವಕಾಶವಾಗುವುದು.

ಸಾಧಾರಣವಾಗಿ ಮಕ್ಕಳು ಮಾತನ್ನು ದೊಡ್ಡವರ ಅನುಕರಣೆಯಿಂದ ಕಲಿಯುವರೆಂದು ಹೇಳುವುದುಂಟು. ಆದರೆ ಇದು ಸಂಪೂರ್ಣವಾಗಿ ನಿಜವಲ್ಲ. ಮಾತು ಕಲಿಯುವುದಕ್ಕಿಂತ ಮುಂಚೆ ಶಬ್ದಗಳನ್ನು

ಮಾಡುವುದರಲ್ಲಿ ಎಷ್ಟೋ ನಿಪುಣತೆಯನ್ನು ಮಗು ಪಡೆದಿರುವುದು. ಎರಡು ಮೂರು ತಿಂಗಳಲ್ಲಿಯೇ ಸ್ವರ ವ್ಯಂಜನಗಳಿಂದ ಕೂಡಿದ ಶಬ್ದಗಳನ್ನು ಉಚ್ಚಾರಣೆಮಾಡುವುದೆಂದು ನೋಡಿದ್ದೇವೆ.




ಚಿತ್ರ 26
ಮಗುವಿನಲ್ಲಿ ಭಾಷೆಯ ಬೆಳೆವಣಿಗೆ

ಆಲ್‌ಪೋರ್ಟ್ ಎಂಬಾತನು ಈ ಮೇಲಿನ ಚಿತ್ರದಲ್ಲಿ ಮಗು ಯಾವ ವಿಧವಾಗಿ ಒಂದು ಪದವನ್ನು ಕಲಿಯುವುದೆಂದು ವಿವರಿಸಿರುವನು. ಮೊದಲು ಮೊದಲು ಮಗು ತನ್ನಷ್ಟಕ್ಕೆ ತಾನೆ ' ಗಾ ' ಎಂಬ ಶಬ್ದವನ್ನು ಮಾಡುವುದು. ತಾನು ಉಚ್ಚರಿಸಿದ ಶಬ್ದವನ್ನು ಕಿವಿಯಿಂದ ಕೇಳುವುದು. ಕೇಳಿ ಮತ್ತೊಮ್ಮೆ ಅದೇ ಶಬ್ದವನ್ನು ಮಾಡುವುದು. ಹೀಗೆ ಒಂದು ಹೊಸ ಶಬ್ದವನ್ನು ಈ ವಯಸ್ಸಿನಲ್ಲಿ ಯಾವ ಅರ್ಥವಿಲ್ಲದಿದ್ದರೂ ಬರಿಯ ಶಬ್ದಕ್ಕೋಸ್ಕರವೇ ಅದನ್ನು ಪದೇ ಪದೇ ಉಚ್ಚರಿಸುವುದು. ಸ್ವಲ್ಪ ವಯಸ್ಸಾದ ಮೇಲೆ ಅಂದರೆ ೧೦-೧೧ ತಿಂಗಳ ವಯಸ್ಸಿನಲ್ಲಿ ತಾಯಿಯು ಒಂದು ಗಾಡಿಯ ಆಟಿಕೆಯೊಡನೆ ಮಗು ಆಡುತ್ತಿರುವಾಗ ' ಇದು ಗಾಡಿ ' ಎಂದು ಹೇಳಿದರೆ ಮಗು

ಆ ಶಬ್ದವನ್ನು ಕಿವಿಯಿಂದ ಕೇಳಿ ಕಣ್ಣಿನಿಂದ ಗಾಡಿಯನ್ನು ನೋಡಿ 'ಗಾ' ಎನ್ನುವುದು. ಹೀಗೆ ಗಾಡಿಯನ್ನು ನೋಡಿದಾಗಲೆಲ್ಲ ದೊಡ್ಡವರು 'ಗಾಡಿ' ಎಂಬ ಪದವನ್ನು ಉಪಯೋಗಿಸಿದರೆ ಆ ಪದವನ್ನು ಮಗುವೂ ಕೇಳಿ 'ಗಾ' ಎಂದು ಉಚ್ಚರಿಸುವುದು. ಕ್ರಮೇಣ ತಾನೊಂದೇ ಇರುವಾಗ ಗಾಡಿಯನ್ನು ನೋಡಿದರೆ ಬೇರೆಯವರ ಪ್ರೋತ್ಸಾಹವಿಲ್ಲದೆಯೇ 'ಗಾ' ಎನ್ನುವುದು. ಈಗ 'ಗಾ' ಎನ್ನುವ ಶಬ್ದಕ್ಕೆ ಒಂದು ಅರ್ಥವು ಬಂದಹಾಗಾಯಿತು. ಮೊದಲು ಅರ್ಥವಿಲ್ಲದೆ 'ಗಾ' ಎಂದು ಶಬ್ದಮಾಡುತ್ತಿದ್ದ ಮಗು ಈಗ ಗಾಡಿಯನ್ನು ನೋಡಿ 'ಗಾ' ಎಂದು ಒಂದು ಹೊಸಪದವನ್ನು ಕಲಿಯುವುದು. ಹೀಗೆ ಅನುಕರಣೆಯಿಂದ ಪದಗಳನ್ನು ಕಲಿಯುವುದೇನೋ ನಿಜ. ಆದರೆ ಈ ಅನುಕರಣಕ್ಕೆ ಮುಂಚೆ ೮–೧೦ ತಿಂಗಳು ಸ್ವೇಚ್ಛೆಯಾಗಿ ಎಷ್ಟೋ ಶಬ್ದಗಳನ್ನು ತನ್ನ ಗಂಟಲಿನಿಂದ ಹೊರಡಿಸಿ, ಅವುಗಳ ಉಚ್ಚಾರಣೆಯನ್ನು ಮುಂದುವರಿಸುವುದು. ಈ ಕೆಲಸವಾದ ನಂತರ ಒಂದು ಪದಾರ್ಥವನ್ನು ನೋಡಿದರೆ ಅದರ ಜೊತೆಗೆ ಒಂದು ನಿರ್ದಿಷ್ಟವಾದ ಶಬ್ದವನ್ನು ಪದೇ ಪದೇ ಕೇಳಿದರೆ, ಆ ತಕ್ಕ ವಯಸ್ಸಿನಲ್ಲಿ ಅಂದರೆ ಸುಮಾರು ಒಂದು ವರ್ಷ ವಯಸ್ಸಿನ ಸಮಯದಿಂದಲೂ ಒಂದೊಂದು ಪದವನ್ನಾಗಿ ಕಲಿಯುತ್ತ ಹೋಗುವುದು. ನಾವು ಮೇಲೆ ನೋಡಿದ ಹಾಗೆ ಮೊದಮೊದಲು ಪದಗಳನ್ನು ಕಲಿಯುವುದು 'ಆರೋಪಿತ ಪ್ರತಿಕ್ರಿಯೆ'.[1] ಈ ಪದಗಳು ಶಬ್ದ ಉಚ್ಚಾರಣೆ, ಪದಾರ್ಥದ ನೋಟ, ದೊಡ್ಡವರು ಹೇಳುವ ಪದವನ್ನು ಕಿವಿಯಿಂದ ಕೇಳುವುದು, ಈ ಮೂರರ ಸಂಸರ್ಗದಿಂದ ಜನ್ಯವಾದುವು. ಆದುದರಿಂದಲೇ ಇದು 'ಆರೋಪಿತ' (ಕಂಡಿಷನ್ಡ್) ಪ್ರತಿಕ್ರಿಯೆ.

ಮತ್ತೊಂದು ಅಂಶವೇನೆಂದರೆ—ಈ ವಯಸ್ಸಿನಲ್ಲಿ ಹೊಸ ಪದಗಳನ್ನು ಕಲಿಯುವುದು ಈ ರೀತಿಯ "ಕೇಳಿ-ಹೇಳಿ" ಮಾಡುವುದರಿಂದ. ಯಾವುದಾದರೊಂದು ಪದಾರ್ಥವಿನ್ನೇ ಮಗು ನೋಡಿದಾಗ ಅದೇ

---

1. ೨ನೆಯ ಅಧ್ಯಾಯವನ್ನು ನೋಡಿ.

ಸಮಯದಲ್ಲಿ ಒಂದು ಶಬ್ದವನ್ನು ಕೇಳಿದರೆ ಆ ಪದಾರ್ಥವನ್ನು ನೋಡುತ್ತ ಆ ಪದವನ್ನೇ ಹೇಳುವುದು. ಕ್ರಮೇಣ ಆ ಪದಾರ್ಥವನ್ನು ನೋಡಿದರೆ ತಾನೇ ಅದರ ಹೆಸರನ್ನು ಹೇಳುವುದು. ಹೀಗೆ ನೋಡಿ ಹೇಳುವುದರ ಮೊದಲು ಕೇಳಿ-ಹೇಳುವುದು. ಈ ಕೇಳಿ ಹೇಳುವುದರ ಮೊದಲು ಬರಿಯ ಸದ್ದನ್ನು ತಾನೇ ಕೇಳಿ–ಹೇಳುವುದು.

ಇಲ್ಲಿಯೂ ಸಹ ಅಂಗಗಳ ಪಕ್ವತೆಯು ಬಹು ಮುಖ್ಯವಾದ ವಿಷಯ. ಧ್ವನಿಯ ಅಂಗ, ಕಣ್ಣು, ಕಿವಿ, ಇವುಗಳ ಬೆಳವಣಿಗೆಯು ಮತ್ತು ಇವುಗಳೊಂದೊಂದನ್ನೂ ಇನ್ನೊಂದರ ಜೊತೆಯಲ್ಲಿ ಸಹಕರಿಸುವಂತೆ ಮಾಡುವ ನರಮಂಡಲದ ಬೆಳವಣಿಗೆಯು ನಡೆದಿದ್ದರೆ ಮಾತ್ರವೇ ಮಗು ಭಾಷೆಯನ್ನು ಕಲಿಯಲಾರಂಭಿಸುವುದು.[1] ಈ ವಿಷಯವನ್ನು ಕುರಿತು ಸ್ಟ್ರೇಯರ್ ಒಂದು ಪ್ರಯೋಗವನ್ನು ಅವಳಿ ಮಕ್ಕಳ ಮೇಲೆ ನಡೆಸಿದರು. ವಯಸ್ಸಿಗೆ ಮುಂಚೆ ಒಂದು ಮಗುವಿಗೆ ಐದು ವಾರಗಳು ಭಾಷೆಯಲ್ಲಿ ಪ್ರತ್ಯೇಕ ತರಬೇತನ್ನು ಕೊಟ್ಟರು. ಮತ್ತೊಂದು ಮಗುವಿಗೆ ಈ ವಿಧವಾದ ತರಬೇತು ಇರಲಿಲ್ಲ. ಆದರೂ ಆಮೇಲೆ ಎರಡನೆಯ ಮಗು ತನ್ನಷ್ಟಕ್ಕೆ ತಾನೆ ಸಕಾಲದಲ್ಲಿ ಭಾಷೆಯನ್ನು ಕಲಿತಮೇಲೆ ಈ ಇಬ್ಬರು ಮಕ್ಕಳಿಗೂ ಯಾವ ವ್ಯತ್ಯಾಸವೂ ಕಂಡುಬರಲಿಲ್ಲ. ಅಂದರೆ ಸಕಾಲಕ್ಕೆ ಮುಂಚೆ ಕೊಟ್ಟ ಐದುವಾರಗಳ ತರಬೇತು ವ್ಯರ್ಥವೇ ಸರಿ.[2]

---

1. ಧ್ವನಿಯ ಅಂಗವು ಸರಿಯಾಗಿದ್ದರೂ ಕಿವಿ ಕೇಳಿಸದೆ ಹೋದರೆ ಮಗು ಮೂಕನಾಗುವುದು. ಪದಾರ್ಥವನ್ನು ನೋಡಿದರೂ ಶಬ್ದೋಚ್ಚಾರಣೆಯು ಸರಿಯಾಗಿರುವುದಿಲ್ಲ. ಕಿವಿ, ಧ್ವನಿಗಳ ಅಂಗಗಳು ಸರಿಯಾಗಿದ್ದು ಕಣ್ಣು ಕಾಣದೆ ಹೋದರೆ ಭಾಷೆಯನ್ನೇನೊ ಕಲಿಯುವವು. ಆದರೆ ಈ ಭಾಷೆಯು ಸ್ಪರ್ಶೇಂದ್ರಿಯದ ಮೇಲೆ ಆಧಾರವಾಗಿರುವುದು ಮಗು ಒಂದು ಪದಾರ್ಥವನ್ನು ಮುಟ್ಟುವಾಗ ತಾಯಿ ಒಂದು ಶಬ್ದವನ್ನು ಮಾಡಿದರೆ ಆರೋಪಿತ ಪ್ರತಿಕ್ರಿಯೆಯುಂಟಾಗುವುದು.

2. ಆರನೆಯ ಅಧ್ಯಾಯದಲ್ಲಿ ವಿವರಿಸಿರುವ ಗೆಸೆಲನ ಪ್ರಯೋಗದೊಡನೆ ಹೋಲಿಸಿ.

ವೇರಿಂಗ್ ಎಂಬಾಕೆಯು ಪದಗಳು ಮಕ್ಕಳ ಜೀವನದದಲ್ಲಿ ಮಾಡುವ ಕೆಲಸಗಳನ್ನು ಕೆಳಗೆ ಸೂಚಿಸಿರುವ ಹಾಗೆ ಸಂಗ್ರಹಿಸಿರುವರು.

(೧) ಪದಗಳು ಹಿಂದೆ ನಡೆದ ಅನುಭವಗಳನ್ನು ಜ್ಞಾಪಕಕ್ಕೆ ತಂದುಕೊಳ್ಳಲು ಸಾಧನವಾಗುವುವು.

(೨) ಒಂದು ಸಾರಿ ಉಂಟಾದ ಅನುಭವವನ್ನು ಮತ್ತೊಂದು ಸಾರಿ ಉಂಟಾಗುವ ಹಾಗೆ ಪದಗಳು ಮಾಡಬಲ್ಲುವು.

(೩) ಪದಗಳು ಸೂಚಿಸುವ ಅನುಭವಗಳ ಜೊತೆಯಲ್ಲಿ ಹಿಂದೆ ಒಂದು ತೆರನಾದ ವರ್ತನೆಯುಂಟಾದರೆ ಆ ವರ್ತನೆಗೆ ಈ ಪದಗಳು ಮತ್ತೊಮ್ಮೆ ಪ್ರಚೋದಕಗಳಾಗಬಹುದು.

(೪) ಪದಗಳ ಮೂಲಕ ಮಗು ತನ್ನ ಅನುಭವಗಳಲ್ಲಿ ಪರಸ್ಪರ ಸಂಘಟನೆಯನ್ನುಂಟುಮಾಡಿ ಒಂದು ಕ್ರಮಕ್ಕೆ ತರುವುದು.

ಹೀಗೆ ಪದಗಳು ಮಗುವಿನ ಪೂರ್ವ ಅನುಭವಗಳನ್ನು ಅದರ ಜ್ಞಾಪಕಕ್ಕೆ ತೆಗೆದುಕೊಂಡು ಬರುವುದೇ ಅಲ್ಲದೆ ಮುಂದೆ ಕೆಲಸಗಳನ್ನು ಮಾಡುವಂತೆ ಪ್ರೇರಿಸುವುವು. ಈ ವಿಧವಾಗಿ ಹಿಂದಿನ ಅನುಭವಗಳಿಗೂ, ಈಗಿನ ಅನುಭವಗಳಿಗೂ ಮುಂದೆ ಮಾಡಬೇಕಾಗುವ ಕೆಲಸಗಳಿಗೂ ಒಂದು ಸಂಬಂಧವನ್ನು ಏರ್ಪಡಿಸಿ ಮಗುವಿನ ಮನಸ್ಸಿನ ರಚನೆಯನ್ನು ಮುಂದುವರಿಸಲು ಕಾರಣಭೂತವಾಗುವುವು.

## ಒಂದು ಪದದ ವಾಕ್ಯ

ಎರಡು ವರ್ಷ ವಯಸ್ಸಿನವರೆಗೂ ಮಗು ಒಂದೇ ಪದದಿಂದ ವಾಕ್ಯಾರ್ಥವನ್ನು ಸೂಚಿಸುತ್ತದೆ. ಒಂದು ಸನ್ನಿವೇಶದಲ್ಲಿ ಒಂದು ಪದವನ್ನು ಹೇಳಿ ಮುಖಭಾವನೆ ಕೈಸನ್ನೆಗಳಿಂದ ಒಂದು ವಾಕ್ಯಾರ್ಥವನ್ನು ಸೂಚಿಸುವುದು. 'ಗಾಡಿ' ಎಂದರೆ 'ಇದು ಗಾಡಿ' 'ಗಾಡಿ ಬಂದಿದೆ' 'ನನಗೆ ಗಾಡಿ ಬೇಕು' 'ನಾನು ಗಾಡಿಯಲ್ಲಿ ಹೋಗಬೇಕು' 'ಗಾಡಿ ಬಿದ್ದು ಹೋಯಿತು' 'ಗಾಡಿ ಹೊರಟಿತು' ಮುಂತಾದ ಅನೇಕ ವಾಕ್ಯಾರ್ಥವನ್ನು ಸೂಚಿಸುವುದು. ಈ ಸಮಯದಲ್ಲಿ ಅದರ ಮನೋವಿಕಾಸವು ಹೆಚ್ಚಿ ಅರ್ಥಗ್ರಹಣವು ಮುಂದುವರಿ

ದಿದ್ದರೂ ಭಾಷೆಯು ಹಿಂದುಳಿದಿರುವುದು. ಆದರೆ ಕೆಲವು ಮಕ್ಕಳು ೧|| ವರ್ಷ ವಯಸ್ಸಿನಲ್ಲಿಯೇ ೨ ಪದಗಳ ವಾಕ್ಯವನ್ನು ಉಪಯೋಗಿಸುವರು. ಸಾಧಾರಣವಾಗಿ ಒಂದು ಪದಕ್ಕಿಂತ ಹೆಚ್ಚಾಗಿ ಪದಗಳನ್ನು ಉಪಯೋಗಿಸಿ ವಾಕ್ಯವನ್ನು ರಚಿಸುವುದು, ಎರಡು ವರ್ಷಗಳು ಕಳೆದ ಮೇಲೆಯೇ. ಮಗು ಬೆಳೆದು ಅನೇಕ ಪದಗಳ ವಾಕ್ಯವನ್ನು ರಚಿಸುವ ಶಕ್ತಿಯನ್ನೆ ಪಡೆದರೂ, ಹೆಚ್ಚು ಭಯ, ಕೋಪ, ಮುಂತಾದ ಭಾವೋದ್ರೇಕಗಳಿಗೆ ಒಳಪಟ್ಟಾಗ ಮಗು ಒಂದು ಪದದ ವಾಕ್ಯಗಳಿಗೆ ಇಳಿಯುವುದು. ಮಗುವೇಕೆ? ದೊಡ್ಡವರು ಸಹ ಈ ರೀತಿ ಮಾಡುವುದುಂಟು! ಹಾವು ಹರಿದು ಹೋಗುತ್ತಿದ್ದುದನ್ನು ನೋಡಿದ ಎಷ್ಟೇ ವಯಸ್ಸಿನ ವ್ಯಕ್ತಿಯಾದರೂ ಎಂತಹುದೇ ಸಂಸ್ಕೃತಿಯನ್ನು ಪಡೆದಿದ್ದರೂ 'ಹಾವು' ಎಂದು ಒಂದೇ ಶಬ್ದವನ್ನು ಉಚ್ಚರಿಸುವನೇ ಹೊರತು ವ್ಯಾಕರಣರೀತಿಯಾಗಿ ತಮ್ಮ ಪೂರ್ಣ ಅರ್ಥವನ್ನೇ ವಾಕ್ಯಗಳ ಮೂಲಕ ಹೊರಪಡಿಸಲಾರನು.

## ವಾಕ್ಯಗಳ ರಚನೆಯ ಬೆಳೆವಣಿಗೆ

ಮೆಕಾರ್ತಿ ಮತ್ತು ಸ್ಮಿತ್ ಎಂಬುವರು ಮಗು ಬೆಳೆಯುತ್ತ ಅದರ ವಾಕ್ಯದ ರಚನೆಯೂ ಯಾವ ವಿಧವಾಗಿ ಬೆಳವಣಿಗೆಯನ್ನು ಹೊಂದುವುದು ಎಂದು ಪರಿಶೀಲಿಸಿ ನಮಗೆ ಬಹಳ ಮುಖ್ಯವಾದ ಜ್ಞಾನವನ್ನು ಒದಗಿಸಿಕೊಟ್ಟಿರುವರು. ಇವರ ಪ್ರಕಾರ ಮಗು ಬೆಳೆಯುತ್ತ ಬೆಳೆಯುತ್ತ ಅದರ ವಾಕ್ಯದ ಉದ್ದವು ಈ ಕೆಳಗೆ ಕೊಟ್ಟಿರುವ ಪಟ್ಟಿಯಂತೆ[1] ಹೆಚ್ಚುತ್ತದೆ ಎಂದು ಕಂಡುಬರುವುದು.

### ಪಟ್ಟಿ ೬.
### ವಾಕ್ಯರಚನೆಯ ಬೆಳವಣಿಗೆ[1]

| ವಯಸ್ಸು (ತಿಂಗಳಲ್ಲಿ) | ವಾಕ್ಯದಲ್ಲಿನ ಪದಗಳ ಸರಾಸರಿ (ಮೆಕಾರ್ತಿ) | (ಸ್ಮಿತ್) |
|---|---|---|
| ೧೮ | ೧·೨ | — |
| ೨೪ | ೧.೮ | ೧·೭ |

1. ಪಟ್ಟಿ ೬.

| ವಯಸ್ಸು (ತಿಂಗಳಲ್ಲಿ) | ವಾಕ್ಯದಲ್ಲಿನ ಪದಗಳ ಸರಾಸರಿ (ಮೆಕಾರ್ತಿ) | (ಸ್ಮಿತ್) |
|---|---|---|
| ೩೦ | ೩.೧ | ೨.೪ |
| ೩೬ | ೩.೪ | ೩.೩ |
| ೪೨ | ೪.೩ | ೪.೦ |
| ೪೮ | ೪.೪ | ೪.೩ |
| ೫೪ | ೪.೬ | ೪.೭ |

ಮೇಲಿನ ಅಂಕೆಗಳನ್ನು ನಕ್ಷೆಯ ರೂಪದಲ್ಲಿ ಕೆಳಗೆ ಕೊಟ್ಟಿದೆ.




**ಚಿತ್ರ ೨೬. ಮಕ್ಕಳ ವಾಕ್ಯಗಳಲ್ಲಿನ ಪದಗಳ ಸರಾಸರಿ**

ಈ ನಕ್ಷೆಯಿಂದ ಮಕ್ಕಳು ಬೆಳೆಯುತ್ತಾ ಬೆಳೆಯುತ್ತಾ ಅವರ ವಾಕ್ಯಗಳ ಉದ್ದವೂ ಹೇಗೆ ವೃದ್ಧಿಯಾಗುವುದೆಂದು ಗೊತ್ತಾಗುತ್ತದೆ. ೧೮ ತಿಂಗಳಲ್ಲಿ ಒಂದು ಪದದಲ್ಲಿ ವಾಕ್ಯವನ್ನು ಉಪಯೋಗಿಸುತ್ತಿದ್ದ ಮಗು ಮೂರು ವರ್ಷಗಳ ವಯಸ್ಸಿನಲ್ಲಿ ೩ ಪದಗಳ ವಾಕ್ಯವನ್ನು, ನಾಲ್ಕು ವರ್ಷಗಳ ವಯಸ್ಸಿನಲ್ಲಿ ೪-೫ ಪದಗಳ ವಾಕ್ಯವನ್ನು ಉಪಯೋಗಿಸುವಷ್ಟು ಸಾಮರ್ಥ್ಯವನ್ನು ಪಡೆಯುವುದು. ಕೆಲವು ವಾಕ್ಯಗಳು ಇನ್ನೂ ಉದ್ದವಾಗಿಯೇ ಇರುವುವು. ಹೀಗೆ ಮಗು ಬೆಳೆದ ಹಾಗೆಲ್ಲಾ ತನ್ನ ಭಾಷೆಯ ಮೇಲಿನ ಹತೋಟಿಯನ್ನು ಹೆಚ್ಚಿಸಿಕೊಳ್ಳುತ್ತಾ ಹೋಗುವುದು. ವಾಕ್ಯಗಳ ಉದ್ದವು ಹೆಚ್ಚುವುದೊಂದೇ ಅಲ್ಲದೆ

---

1. ಮೆಕಾರ್ತಿ—'ಮಗುವಿನ ಭಾಷಾಬೆಳವಣಿಗೆ' ಎಂಬ ಗ್ರಂಥದಿಂದ.

ರಚನೆಯೂ ಪರಿಪಕ್ವವಾಗುವುದು. ಮೊದಮೊದಲು ಒಂದು ಪದದಿಂದಲೇ ವಾಕ್ಯದ ಪೂರ್ಣ ಅರ್ಥವನ್ನು ಸೂಚಿಸುತ್ತಿದ್ದು, ಬೆಳೆಯುತ್ತ ಬೆಳೆಯುತ್ತ ಕರ್ತೃ, ಕರ್ಮ, ಕ್ರಿಯೆಗಳನ್ನೊಳಗೊಂಡ ವಾಕ್ಯಗಳನ್ನು ಮತ್ತು ಭಾಷೆಗೆ ಅನುಗುಣವಾದ ನುಡಿಗಟ್ಟು (ಇಡಿಯಂ)ಗಳನ್ನು ಉಪಯೋಗಿಸುವುದು. ಸಾಮಾನ್ಯವಾಕ್ಯ ಮಾತ್ರವಲ್ಲದೆ ಸಂಯುಕ್ತ ವಾಕ್ಯಗಳನ್ನೂ, ಸಂಯೋಜಿತ ವಾಕ್ಯಗಳನ್ನೂ ರಚಿಸುವ ಸಾಮರ್ಥ್ಯವನ್ನು ಪಡೆಯುವುದು.

## ಶಬ್ದಕೋಶದ ಬೆಳವಣಿಗೆ

ಒಂದು ವ್ಯಕ್ತಿಯ ಶಬ್ದಕೋಶವು ಬಹು ಮುಖ್ಯವಾದುದು. ಆತನು ಮಾತನಾಡುವಾಗ ಉಪಯೋಗಿಸುವ, ಪದಗಳಿಗೂ, ಆತನು ಬರೆಯುವಾಗ ಉಪಯೋಗಿಸುವ ಪದಗಳಿಗೂ ಎಷ್ಟೋ ವ್ಯತ್ಯಾಸವಿರುವುದು ಮತ್ತು ತಾನು ಉಪಯೋಗಿಸುವ ಶಬ್ದಕೋಶಕ್ಕಿಂತ ತಾನು ಗ್ರಹಿಸಬಲ್ಲ ಶಬ್ದಕೋಶವು ವಿಸ್ತಾರವಾದುದು. ಒಂದು ಮಗುವಿನ ಶಬ್ದಕೋಶವನ್ನು ನಾವು ಕಂಡುಹಿಡಿಯುವಾಗ ಈ ಎರಡು ಅಂಶಗಳನ್ನೂ ಗಮನದಲ್ಲಿಟ್ಟಿರಬೇಕು. ಎರಡುವರ್ಷದ ಮಗು, ತಾಯಿಯು ಮಾತನಾಡುವ ಎಷ್ಟೋ ಪದಗಳ ಅರ್ಥವನ್ನು ಗ್ರಹಿಸುವುದು. ಆದರೆ ತಾನುಮಾತ್ರ ಅಷ್ಟೊಂದು ಪದಗಳನ್ನು ಬಳಸಲಾರದು. ಮಕ್ಕಳ ಶಬ್ದಕೋಶದ ಪರಿಮಿತಿಯನ್ನು ಕಂಡುಹಿಡಿಯುವಾಗ ಅವರು ಉಪಯೋಗಿಸುವ ಪದಗಳೆಷ್ಟು ಎಂಬುದನ್ನು ಮಾತ್ರ ಪರೀಕ್ಷಿಸಲಾಗುವುದು.

ಮಗುವಿನ ಶಬ್ದಕೋಶವನ್ನು ಕಂಡುಹಿಡಿಯಲು ಅನೇಕ ಮಾರ್ಗಗಳನ್ನು ಅವಲಂಬಿಸಿರುವರು. ಮಗು ಒಂದು ನಿರ್ದಿಷ್ಟ ವಯಸ್ಸಿನಲ್ಲಿ ಒಂದು ದಿವಸದಲ್ಲಿ ಬೆಳಿಗ್ಗೆಯಿಂದ ರಾತ್ರಿ ಮಲಗುವವರೆಗೂ ಉಪಯೋಗಿಸುವ ಎಲ್ಲಾ ಪದಗಳನ್ನೂ ಗುರುತು ಹಾಕಿ ಒಂದು ವಯಸ್ಸಿಗೂ ಮತ್ತೊಂದು ವಯಸ್ಸಿಗೂ ಇರುವ ವ್ಯತ್ಯಾಸವನ್ನು ಕಂಡುಹಿಡಿಯುವರು. ಅಥವ ಒಂದು ವಯಸ್ಸಿನ ಮಗುವನ್ನು ದಿನಕ್ಕೆ ಒಂದು ಗಂಟೆಯ ಹೊತ್ತು ಪರೀಕ್ಷಿಸಿ ಅದು ೮–೧೦ ದಿವಸಗಳಲ್ಲಿ ಎಷ್ಟು

ಪದಗಳನ್ನು ಉಪಯೋಗಿಸುತ್ತದೆಂಬುದರ ಮೂಲಕ ಅದರ ಶಬ್ದಕೋಶ ವನ್ನು ನಿಶ್ಚಯಿಸಲಾಗುವುದು. ಮತ್ತೊಂದು ವಿಧಾನ; ಅರ್ಥಕೋಶ ದಲ್ಲಿನ ಕೆಲವು ಪದಗಳನ್ನು ಆರಿಸಿ ಮಗು ಈ ಪದಗಳಲ್ಲಿ ಎಷ್ಟು ಪದಗಳ ಅರ್ಥವನ್ನು ಬಲ್ಲದೆಂಬುದನ್ನು ಕಂಡುಹಿಡಿದು ಇದರಿಂದ ಅದರ ಮೊತ್ತ ಶಬ್ದಕೋಶವು ಎಷ್ಟಿರುವುದೆಂಬುದನ್ನು ಲೆಕ್ಕಾಚಾರಮಾಡಿ ಕಂಡುಹಿಡಿಯುವರು. ಒಂದು ಅರ್ಥಕೋಶದಲ್ಲಿ ಹತ್ತುಸಾವಿರ ಪದ ಗಳಿವೆ ಎನ್ನೋಣ ಪ್ರತಿ ಇಪ್ಪತ್ತು ಪದಗಳಿಗೊಂದು ಪದವನ್ನು ಆರಿಸಿ ಕೊಂಡು ಮಗು ಆ ಪದದ ಉಪಯೋಗವನ್ನು ಅರಿತಿರುವುದೇ ಇಲ್ಲವೆ ಎಂದು ಕಂಡುಹಿಡಿದು ತ್ರೈರಾಶಿಯ ಲೆಕ್ಕಾಚಾರದಿಂದ ಒಟ್ಟು ಎಷ್ಟು ಪದಗಳು ಮಗುವಿಗೆ ಗೊತ್ತಿರಬಹುದು ಎಂದು ನಿಶ್ಚಯಿಸಬಹುದು.

ಸ್ಮಿತ್ ಎಂಬುವರು ಕೊನೆಯಲ್ಲಿ ಹೇಳಿರುವ ರೀತಿಯಿಂದ ಒಂದು ಪಟ್ಟಿಯನ್ನು ತಯಾರಿಸಿದರು. ಅವರು ನೂರಾರು ಮಕ್ಕಳ ತಾಯಿ ಗಳನ್ನು ದಿನಕ್ಕೆ ಸ್ವಲ್ಪ ಹೊತ್ತು ತಮ್ಮ ಮಕ್ಕಳು ಉಪಯೋಗಿಸುವ ಪದಗಳನ್ನು ಗುರುತಿಸಬೇಕೆಂದು ಕೇಳಿ ಆ ಪದಗಳ ಮೂಲಕ ಪದ ಪಟ್ಟಿಯನ್ನು ಪಯೋಗಿಸಿ ಒಂದೊಂದು ಮಗುವೂ ಎಷ್ಟು ಪದಗಳನ್ನು ಅರಿತಿರಬಹುದೆಂದು ಕಂಡುಹಿಡಿದರು. ಅವರು ಕಂಡುಹಿಡಿದಿರುವ ಅಂಕಿ ಅಂಶಗಳಿಂದ ಈ ಕೆಳಗಿನ ಪಟ್ಟಿಯನ್ನು ತಯಾರಿಸಲಾಗಿದೆ.

**ಪಟ್ಟಿ ೭**

**ಮಕ್ಕಳ ಶಬ್ದಕೋಶದ ಸರಾಸರಿ**

| ವಯಸ್ಸು | | ಐ. ಕ್ಯೂ. | ಸರಾಸರಿ | ವಾರ್ಷಿಕ |
|---|---|---|---|---|
| ವರ್ಷ | ತಿಂಗಳು | | ಪದಗಳು | ಅಭಿವೃದ್ಧಿ |
| ೦ | ೧೦ | — | ೧ | — |
| ೧ | ೦ | — | ೩ | ೩ |
| ೧ | ೬ | — | ೨೨ | — |
| ೨ | ೦ | — | ೨೭೨ | ೨೬೯ |
| ೩ | ೦ | ೧೦೯ | ೮೯೬ | ೬೨೪ |
| ೪ | ೦ | ೧೦೯ | ೧೫೪೦ | ೬೪೪ |
| ೫ | ೦ | ೧೦೮ | ೨೦೭೨ | ೫೩೨ |
| ೬ | ೦ | ೧೦೮ | ೨೫೬೨ | ೪೯೦ |

ಈ ಪಟ್ಟಿಯಿಂದ ಮಗುವಿನ ಭಾಷಾಜ್ಞಾನವು ಎಷ್ಟು ತೀವ್ರವಾಗಿ ಮುಂದುವರಿಯುವುದೆಂಬುದು ಸ್ಪಷ್ಟವಾಗುವುದು. ಒಂದು ವರ್ಷ ವಯಸ್ಸಿನ ಮಗು ಕೇವಲ ೨-೩ ಪದಗಳನ್ನು ಮಾತ್ರ ಅರಿತಿರುವುದು. ಎರಡು ವರ್ಷ ವಯಸ್ಸಿನಲ್ಲಿ ೩೦೦ ಪದಗಳನ್ನೂ, ಮೂರು ವರ್ಷಗಳಲ್ಲಿ ೯೦೦ ಪದಗಳನ್ನೂ ನಾಲ್ಕು ವರ್ಷದಲ್ಲಿ ೧೫೦೦ ಪದಗಳನ್ನೂ ಐದು ವರ್ಷಗಳಲ್ಲಿ ೩೦೦೦ ಪದಗಳನ್ನೂ ಉಪಯೋಗಿಸಲು ಕಲಿತಿರುವುದು. ಈ ಅಂಕಿಗಳು ಸರಾಸರಿಯನ್ನು ಮಾತ್ರ ತೋರಿಸುವುವು. ಕೆಲವು ಮಕ್ಕಳು ಸರಾಸರಿಗಿಂತ ಹಿಂದುಳಿಯಬಹುದು ಅಥವ ಮುಂದಿರಬಹುದು.

ಹೀಗೆ ಬೆಳೆಯುತ್ತ ಬೆಳೆಯುತ್ತ ಮಗು ಹೆಚ್ಚು ಹೆಚ್ಚಾಗಿ ಪದಗಳನ್ನು ಅರಿಯುವುದೊಂದೇ ಅಲ್ಲದೆ ಪದಸ್ವರೂಪ (ಪಾರ್ಟ್ಸ್ ಆಫ್ ಸ್ಪೀಚ್)ದ ಪರಿಚಯದಲ್ಲಿಯೂ ಬೆಳವಣಿಗೆಯನ್ನು ಹೊಂದುವುದು. ಎರಡು ವರ್ಷದ ಮಗುವಿನ ಶಬ್ದಕೋಶದಲ್ಲಿ ಅರ್ಧಕ್ಕಿಂತ ಹೆಚ್ಚಾಗಿ ನಾಮಪದಗಳಿರುವುವು. ವಯಸ್ಸು ಹೆಚ್ಚುತ್ತ ಹೆಚ್ಚುತ್ತ ಇತರ ವಾಚಕಗಳ ಪರಿಚಯ ಹೆಚ್ಚಿ, ನಾಮಪದಗಳ ಪ್ರಮಾಣವು ಕಡಿಮೆಯಾಗುವುದು.

**ಪಟ್ಟಿ ೮.**

**ಸಿ.ಬಿ ಎಂಬ ಹುಡುಗನ ಶಬ್ದಕೋಶದ ವಿಶ್ಲೇಷಣ**

| ವಯಸ್ಸು [ತಿಂಗಳಿನಲ್ಲಿ] | ಒಟ್ಟು ಪದಗಳು | ನಾಮಪದ | ಸರ್ವನಾಮ | ಕ್ರಿಯಾಪದ | ವಿಶೇಷಣ | ಕ್ರಿಯಾ ವಿಶೇಷಣ | ಉಪಸರ್ಗ | ಸಂಬಂಧಾವ್ಯಯ |
|---|---|---|---|---|---|---|---|---|
| ೧೨ | ೫ | ೪ | | ೧ | | | | |
| ೧೮ | ೧೦೯ | ೮೦. | | ೧೨ | ೯ | | ೪ | |
| ೨೪ | ೫೬೬ | ೩೪೯ | ೮ | ೧೧೧ | ೫೮ | ೭ | ೧೧ | ೧ |
| ೩೬ | ೧೦೨೦ | ೫೭೧ | ೧೭ | ೨೦೧ | ೧೫೯ | ೫೩ | ೨೩ | ೧೧ |

' ವ್ಯಾಲೆಂಟೀನ್ '' [1] ಎಂಬುವರು ತಮ್ಮ ಮಗನು ಉಪಯೋಗಿಸಿರುವ ಶಬ್ದಗಳನ್ನು ಗುರುತು ಹಚ್ಚಿ ಆ ಪದಗಳನ್ನು ವಿಂಗಡಿಸಿದಾಗ ಕಂಡುಬಂದ ಅಂಶಗಳನ್ನು ಮೇಲಿನ ಪಟ್ಟಿಯಲ್ಲಿ ಕೊಡಲಾಗಿದೆ.

ಈ ಮಗುವಿಗೆ ಒಂದು ವರ್ಷ ವಯಸ್ಸಿನಲ್ಲಿ ನಾಲ್ಕು ನಾಮಪದಗಳೂ ಒಂದು ಕ್ರಿಯಾಪದವು ಮಾತ್ರ ತಿಳಿದಿದ್ದಿತು. ಒಂದೂವರೆ ವರ್ಷ ವಯಸ್ಸಿನಲ್ಲಿ ಮಗು ನಾಮಪದ ಕ್ರಿಯಾಪದಗಳನ್ನಲ್ಲದೆ ವಿಶೇಷಣ ಮತ್ತು ಉಪಸರ್ಗಗಳನ್ನೂ ಕಲಿಯಿತು. ಉಪಸರ್ಗಗಳು ಒಂದು ವಸ್ತುವಿಗೂ ಇನ್ನೊಂದು ವಸ್ತುವಿಗೂ ಇರುವ ಕಾಲ, ದೇಶಗಳ ಸಂಬಂಧವನ್ನು ಸೂಚಿಸುವುವು. ಎರಡು ವರ್ಷ ವಯಸ್ಸಿನಲ್ಲಿ ಮಗು ಎಲ್ಲಾ ವಾಚಕಗಳ ಪದಗಳನ್ನೂ ಉಪಯೋಗಿಸಲು ಪ್ರಾರಂಭ ಮಾಡಿರುವುದು. ಈ ಮೇಲಿನ ಪಟ್ಟಿಯು ಒಂದು ಮಗು ಉಪಯೋಗಿಸಿದ ಪದಗಳ ವಿಶ್ಲೇಷಣವನ್ನು ತೋರಿಸುವುದು. ಮೆಕಾರ್ತಿ ಎಂಬುವರು ನೂರಾರು ಮಕ್ಕಳನ್ನು ಪರಿಶೀಲಿಸಿ ತಯಾರಿಸಿದ ಪಟ್ಟಿಯನ್ನು ಈ ಕೆಳಗೆ ಕೊಟ್ಟಿದೆ. ಈ ಪಟ್ಟಿಯಲ್ಲಿ ಮಗು ತನಗೆ ಗೊತ್ತಿರುವ ಒಟ್ಟು

**ಪಟ್ಟಿ ೯.**

**ಮಕ್ಕಳು ಉಪಯೋಗಿಸುವ ಬೇರೆ ಬೇರೆ ವಾಚಕಗಳ ಶೇ. ಕ್ರಮ**

| ವಯಸ್ಸು [ತಿಂಗಳಿನಲ್ಲಿ] | ನಾಮಪದ | ಕ್ರಿಯಾಪದ | ವಿಶೇಷಣ | ಕ್ರಿಯಾ ವಿಶೇಷಣ | ಸರ್ವನಾಮ | ಸಂಬಂಧಾವ್ಯಯ | ಉಪಸರ್ಗ | ಆಶ್ಚರ್ಯ ಸೂಚಕ | ಇತರ |
|---|---|---|---|---|---|---|---|---|---|
| ೧೮ | ೫೦ | ೧೩·೯ | ೯·೬ | ೭·೯ | ೧೦·೩ | ೦ ೫ | ೦·೦ | ೭·೬ | ೦·೦ |
| ೩೬ | ೨೩·೪ | ೨೩·೦ | ೧೬·೧ | ೭·೦ | ೧೯·೨ | ೨·೪ | ೬·೯ | ೧·೫ | ೦·೫ |
| ೮೪ | ೧೯·೩ | ೨೫·೧ | ೧೫·೨ | ೭·೦ | ೨೦·೫ | ೩·೮ | ೭·೧ | ೧·೨ | ೦·೮ |

1. ವ್ಯಾಲೆಂಟೀನ್ " ಸೈಕಾಲಜಿ ಆಫ್ ಅರ್ಲಿ ಚೈಲ್ಡ್‌ಹುಡ್ " ೧೯೪೩ ಪುಟ ೪೪೮ ರಿಂದ ಸಂಗ್ರಹಿಸಿದೆ.

ಪದಗಳಲ್ಲಿ ಯಾವಯಾವ ವಾಚಕಗಳನ್ನು ಯಾವಯಾವ ಪ್ರಮಾಣ ದಲ್ಲಿ ಉಪಯೋಗಿಸುವುದೆಂಬುದು ಸ್ಪಷ್ಟವಾಗುವುದು.

## ಮಕ್ಕಳ ಸಂಭಾಷಣೆಯಲ್ಲಿ ಆತ್ಮಪ್ರತಿಷ್ಠೆ

ರಗ್ ಮುಂತಾದವರು ಶಿಶುವಿಹಾರಕ್ಕೆ ಹೋಗುವ ಸಣ್ಣ ಮಕ್ಕಳ ಸಂಭಾಷಣೆಯನ್ನು ಗುರುತುಹಾಕಿ ಅವರು ಭಾಷೆಯನ್ನು ಹೇಗೆ ಉಪಯೋಗಿಸುವರು ಎಂದು ಕಂಡುಹಿಡಿದರು. ಮಕ್ಕಳು ಸಂಭಾಷಣೆಯಲ್ಲಿ ಶೇಕಡ ೪೧ರಷ್ಟು ಆತ್ಮಪ್ರತಿಷ್ಠೆಯನ್ನು ವ್ಯಕ್ತಪಡಿಸುವ ಮಾತುಗಳನ್ನು ಉಪಯೋಗಿಸುವರೆಂದು ಕಂಡುಬಂದಿದೆ. ವಾಸ್ತವಾಂಶವನ್ನು ನಿರೂಪಿಸುವ, ಅಂದರೆ ಇದ್ದುದನ್ನು ಇದ್ದಹಾಗೆ ಹೇಳುವ, ಮಾತುಗಳು ಶೇಕಡ ೧೬ರಷ್ಟು ಮಾತ್ರವಿರುವುವು. ಈ ವಯಸ್ಸಿನಲ್ಲಿ ಮಕ್ಕಳು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುವುದಕ್ಕೋ ಅಥವ ಇತರರ ಕೈಯಲ್ಲಿ ಕೆಲಸಮಾಡಿಸಿಕೊಳ್ಳುವುದಕ್ಕೊ ಮಾತನಾಡುವರು. ಮುಖ್ಯವಾಗಿ ತಮ್ಮ ಪ್ರತಿಷ್ಠೆಯನ್ನು ತೋರಿಸುವುದಕ್ಕೊ, ತಮ್ಮ ಕಡೆಗೆ ಇತರರ ಗಮನವನ್ನು ಸೆಳೆಯುವುದಕ್ಕೊ, ಅಥವ ತಮಗೆ ಬೇಕಾದುದನ್ನು ಇತರರಿಂದ ಕೇಳಿ ಪಡೆಯುವುದಕ್ಕೊ ಭಾಷೆಯನ್ನು ಉಪಯೋಗಿಸುವರು. ಪಿಯಾಜೆ ಎಂಬುವರು ಮಕ್ಕಳ ಮಾತುಗಳು ಸಾಧಾರಣವಾಗಿ ಸ್ವವಿಷಯವಾಗಿಯೇ ಇರುವುವು ಎಂದು ಹೇಳಿರುವರು. ಮೊದಮೊದಲು ಮಾತು ಕಲಿಯುವಾಗ ಮಕ್ಕಳು ತಮ್ಮಷ್ಟಕ್ಕೆ ತಾವೇ ಮಾತನಾಡಿಕೊಳ್ಳುವರೆಂಬ ವಿಷಯವು ಎಲ್ಲರಿಗೂ ಗೊತ್ತಿರುವುದು. ಬೇರೆಯವರೊಡನೆ ಮಾತನಾಡುವಾಗಲೂ ಪರಸ್ಪರಭಾವವು ಬಹಳ ಕಡಿಮೆಯಾಗಿದ್ದು, ಭಾಷೆಯನ್ನು ಕಲಿಯುವುದಕ್ಕೋಸ್ಕರ ಪುನರಾವೃತ್ತಿಮಾಡುತ್ತಿರುವುದು. ನಾಲ್ಕಾರು ಮಕ್ಕಳು ತಮ್ಮ ಆಟಿಕೆಗಳನ್ನಿಟ್ಟುಕೊಂಡು ಆಡುತ್ತಿರುವಾಗಲೂ, ಒಂದೇ ಸ್ಥಳದಲ್ಲಿ ಅವರೆಲ್ಲರೂ ಕುಳಿತಿದ್ದರೂ ಒಂಟೊಂಟಿಯಾಗಿಯೇ ಆಡತೊಡಗುವರು. ಪರಸ್ಪರಸಂಭಾಷಣೆಯು ಅತಿ ಸ್ವಲ್ಪವಾಗಿದ್ದು ಮಾತುಗಳು ಸ್ವವಿಷಯವಾಗಿಯೇ ಇದ್ದು, ಮಕ್ಕಳು ತಮ್ಮೊಂದಿಗೆ ತಾವು ಮಾತನಾಡಿಕೊಳ್ಳುತ್ತಾ ಆಟವನ್ನು ಮುಂದುವರಿಸುವರು. ಪಿಯಾಜೆಯುವರು

೬|| ವರ್ಷ ವಯಸ್ಸಿನ ಇಬ್ಬರು ಮಕ್ಕಳ ಸಂಭಾಷಣೆಯನ್ನು ವಿಶ್ಲೇಷಣ ಮಾಡಿ ಅವರ ಭಾಷೆಯಲ್ಲಿ ಶೇಕಡ ೩೮ರಷ್ಟು ಆತ್ಮಕೇಂದ್ರೀಯುತ ವಾಗಿಯೂ, ಶೇಕಡ ೪೫ರಷ್ಟು ಸಾಹವಾಸಿಕಯುತವಾಗಿಯೂ ಇರುವು ದೆಂದು ಕಂಡುಹಿಡಿದರು. ಮಕ್ಕಳು ಬೆಳೆಯುತ್ತ ಬೆಳೆಯತ್ತ ಭಾಷೆಯ ಕೇಂದ್ರೀಯುತವು ಕಡಿಮೆಯಾಗುತ್ತ ಬರುವುದು.

## ಬುದ್ಧಿಶಕ್ತಿ ಮತ್ತು ಭಾಷೆಯ ಬೆಳವಣಿಗೆ

ಬುದ್ಧಿಶಕ್ತಿಯು ಬಹಳ ಕಡಿಮೆಯಾಗಿರುವ ದಡ್ಡ ಮಕ್ಕಳು ಭಾಷೆಯನ್ನು ಬಹಳ ನಿಧಾನವಾಗಿ ಕಲಿಯುವರು. ಹೆಚ್ಚು ಬುದ್ಧಿ ಶಕ್ತಿಯಿರುವ ಮಕ್ಕಳು ಸಾಧಾರಣ ಮಕ್ಕಳಿಗಿಂತ ಅತಿ ಶೀಘ್ರವಾಗಿ ಮಾತುಗಳನ್ನು ಕಲಿಯುವರು. ಆದರೆ ಇದರಿಂದ ಮಾತುಗಳನ್ನು ನಿಧಾನವಾಗಿ ಕಲಿಯುವ ಮಕ್ಕಳು ದಡ್ಡರೆಂದಾಗಲೀ ಬುದ್ಧಿಶಕ್ತಿಯಲ್ಲಿ ಕಡಿಮೆಯವರೆಂದಾಗಲೀ ಊಹಿಸಬಾರದು. ಕಾರಣಾಂತರಗಳಿಂದ ಒಳ್ಳೆಯ ಬುದ್ಧಿಶಕ್ತಿಯಿರುವ ಮಗು ಭಾಷೆಯನ್ನು ನಿಧಾನವಾಗಿ ಕಲಿಯಬಹುದು. ಆದರೆ ಸಾಧಾರಣವಾಗಿ ಬುದ್ಧಿಶಕ್ತಿಗೂ ಭಾಷೆ ಯನ್ನು ಕಲಿಯುವುದಕ್ಕೂ ಒಂದು ನಿಕಟ ಸಂಬಂಧವಿದೆ. ಈ ನಿಯಮವು ಸರಾಸರಿಯನ್ನನುಸರಿಸಿ ಒಟ್ಟು ಗುಂಪಿನ ವಿಷಯವನ್ನು ತಿಳಿಸುವುದೇ ಹೊರತು ಪ್ರತಿಯೊಂದು ವ್ಯಕ್ತಿಯಲ್ಲಿಯೂ ಈ ಸಂಬಂಧ ವಿರುವುದೆಂದು ಹೇಳುವುದಿಲ್ಲ. ಸಾಧಾರಣವಾಗಿ ಹೆಚ್ಚು ಬುದ್ಧಿಶಕ್ತಿ ಯುಳ್ಳ ಮಕ್ಕಳು ಪದಗಳನ್ನು ಬೇಗ ಕಲಿಯುವರು; ಹೆಚ್ಚು ಹೆಚ್ಚಾಗಿ ಕಲಿಯುವರು. ಅವರ ಉಚ್ಚಾರಣೆಯೂ ಸ್ಪಷ್ಟವಾಗಿರುವುದು. ವಾಕ್ಯ ಗಳು ಉದ್ದವಾಗಿಯೂ ತಪ್ಪಿಲ್ಲದೆಯೂ ಇರುವುವು. ಇದರಿಂದಲೇ ದೊಡ್ಡ ಮಕ್ಕಳಲ್ಲಿಯೂ ವಯಸ್ಕರಲ್ಲಿಯೂ ಬುದ್ಧಿಶಕ್ತಿಯನ್ನು ಅಳೆಯುವಾಗ ಭಾಷಾಜ್ಞಾನವನ್ನೆ ಹೆಚ್ಚಾಗಿ ಉಪಯೋಗಿಸುವರು. ಕಾರಣಾಂತರಗಳಿಂದ ಹೆಚ್ಚು ಬುದ್ಧಿಶಕ್ತಿಯುಳ್ಳ ಮಗು ಭಾಷೆಯನ್ನು ಕಲಿಯುವುದರಲ್ಲಿ ಚಿಕ್ಕವಯಸ್ಸಿನಲ್ಲಿ ಹಿಂದುಳಿದರೂ, ಸ್ವಲ್ಪ ಕಾಲದ ನಂತರ ಪರಿಸ್ಥಿತಿಯು ಬದಲಾಯಿಸಿ ಶಾಲೆಗೆ ಹೋಗುವ ವಯಸ್ಸಿನಲ್ಲಿ ತನ್ನ ಬುದ್ಧಿಶಕ್ತಿಗೆ ತಕ್ಕಷ್ಟು ಪದಗಳನ್ನು ಕಲಿಯುವುದು. ಮೂರು

ವರ್ಷ ವಯಸ್ಸಾದರೂ ಹತ್ತಿಪ್ಪತ್ತು ಪದಗಳನ್ನು ಮಾತ್ರ ಉಪಯೋಗಿಸುತ್ತಿದ್ದ ಮಗು ಇನ್ನೆರಡು ಮೂರು ವರ್ಷಗಳಲ್ಲಿ ಸಾವಿರಾರು ಪದಗಳನ್ನು ಕಲಿತು ತನ್ನ ಮಟ್ಟಕ್ಕೆ ಸರಿಯಾಗಿ ಬೆಳೆಯಬಹುದು.

**ಸಾಮಾಜಿಕ ಅಂತಸ್ತು ಮತ್ತು ಭಾಷೆಯ ಬೆಳವಣಿಗೆ**

ತಾಯಿತಂದೆಗಳ ಆರ್ಥಿಕ ಸ್ಥಿತಿ ಮತ್ತು ಸಾಮಾಜಿಕ ಅಂತಸ್ತುಗಳು ಭಾಷೆಯ ಬೆಳವಣಿಗೆಯ ಮೇಲೆ ತಮ್ಮ ಪ್ರಭಾವವನ್ನು ಬೀರುವುವು. ಉತ್ತಮ ದರ್ಜೆಗೆ ಸೇರಿದವರ ಮನೆಗಳು ದೊಡ್ಡವಾಗಿಯೂ ಅನೇಕ ಸಾಮಾನುಗಳನ್ನುಳ್ಳವುಗಳಾಗಿಯೂ ಇರುವುವು. ಈ ಮನೆಗಳಲ್ಲಿ ಪುಸ್ತಕಭಂಡಾರಗಳೂ, ವಾರ್ತಾಪತ್ರಿಕೆಗಳೂ, ಹೆಚ್ಚಾಗಿರುವುವು. ಅಲ್ಲದೆ ತಂದೆತಾಯಿಗಳು, ಇತರ ಮಕ್ಕಳು ಮತ್ತು ವಯಸ್ಕರು ವಿದ್ಯಾವಂತರಾಗಿಯೂ ಇರುವರು. ಅವರ ಭಾಷೆಯು ಅನೇಕ ಪದಗಳಿಂದ ಕೂಡಿರುವುದು. ಅವರ ಸಂಭಾಷಣೆಯಲ್ಲಿ ನಾನಾ ವಿಷಯಗಳನ್ನು ಕುರಿತು ಚರ್ಚೆ ನಡೆಯುವುದು. ಈ ಕಾರಣಗಳಿಂದ ಇಂತಹ ಮನೆಗಳಲ್ಲಿ ಮಗು ಕೇಳುವ ಪದಗಳೂ, ಅವುಗಳ ಉಚ್ಚಾರಣೆ ಮತ್ತು ಅವುಗಳ ಪ್ರಯೋಗ ಉತ್ತಮವಾಗಿರುವುವು. ಮತ್ತು ಮನೆಯಲ್ಲಿ ಅನೇಕ ಸಾಮಾನು ಸಲಕರಣೆಗಳು ಇರುವುದರಿಂದ ಅವುಗಳ ಹೆಸರನ್ನೆಲ್ಲಾ ಮಗು ಕಲಿಯುವುದಕ್ಕೆ ಅವಕಾಶವಿರುವುದು. ಪಟಗಳು, ಚಿತ್ರದ ಪುಸ್ತುಕಗಳು ಇರುವುದರಿಂದ ಅವುಗಳನ್ನು ನೋಡಿ ವಿವರಿಸಿ ಭಾಷಾಜ್ಞಾನವನ್ನ ಹೆಚ್ಚಿಸಿಕೊಳ್ಳುವುದು ತಾಯಿತಂದೆಗಳು ಸುಸಂಸ್ಕೃತರಾಗಿರುವುದರಿಂದ ಅವರು ಹೇಳುವ ಕತೆಗಳ ಮೂಲಕವೂ ಅವರು ವಿವರಿಸುವ ವಿಷಯಗಳ ಮೂಲಕವೂ ಭಾಷೆಯು ಉನ್ನತಸ್ಥಿತಿಯನ್ನು ಪಡೆಯುವುದು.

ಮಗುವಿನ ಭಾಷಾ ಬೆಳವಣಿಗೆಗೂ ತಾಯಿತಂದೆಗಳ ಆರ್ಥಿಕ ಸ್ಥಿತಿ ಮತ್ತು ಸಾಮಾಜಿಕ ಅಂತಸ್ತುಗಳಿಗೂ ಇರುವ ಸಂಬಂಧವನ್ನು ಕುರಿತು ಮೆಕಾರ್ಥಿಯವರು ಕಂಡುಹಿಡಿದಿರುವ ಮುಖ್ಯ ಅಂಶಗಳನ್ನೇ ಈ ಕೆಳಗಿನ ನಕ್ಷೆಯಲ್ಲಿ ತೋರಿಸಲಾಗಿದೆ. ಮೊದಲಿನ ದರ್ಜೆಯ ಮಕ್ಕಳ ತಾಯಿತಂದೆಗಳು ವೈದ್ಯರೂ, ವಕೀಲರೂ, ಪ್ರೌಢಶಾಲೆಗಳ

ಉಪಾಧ್ಯಾಯರೂ, ಕಾರ್ಖಾನೆಗಳ ಆಡಳಿತಗಾರರೂ, ನ್ಯಾಯಾಧೀಶರೂ ಮುಂತಾದ ಉನ್ನತ ಉದ್ಯೋಗಸ್ಥರಾಗಿರುವರು. ಎರಡನೆಯ




ಚಿತ್ರ ೨೮. ಸಾಮಾಜಿಕ ಅಂತಸ್ತು ಮತ್ತು ಭಾಷೆಯ ಬೆಳವಣಿಗೆ

ದರ್ಜೆಯವರು ವ್ಯಾಪಾರ, ವಾಣಿಜ್ಯ, ಮುಂತಾದ ಉದ್ಯೋಗದಲ್ಲಿ ತೊಡಗಿರುವ ತಂದೆತಾಯಿಗಳ ಮಕ್ಕಳಾಗಿರುವರು. ಮೂರನೆಯ ಗುಂಪಿನವರು ಗುಮಾಸ್ತೆ ಕೆಲಸದಲ್ಲಿರುವವರೂ ಮತ್ತು ನಿಪುಣ ಕೈಗಾರಿಕೆ ಕೆಲಸಗಳನ್ನು ಮಾಡುವವರ ಮಕ್ಕಳಾಗಿರುವರು. ನಾಲ್ಕನೆಯ ಗುಂಪಿನವರು ಸಾಧಾರಣ ಕೈಗಾರಿಕೆ ಕೆಲಸಗಳನ್ನು ಮಾಡುವವರ ಮಕ್ಕಳಾಗಿರುವರು. ಐದನೆಯ ಗುಂಪಿನವರು ಯಾವ ಸ್ಥಿರವಾದ ಕೆಲಸವೂ ಇಲ್ಲದೆ ಸಿಕ್ಕಿದ ಕಡೆ ಸಿಕ್ಕಿದ ಸಮಯದಲ್ಲಿ ಕೆಲಸಗಳನ್ನು ಮಾಡಿ ಜೀವನೋಪಾಯ ನಡೆಸುವವರ ಮಕ್ಕಳು.

ಮೊದಲನೆಯ ದರ್ಜೆಯ ಮಕ್ಕಳು ಮೂರು ವರ್ಷ ವಯಸ್ಸಿನಲ್ಲಿ ೫–೬ ಪದಗಳಿಂದ ಕೂಡಿದ ವಾಕ್ಯಗಳನ್ನೇ ಉಪಯೋಗಿಸುವರು. ಆದರೆ ಇದೇ ವಯಸ್ಸಿನಲ್ಲಿ ಇತರ ಗುಂಪಿನ ಮಕ್ಕಳು ಎರಡು–ಮೂರು ಪದಗಳ ವಾಕ್ಯಗಳನ್ನು ರಚಿಸುವಷ್ಟು ಶಕ್ತಿಯನ್ನು ಪಡೆದಿರುವರು. ಮೂರನೆಯ ವರ್ಷದಲ್ಲಿ ತಂದೆ ಮಾಡುವ ಕೆಲಸಕ್ಕೂ ಮಕ್ಕಳು ಉಪ

ಯೋಗಿಸುವ ವಾಕ್ಯಗಳಿಗೂ ಇರುವ ಸಂಬಂಧವನ್ನು ಬಹಳ ಸ್ಪಷ್ಟವಾಗಿ ನಕ್ಷೆಯಿಂದ ಕಾಣಬಹುದು. ಮೇಲೆ ನೋಡಿದ ಹಾಗೆ ಮೊದಲಿನ ಎರಡು ಮೂರು ವರ್ಷಗಳಲ್ಲಿ ಮಕ್ಕಳ ಬೆಳವಣಿಗೆಯು ಅತಿ ತೀವ್ರವಾಗೆ ನಡೆಯುವುದಷ್ಟೆ. ಮಾನಸಿಕ ವಿಕಾಸಕ್ಕೆ ಭಾಷೆಯು ಬಹು ಮುಖ್ಯ ಸಾಧನ, ಆದರೆ ಒಂದು ಮಗು ಕಲಿಯುವ ಮಾತುಗಳೂ, ರಚಿಸುವ ವಾಕ್ಯಗಳೂ ತಂದೆತಾಯಿಗಳ ಸಂಸ್ಕೃತಿಯನ್ನು ಅವಲಂಬಿಸಿರುವುದೆಂದು ಈ ನಕ್ಷೆಯು ತೋರಿಸುತ್ತದೆ. ಆದುದರಿಂದ ಹಿಂದುಳಿದ ಪಂಗಡದವರ ಮಕ್ಕಳು ಶಾಲೆಗಳಲ್ಲಿ ಕಲ್ಪಿಸಿಕೊಟ್ಟಿರುವ ಅವಕಾಶಗಳನ್ನು ಪೂರ್ತಿಯಾಗಿ ಉಪಯೋಗಿಸಿಕೊಳ್ಳುವುದು ಏತಕ್ಕೆ ಕಷ್ಟಕರವಾದುದೆಂಬುದು ಈ ಅಂಕಿ ಅಂಶಗಳಿಂದ ಸ್ಪಷ್ಟವಾಗುತ್ತದೆ. ಬೇರೆಬೇರೆ ಮನೆತನಗಳಲ್ಲಿ ಬೇರೆ ಸಂಸ್ಕೃತಿಯ ಆಶ್ರಯದಲ್ಲಿ ಬೆಳೆದ ಮಕ್ಕಳನ್ನೆಲ್ಲಾ ಒಟ್ಟುಗೂಡಿಸಿ ಒಂದು ಶಾಲೆಯಲ್ಲಿ ಸೇರಿಸಿ “ಒಂದೇ ವಿಧವಾದ ಶಿಕ್ಷಣವನ್ನು ಕೊಡುತ್ತಿದ್ದೇವೆ; ಆದರೂ ಹಿಂದುಳಿದ ಪಂಗಡಗಳು ಒದಗಿಸಿದ ಅವಕಾಶಗಳನ್ನು ಸದುಪಯೋಗಪಡಿಸಿಕೊಳ್ಳುವುದಿಲ್ಲ,” ಎಂದು ಹೇಳಿದರೆ ಇದು ಸತ್ಯಾಂಶವನ್ನು ಸೂಚಿಸುವುದಿಲ್ಲ. ಎಲ್ಲಾ ಮಕ್ಕಳೂ ಕಲ್ಪಿಸಿಕೊಟ್ಟಿರುವ ಅವಕಾಶವನ್ನುಪಯೋಗಿಸಿಕೊಳ್ಳಬೇಕಾದರೆ ಶಾಲೆಗಳ ಸಂಖ್ಯೆಯನ್ನು ಹೆಚ್ಚುಮಾಡಿದರೆ ಸಾಲದು. ಅನಕ್ಷರಸ್ಥರಾದ ತಂದೆತಾಯಿಗಳಿಗೆ ಓದುಬರೆಹ ಕಲಿಸಬೇಕು. ಎಷ್ಟು ಬಡತನದ ಮನೆಯಾದರೂ ವಾರ್ತಾಪತ್ರಿಕೆಗಳನ್ನೂ ಪುಸ್ತಕಗಳನ್ನೂ ಕೊಂಡುಕೊಳ್ಳುವ ಹಾಗೆ ಅತಿ ಕಡಿಮೆ ಬೆಲೆಯಲ್ಲಿ ಅವುಗಳನ್ನು ಒದಗಿಸಬೇಕು. ತಂದೆತಾಯಿಗಳ ಭಾಷಾಜ್ಞಾನವು ಹೆಚ್ಚಾಗಲು ಪುಸ್ತಕಭಂಡಾರಗಳು, ರೇಡಿಯೋ, ಚಿತ್ರಶಾಲೆಗಳು, ಮುಂತಾದುವುಗಳನ್ನು ಪ್ರತಿಯೊಂದು ಹಳ್ಳಿಗೂ ಒದಗಿಸಿಕೊಡುವುದು ಅತ್ಯಾವಶ್ಯಕ. ಶಾಲೆಯಲ್ಲಿಯೂ ಸಹ ಹೆಚ್ಚು ಸಲಕರಣೆಗಳನ್ನು ಕೊಟ್ಟು ಚಿತ್ರಪುಸ್ತಕಗಳನ್ನು ಹೆಚ್ಚಿಸಿದರೆ ಉಪಾಧ್ಯಾಯರು ಮಕ್ಕಳ ಅನುಭವವನ್ನು ವೃದ್ಧಿಗೊಳಿಸಿ ಅವರ ಭಾಷಾಜ್ಞಾನವನ್ನು ಹೆಚ್ಚಿಸಬಹುದು.

ಒಂದು ಮಗುವಿನ ಭಾಷಾಜ್ಞಾನವು ಮನೆಯಲ್ಲಿ ಇತರರು ಉಪಯೋಗಿಸುವ ಭಾಷೆಯ ಆಧಾರದ ಮೇಲೆ ನಿಂತಿರುವುದೆಂಬುದಕ್ಕೆ ಮತ್ತೊಂದು ಪ್ರಯೋಗದ ಫಲಿತಾಂಶವನ್ನು ನಿದರ್ಶನವಾಗಿ ಕೊಡಬಹುದು. ' ಡೇ ' ಎಂಬುವರು ಅವಳಿಮಕ್ಕಳ ಭಾಷಾಬೆಳವಣಿಗೆಗೂ ಒಂಟಿಯಾಗಿ ಹುಟ್ಟಿದ ಮಕ್ಕಳ ಭಾಷಾಬೆಳವಣಿಗೆಗೂ ಇರುವ ಸಂಬಂಧವನ್ನು ಕಂಡುಹಿಡಿದರು. ಮನೆಯಲ್ಲಿ ಒಂದೇ ಮಗುವಿದ್ದರೆ ಆ ಮಗು ದೊಡ್ಡವರ ಸಹವಾಸವನ್ನು ಮಾಡಿ ತನ್ನ ಭಾಷಾಜ್ಞಾನವನ್ನು ಮುಂದುವರಿಸುವುದು. ಅವಳಿ ಮಕ್ಕಳು ಸಾಮಾನ್ಯವಾಗಿ ಪರಸ್ಪರ ತಾವಿಬ್ಬರೇ ಮಾತನಾಡಿಕೊಂಡು ತಾಯಿತಂದೆಗಳ ಜೊತೆಯಲ್ಲಿ ಅಷ್ಟು ಹೆಚ್ಚಾಗಿ ಸಂಭಾಷಿಸದೇ ಇರಬಹುದು. ಈ ಕೆಳಗಿನ ನಕ್ಷೆಯು ಅವಳಿ ಮಕ್ಕಳ ವಾಕ್ಯಗಳಿಗೂ ಒಂಟಿ ಮಕ್ಕಳ ವಾಕ್ಯಗಳಿಗೂ ಇರುವ ವ್ಯತ್ಯಾಸವನ್ನು ತೋರಿಸುವುದು.




**ಚಿತ್ರ ೨೯. ಒಂಟಿ ಮತ್ತು ಅವಳಿ ಮಕ್ಕಳಲ್ಲಿ ಭಾಷೆಯ ಬೆಳವಣಿಗೆ**

## ಮಾತನಾಡುವುದರಲ್ಲಿ ಕೆಲವು ದೋಷಗಳು

ಕೆಲವು ಮಕ್ಕಳು ಭಾಷೆಯನ್ನು ಸರಿಯಾಗಿ ಕಲಿಯದಿರುವುದಕ್ಕೆ

ತಾಯಿತಂದೆಗಳೇ ಕಾರಣರಾಗುವರು. ಸಣ್ಣ ಮಕ್ಕಳು ತಪ್ಪು ಉಚ್ಚಾರಣೆಗಳಿಂದ ಮಾತನಾಡಿದರೆ ಬಹಳ ಮುದ್ದಾಗಿರುವುದೆಂದು ಮಕ್ಕಳ ಜೊತೆಯಲ್ಲಿ ಅದೇ ಶಬ್ದಗಳನ್ನುಪಯೋಗಿಸಿ ಮಾತನಾಡುವರು. ಕೆಲವು ಸಮಯಗಳಲ್ಲಿ ಮನೆಯಲ್ಲಿರುವ ನಾಲ್ಕಾರು ಪದಾರ್ಥಗಳಿಗೆ ಒಂದು ಪ್ರತ್ಯೇಕವಾದ, ಬಳಕೆಯಲ್ಲಿಲ್ಲದಿರುವ ಪದವನ್ನು ಕಲ್ಪಿಸಿ ಹೇಳಿಕೊಡುವರು. ಉದಾಹರಣೆ—ನೀರು ಎನ್ನುವುದಕ್ಕೆ 'ಜೀಯು' ಎನ್ನುವುದೂ, ದೀಪ ಎನ್ನುವುದಕ್ಕೆ 'ಜೇಜೀ' ಎಂದೂ ಮಲಮೂತ್ರ ವಿಸರ್ಜನೆಗೆ 'ಕಕ್ಕಾ' ಎಂದೂ ಮುಂತಾಗಿ ಅರ್ಥವಿಲ್ಲದ ಪದಗಳನ್ನು ಕಲ್ಪಿಸಿಕೊಟ್ಟು ಇದೇ ಮಾತುಗಳನ್ನು ಮಗು ಇನ್ನು ಸ್ವಲ್ಪ ಬೆಳೆದ ಮೇಲೆ ಆಡಿದರೆ "ಛೀ ಪುಟ್ಟ ಮಗು ಮಾತನಾಡಿದ ಹಾಗೆ ಆಡುತ್ತೀಯ" ಎಂದು ಹೀಯಾಳಿಸುವರು. ಇದರಿಂದ ಮಗು ನಿಷ್ಪ್ರಯೋಜಕವಾದ ಪದಗಳನ್ನು ಮೊದಲು ಕಲಿತು ಆಮೇಲೆ ಅವುಗಳನ್ನು ಮರೆತು ಮತ್ತೆ ಹೊಸಪದಗಳನ್ನು ಕಲಿಯುವ ಹಾಗೆ ಆಗುವುದು. ಆದುದರಿಂದ ಮಕ್ಕಳಿಗೆ ಮೊದಲಿನಿಂದಲೇ ವಯಸ್ಕರು ಯಾವ ಭಾಷೆಯನ್ನು ಆಡುವರೋ ಅದನ್ನೇ ಹೇಳಿಕೊಡುವುದು ಆವಶ್ಯಕ.

ಕೆಲವು ಮಕ್ಕಳ ಮಾತಿನಲ್ಲಿ ಕ್ರಮವಿರುವುದಿಲ್ಲ; ಉಚ್ಚಾರಣೆಯು ಸರಿಯಾಗಿರುವುದಿಲ್ಲ. ತೊದಲು ಮಾತಾಡುವರು ಈ ದೋಷಗಳಲ್ಲಿ ಕೆಲವಕ್ಕೆ ದೈಹಿಕ ಕಾರಣಗಳಿರಬಹುದು. ತುಟಿಯು ಸೀಳಿದ್ದರೆ ನಾಲಗೆ ತುದಿಯು ಹೆಚ್ಚಾಗಿ ಅಂಟಿಕೊಂಡಿದ್ದರೆ ಉಚ್ಚಾರಣೆ ಸರಿಯಾಗಿರುವುದಿಲ್ಲ. ಗಂಟಲಿನಲ್ಲಿ ಶಬ್ದೋತ್ಪತ್ತಿಯ ಅಂಗವು ಸರಿಯಾಗಿಲ್ಲದಿದ್ದರೆ ಶಬ್ದವು ಸರಿಯಾಗಿ ಬರುವುದಿಲ್ಲ. ಟಾನ್ಸಿಲ್ಸ್, ಅಡಿನಾಯಿಡ್ಸ್ ಮುಂತಾದ ಗಂಟಲಿನ ರೋಗಗಳಿದ್ದರೆ ಧ್ವನಿಯು ಸರಿಯಾಗಿ ಬರುವುದಿಲ್ಲ. ಕಿವಿಯು ಸರಿಯಾಗಿ ಕೇಳಿಸದೆಹೋದರೆ ಭಾಷೆಯ ಉಚ್ಚಾರಣೆಯೂ ಸರಿಯಾಗಿರುವುದಿಲ್ಲ.

ಅನೇಕ ದೋಷಗಳು ತಪ್ಪು ಅಭ್ಯಾಸಗಳಿಂದ ಉಂಟಾಗುವುವು ಮಕ್ಕಳಿಗೆ ಸರಿಯಾದ ಉಚ್ಚಾರಣೆಯನ್ನು ಹೇಳಿಕೊಡದೆ ಹೋದರೆ ಅದು ತಪ್ಪುಶಬ್ದಗಳನ್ನೇ ಮಾಡುವುದು. ಮಗು ತಪ್ಪು ಉಚ್ಚಾರಣೆ

ಯನ್ನು ಮಾಡಿದ ಕೂಡಲೇ ಆ ಪದವನ್ನು ಸರಿಯಾಗಿ ಉಪಯೋಗಿಸಿ ಮಗುವಿನ ಗಮನವನ್ನು ಶಬ್ದ ಮತ್ತು ಬಾಯಿಯ ಚಲನೆಗಳ ಕಡೆಗೆ ಸೆಳೆಯಬೇಕು. ತಪ್ಪುಮಾಡಿದ ಕ್ಷಣವೇ ಅದನ್ನು ತಿದ್ದಬೇಕು. ಆಗ ಬಿಟ್ಟರೆ ಮಗು ಬೆಳೆದಮೇಲೆ ಈ ತಪ್ಪುಗಳನ್ನು ತಿದ್ದುವುದು ಬಹಳ ಕಷ್ಟವಾಗುವುದು.

ಭಾಷೆಯಲ್ಲಿ ಮತ್ತೊಂದು ದೋಷವು ತೊದಲು. ತೊದಲು ಮಾತಾಡುವ ಮಗು ಎಲ್ಲಾ ಶಬ್ದಗಳನ್ನೂ ಉಚ್ಚರಿಸಬಲ್ಲುದು. ಆದರೆ ಕೆಲವು ಸಮಯಗಳಲ್ಲಿ ತೊದಲು ಬಂದು ಉಚ್ಚಾರಣೆಯು ತಡವರಿಸುವುದು. ಈ ದೋಷಕ್ಕೆ ಮುಖ್ಯ ಕಾರಣ ಮನೆಯಲ್ಲಿ ಇತರರ ಜೊತೆಯಲ್ಲಿ ಸರಿಯಾಗಿ ಹೊಂದಿಕೊಳ್ಳದೆ ಇರುವುದು. ತಾಯಿತಂದೆಗಳಾಗಲೀ ಇತರ ನಂಟರಾಗಲೀ, ಉಪಾಧ್ಯಾಯರಾಗಲೀ ಮಗುವಿನ ಮೇಲೆ ಅಭಿಮಾನವಿಲ್ಲದೆ ಅದು ಮಾಡಿದ್ದೆಲ್ಲಾ ತಪ್ಪೆಂದು ಅದರಮೇಲೆ ಕೋಪಗೊಂಡು ಹೀಯಾಳಿಸಿದರೆ ಈ ದೋಷವುಂಟಾಗುವುದು. ಹೀಗೆ ಮಾಡುವುದರಿಂದ ಮಗು ತಾನು ಮಾಡುವ ಕೆಲಸವು ಎಲ್ಲಿ ತಪ್ಪಾಗುವುದೋ ಎಂದು ಹೆದರಿ ಸರಾಗವಾಗಿ ಕೆಲಸವನ್ನು ಮುಂದುವರಿಸುವುದಿಲ್ಲ. ಬಾಯಿ ತೆರೆದಾಗ ಎಲ್ಲಿ ತಪ್ಪಾಗುವುದೋ ಎಂದು ಹೆದರಿ ತಡೆದು ಮಾತಾಡುವುದು. ಇದು ತೊದಲಿಗೆ ಕಾರಣವಾಗುವುದು. ತೊದಲು ಮಾತಾಡುವುದೆಂದು ಮಗುವನ್ನು ಮತ್ತೆ ಗದರಿಕೊಳ್ಳುವುದುಂಟು. ಅದರಿಂದ ಹೆದರಿಕೆಯು ಹೆಚ್ಚಿ ತೊದಲು ಮತ್ತಷ್ಟು ಹೆಚ್ಚುವುದು. ಇದೂ ಅಲ್ಲದೆ ಜೊತೆಯ ಮಕ್ಕಳು ಹಾಸ್ಯಮಾಡುವರು ಇದರಿಂದಮಗು ಯಾವಾಗಲೂ ತಾನೆಲ್ಲಿ ತಪ್ಪುಮಾಡುವೆನೋ ಎಂದು ಕೆಲಸದ ಮೇಲಿನ ಯೋಚನೆಯು ದೂರವಾಗಿ ತನ್ನ ಕೊರತೆಯ ಮೇಲಿನ ಯೋಚನೆಯೇ ಹೆಚ್ಚಾಗುವುದು.

ತೊದಲನ್ನು ದೂರಮಾಡಬೇಕಾದರೆ ಮನೆಯಲ್ಲಿರುವವರು ಮಗುವಿನಮೇಲೆ ಅಭಿಮಾನವನ್ನು ತೋರಿಸಬೇಕು. ಈ ತೊದಲು ತಾತ್ಕಾಲಿಕವೆಂದೂ ಸ್ವಲ್ಪ ಕಾಲದನಂತರ ಹೋಗುವುದೆಂದೂ ಭರವಸೆಯನ್ನು ಕೊಡಬೇಕು. ತೊದಲು ಆತ್ಮಕೇಂದ್ರೀಯತದಿಂದ ಉಂಟಾ

ಗುವುದು. ಆದುದರಿಂದ ಮಗು ಕೆಲಸಗಳಮೇಲೆ ಹೆಚ್ಚು ಗಮನವನ್ನು ಕೊಡುವಹಾಗೆ ಮಾಡಬೇಕು. ಆದಷ್ಟುಮಟ್ಟಿಗೆ ‘ ತಾನು ’ ‘ ತನ್ನ ತಪ್ಪು ’ ಎಂಬ ಯೋಚನೆಗಳು ಕಡಿಮೆಯಾಗಬೇಕು.

ಕೆಲವು ಸಮಯಗಳಲ್ಲಿ ಒಂದು ಕನ್ನಡಿಯೆದುರಿಗೆ ನಿಂತು ತೊದಲುವ ವ್ಯಕ್ತಿಯು ತೊದಲುವುದನ್ನು ಅಭ್ಯಾಸಮಾಡಿ ಪ್ರತಿಬಿಂಬದ ಮೇಲೆ ತನ್ನ ಗಮನವನ್ನೆಲ್ಲಾ ಇಟ್ಟರೆ ತೊದಲು ಕಡಿಮೆಯಾಗುವುದು. ಕ್ರಮೇಣ ಸಂಪೂರ್ಣವಾಗಿ ಇಲ್ಲದಂತಾಗುವುದು ಇದರಲ್ಲಿ ಮುಖ್ಯಾಂಶವೇನೆಂದರೆ ತೊದಲುವ ವ್ಯಕ್ತಿಯಲ್ಲಿ ಆತ್ಮಗೌರವವು ಹೆಚ್ಚಬೇಕು. ಇತರರಲ್ಲಿ ತನ್ನಮೇಲಿನ ಭರವಸೆಯೂ ಹೆಚ್ಚಬೇಕು. ತಾನು ಮಾಡಿದ್ದು ಎಲ್ಲಿ ತಪ್ಪಾಗುವುದೋ ಎಂಬ ಹೆದರಿಕೆಯು ಕ್ಷೀಣಿಸಬೇಕು. ಸ್ವವಿಷಯದ ಮೇಲೆ ಗಮನವನ್ನು ಬಿಟ್ಟು ಮಾಡುವ ಕೆಲಸದ ಮೇಲೆ ಹೆಚ್ಚು ಗಮನವನ್ನು ಕೊಡಬೇಕು. ಆಗ ತೊದಲುವುದು ತನ್ನಷ್ಟಕ್ಕೆ ತಾನೆ ದೂರವಾಗುವುದು.

ದೈಹಿಕ ಕಾಯಿಲೆಗಳಾಗಲೀ, ಮಾನಸಿಕ ರೋಗಗಳಾಗಲೀ ಚಿಕ್ಕಂದಿನಲ್ಲೇ ಅವುಗಳಿಗೆ ಚಿಕಿತ್ಸೆಮಾಡಿಸದೆ ಹೋದರೆ, ಮಗು ಬೆಳೆದು ದೊಡ್ಡದಾದಮೇಲೆ ಆ ಕಾಯಿಲೆಯಿಂದ ಬಿಡುಗಡೆ ಹೊಂದುವುದು ಬಹು ಕಷ್ಟವಾಗುವುದು. ಈ ತೊದಲುವ ದೋಷವೂ ಸಹ ಹೀಗೆಯೇ. ಮೇಲೆ ಹೇಳಿರುವ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ತೊದಲು ತಲೆದೋರಿದ ತಕ್ಷಣ ತಾಯಿತಂದೆಗಳೇ ಆಗಲಿ, ಪೋಷಕರೇ ಆಗಲಿ ತಮ್ಮ ವರ್ತನೆಯನ್ನು ಬದಲಾಯಿಸಿ ಮಗುವಿಗೆ ಸರಿಯಾದ ಅವಕಾಶಗಳನ್ನು ಭಾವಶಿಕ್ಷಣವನ್ನೂ ಕೊಟ್ಟರೆ ಮಗು ತೊದಲುವುದನ್ನು ಬಿಡಲು ಸಾಧ್ಯವಾಗುವುದು. ತೊದಲುವುದನ್ನು ಬಿಡದೆ ಹೋದರೆ ಹತ್ತಿರದ ಪಟ್ಟಣದಲ್ಲಿರುವ ವರ್ತನಾ ಚಿಕಿತ್ಸಾಲಯಕ್ಕೆ (ಚೈಲ್ಡ್ ಗೈಡೆನ್ಸ್ ಕ್ಲಿನಿಕ್) ಕರೆದುಕೊಂಡು ಹೋಗಿ ಶಾಸ್ತ್ರಜ್ಞರಿಗೆ ತೋರಿಸಿ ಚಿಕಿತ್ಸೆ ಮಾಡಿಸಬೇಕು. ಸಣ್ಣ ವಯಸ್ಸಿನಲ್ಲಿ ಈ ದೋಷಕ್ಕೆ ತಕ್ಕ ಗಮನವನ್ನು ಕೊಡದೆಹೋದರೆ ಮಗು ದೊಡ್ಡದಾದಮೇಲೆಯೂ ಈ ಊನವು ನಿಂತು ಅನೇಕ ಕಷ್ಟಗಳಿಗೆ ಕಾರಣವಾಗುವುದು.

# ಅಧ್ಯಾಯ ೧೦

## ಸಾಮಾಜಿಕ ವರ್ತನ

ಮಗುವಿನ ಸಾಮಾಜಿಕ ವರ್ತನವನ್ನು ಕುರಿತು ಇದುವರೆವಿಗೂ ನಾಲ್ಕಾರು ಕಡೆ ಕೆಲವು ವಿಷಯಗಳನ್ನು ಹೇಳಲಾಗಿದೆ. ಈ ಅಧ್ಯಾಯದಲ್ಲಿ ಮಗುವಿನಲ್ಲಿ ಸಾಮಾಜಿಕ ವರ್ತನೆಯು ಹೇಗೆ ಬೆಳೆಯುವುದು ಎಂಬುದನ್ನು ವಿವರಿಸಲಾಗಿದೆ.

### ದೊಡ್ಡವರ ಸಂಗಡ ಮಗುವಿನ ವರ್ತನೆ

ಹುಟ್ಟಿದ ಮಗುವಿನಲ್ಲಿ ಯಾವ ವಿಧವಾದ ಸಾಮಾಜಿಕ ವರ್ತನೆಯೂ ಇರುವುದಿಲ್ಲ. ಇತರ ಮಕ್ಕಳನ್ನಾಗಲೀ ದೊಡ್ಡವರನ್ನಾಗಲೀ ನೋಡಿದರೆ ಪ್ರೀತಿಯೂ ಇಲ್ಲ, ತಿರಸ್ಕಾರವೂ ಇಲ್ಲ. ಆದರೆ ದಿನಗಳು ಕಳೆಯುತ್ತ ಮಗು ಇತರರೊಡನೆ ವರ್ತಿಸುವುದರಲ್ಲಿ ಬದಲಾವಣೆಯಾಗುವುದು. ಹುಟ್ಟಿದ ಕ್ಷಣದಿಂದಲೂ ಮಗು ಇತರರ ಮಧ್ಯೆ ಜೀವಿಸಬೇಕಾಗುವುದಷ್ಟೆ. ತನ್ನ ಎಲ್ಲಾ ಕೆಲಸಗಳೂ ತಾಯಿ ದಾದಿಯರ ಮೂಲಕ ನಡೆಯಬೇಕಾಗಿರುವುದು. ಆದುದರಿಂದ ಕ್ರಮೇಣ ಇತರರನ್ನು ಕಂಡರೆ ವರ್ತನೆಯು ಬದಲಾವಣೆಯನ್ನು ಪಡೆಯುವುದು ತಾಯಿಯಾಗಲೀ ದಾದಿಯಾಗಲೀ ತನ್ನನ್ನೆತ್ತಿಕೊಂಡರೆ ಆಗ ಅಳುವನ್ನು ನಿಲ್ಲಿಸುವುದು, ತನಗೆ ಹಾಲು ಕುಡಿಸಿದರೆ ಅಥವ ತನ್ನನ್ನು ತಟ್ಟಿ ಮಲಗಿಸಿದರೆ ತೃಪ್ತಿಯನ್ನು ಸೂಚಿಸುವುದು. ಕ್ರಮವಾಗಿ ತಾಯಿಯನ್ನು ಕಂಡರೆ ಮುಗುಳ್ನಗೆ ನಗುವುದು. 'ಊ' 'ಆ' ಎಂದು ಶಬ್ದಮಾಡುವುದು, ಕೈಗಳನ್ನು ತಾಯಿಯ ಕಡೆಗೆ ಚಾಚುವುದು‡ ಈ ವರ್ತನೆಗಳಿಗೆಲ್ಲಾ ತನ್ನ ದೈಹಿಕ ಆವಶ್ಯಕತೆಗಳನ್ನು ಪೂರೈಸುವುದರಿಂದುಂಟಾದ ತೃಪ್ತಿಯೇ ಕಾರಣ. ಬೇಕಾದುದನ್ನು ಈಡೇರಿಸಿದರೆ ಮಗು ತೃಪ್ತಿಹೊಂದುವುದು. ಈ ತೃಪ್ತಿಯು ವ್ಯಕ್ತಿಯ ಚಲನವಲನ

---

‡ ಪಟ್ಟಿ ೪ ನೋಡಿ.

ಗಳಿಗೂ ಕ್ರಮೇಣ ವ್ಯಕ್ತಿಗೂ ಆರೋಪಿತವಾಗಿ (ಕಂಡಿಷನ್ಡ್) ವ್ಯಾಪಿಸುವುದು.* ತಾನು ಅಳುತ್ತಿದ್ದಾಗ ತಾಯಿಯು ತನ್ನನ್ನು ಎತ್ತಿಕೊಂಡರೆ ಮಗು ಅಳುವುದನ್ನು ನಿಲ್ಲಿಸುವುದಷ್ಟೆ. ಈ ಪ್ರತಿಕ್ರಿಯೆಯು ತಾಯಿಯನ್ನು ಕಂಡ ಸಂತೋಷದಿಂದ ಉಂಟಾದುದೆಂದು ಹೇಳಲು ಸಾಧ್ಯವಿಲ್ಲ. ಏಕೆಂದರೆ ತನ್ನ ಆವರಣದಲ್ಲಿ ಯಾವ ವಿಧವಾದ ಬದಲಾವಣೆಯಾದರೂ ಮಗು ಅಳುವನ್ನು ನಿಲ್ಲಿಸುವುದು ಆದರೆ ಮಗುವಿಗೆ ಒಂದೂವರೆ ಎರಡು ತಿಂಗಳು ವಯಸ್ಸಾಗುವ ಸಮಯಕ್ಕೆ ಸರಿಯಾಗಿ ತನ್ನ ತಾಯಿಯು ತನ್ನನ್ನೆತ್ತಿ ಮುದ್ದಾಡಿದರೆ, ತನ್ನ ಸಮೀಪಕ್ಕೆ ಬಂದರೆ ಅಥವ ತನ್ನನ್ನು ಮಾತನಾಡಿಸಿದರೆ ನಸುನಗುವುದು. ಮೂರು ತಿಂಗಳು ವಯಸ್ಸಾದರೆ ತನ್ನ ತಾಯಿಯನ್ನು ಗುರ್ತಿಸಿ ಅಳುವನ್ನು ನಿಲ್ಲಿಸುವುದು ತಾಯಿಯು ಕೊಠಡಿಯಿಂದ ಹೊರಕ್ಕೆ ಹೊರಟರೆ ಅಳಲಾರಂಭಿಸುವುದು. ಹೀಗೆ ಮೊದಲು ತಾಯಿಯನ್ನು ಕಂಡರೆ ಯಾವ ವಿಧವಾದ ಪ್ರತಿಕ್ರಿಯೆಯನ್ನೂ ಮಾಡಲಾರದಿದ್ದ ಸಣ್ಣ ಮಗು ಎರಡು ಮೂರು ತಿಂಗಳಲ್ಲಿ ತಾಯಿಯನ್ನು ಕಂಡೊಡನೆ ತನ್ನ ಸಂತೋಷವನ್ನು ವ್ಯಕ್ತಪಡಿಸಲಾರಂಭಿಸುವುದು. ತಾಯಿ ತನ್ನನ್ನು ಎತ್ತಿಕೊಂಡು ಮುದ್ದಾಡಿ ಹಸಿವಾದಾಗ ಹಾಲುಕೊಟ್ಟು, ನಿದ್ದೆ ಬಂದಾಗ ಒಳ್ಳೆಯ ಹಾಸಿಗೆಯಲ್ಲಿ ಮಲಗಿಸಿ, ನೋವುಂಟಾದಾಗ ಅದನ್ನು ನಿವಾರಿಸಿ ತೃಪ್ತಿಯನ್ನುಂಟುಮಾಡುವುದರಿಂದ ಈ ಅಭಿಮಾನವು ಹುಟ್ಟುವುದು. ತಾಯಿಯನ್ನು ಪ್ರೀತಿಸುವುದು ಮಗುವಿನ ಹುಟ್ಟುಗುಣವಲ್ಲ. ಯಾವ ವ್ಯಕ್ತಿಯು ತನ್ನ ಆವಶ್ಯಕತೆಗಳನ್ನು ನೆರವೇರಿಸುವುದೋ ಆ ವ್ಯಕ್ತಿಯನ್ನು ಮಗು ಪ್ರೀತಿಸತೊಡಗುವುದು, ತನಗೆ ಜನ್ಮವಿತ್ತ ತಾಯಿಯು ತನ್ನನ್ನು ನೋಡಿಕೊಳ್ಳದಿದ್ದರೆ ಆಕೆಯ ಕಡೆ "ತಾಯಿ" ಎಂಬ ಅಭಿಮಾನವವೇ ಇರುವುದಿಲ್ಲ. ಮಗುವಿಗೆ ಈ ಅಭಿಮಾನವೆಲ್ಲವೂ ತನ್ನನ್ನು ಯಾರು ನೋಡಿಕೊಳ್ಳುವರೋ ಅವರ ಮೇಲೆಯೇ ಇರುವುದು.

---

* ೭ನೆಯ ಅಧ್ಯಾಯವನ್ನು ನೋಡಿ.

ಮೊದಲ ಎರಡು ತಿಂಗಳಲ್ಲಿ ತನ್ನ ಹತ್ತಿರ ಯಾರಾದರೂ ಬಂದರೆ ಮಗು ಮುಗುಳ್ನಗೆ ನಗುವುದು ಎಂಬುದನ್ನು ನೋಡಿರುವೆವು. ಆದರೆ ಈ ನಗು ಆ ವ್ಯಕ್ತಿಯ ಮುಖಭಾವವನ್ನಾಗಲೀ ಧ್ವನಿಯನ್ನಾಗಲೀ ಅವಲಂಬಿಸಿರುವುದಿಲ್ಲ. ಈ ವಯಸ್ಸಿನಲ್ಲಿ ಮಗು ಮುಖಭಾವಗಳನ್ನು ಧ್ವನಿಗಳನ್ನು ಗುರುತಿಸಲಾರದು. ಎರಡು ತಿಂಗಳ ಮಗುವಿನ ಹತ್ತಿರ ಹೋಗಿ ನಾವು ಸಂತೋಷದ ಮುಖಭಾವವನ್ನು ತೋರಿಸಿದರೆ ಮಗು ನಸುನಗುವುದು. ಮತ್ತೊಮ್ಮೆ ಕೋಪದ ಭಾವವನ್ನು ವ್ಯಕ್ತಪಡಿಸಿದರೆ ಆಗಲೂ ನಸುನಗುವುದು. ನಾಲ್ಕು ತಿಂಗಳ ವಯಸ್ಸಾದಮೇಲೆ ಮುಖಭಾವಗಳನ್ನು ಗುರುತಿಸಲಾರಂಭಿಸುವುದು. ಮುಖದಲ್ಲಿ ದಯೆಯ ಸೂಚನೆಯಿದ್ದರೆ ಆ ವ್ಯಕ್ತಿಯು ತನ್ನ ಅವಶ್ಯಕತೆಗಳನ್ನು ಈಡೇರಿಸಿಕೊಡುವನೆಂದೂ ಕ್ರೌರ್ಯದ ಅಥವ ನಿರ್ದಯತೆಯ ಸೂಚನೆಯಿದ್ದರೆ ತನಗೆ ಬೇಕಾದುದನ್ನು ಒದಗಿಸಿಕೊಡದಿರಬಹುದೆಂದೂ ಮಗು ಅರಿತುಕೊಳ್ಳುವುದು. ಮಗು ಬೆಳೆಯುತ್ತ ಈ ಅರಿವೂ ಬೆಳೆಯುವುದು. ಇದರಿಂದಲೇ ದೊಡ್ಡವರಿಗಿಂತಲೂ ಮಕ್ಕಳು ಇತರರ ಮನೋಭಾವವನ್ನು ತಪ್ಪಿಲ್ಲದೆ ಗುರುತಿಸುವರೆಂಬ ನಂಬಿಕೆಯು ಜನರಲ್ಲಿರುವುದು.

ಬ್ಯೂಲರ್ ಎಂಬಾಕೆಯು ಮಕ್ಕಳು ಬೆಳೆಯುತ್ತ ಬೆಳೆಯುತ್ತ ದೊಡ್ಡವರನ್ನು ಕಂಡರೆ ಯಾವ ಪ್ರತಿಕ್ರಿಯೆಗಳನ್ನು ತೋರಿಸುವರೆಂಬುದನ್ನು ಈ ಪಟ್ಟಿಯಲ್ಲಿ ಸಂಗ್ರಹಿಸಿದ್ದಾರೆ.

## ಪಟ್ಟಿ ೧೦

## ದೊಡ್ಡವರೊಡನೆ ಮಗುವಿನ ವರ್ತನೆ

| | ವರ್ತನಾ ವಿಶೇಷ | ವಯಸ್ಸು (ತಿಂಗಳಿನಲ್ಲಿ) |
|---|---|---|
| ೧. | ತನ್ನನ್ನು ನೋಡಿದರೆ ನಸುನಗುವುದು | ೧-೨ |
| ೨. | ಮುಟ್ಟಿದರೆ ಸುಮ್ಮನಾಗುವುದು | ೧-೨ |
| ೩. | ನೋಡಿಕೊಳ್ಳುತ್ತಿದ್ದ ವ್ಯಕ್ತಿಯು ಹೊರಗೆ ಹೋದರೆ ಅಳುವುದು | ೨-೩ |

| ವರ್ತನಾ ವಿಶೇಷ | ವಯಸ್ಸು (ತಿಂಗಳಿನಲ್ಲಿ) |
|---|---|
| ೪. ದೊಡ್ಡವರನ್ನು ಕಂಡರೆ 'ಊ' 'ಆ' ಎಂದು ಶಬ್ದಮಾಡುವುದು | ೩-೪ |
| ೫. ಇತರರನ್ನು ಕಂಡರೆ ಅಶಾಂತತೆ ತೋರಿಸುವುದು | ೪-೫ |
| ೬. ಕೂಗಿ ಇತರರ ಗಮನವನ್ನು ತನ್ನ ಕಡೆಗೆ ಸೆಳೆಯುವುದು | ೭-೮ |
| ೭. ಇತರರನ್ನು ನೋಡಿ ಕೈಚಾಚುವುದು | ೭-೮ |
| ೮. ಜೊತೆಯಲ್ಲಿ ಮಾತನಾಡುತ್ತಿರುವ ವ್ಯಕ್ತಿಯು ಮಾತು ನಿಲ್ಲಿಸಿದರೆ ಅಳುವುದು | ೭-೮ |
| ೯. ಇತರರಿಗೆ 'ಆಟಿಕೆ' ಯನ್ನು ಕೊಡುವುದು | ೯-೧೦ |
| ೧೦. ಆಡುವುದರಲ್ಲಿ ದೊಡ್ಡವರನ್ನು ಅನುಕರಿಸುವುದು | ೯-೧೦ |
| ೧೧. ಇತರರ ಜೊತೆಯಲ್ಲಿ ಕೂಡಿ ಆಡುವುದು | ೧೦-೧೧ |

## ಸಣ್ಣ ಮಕ್ಕಳ ಜೊತೆಯಲ್ಲಿ ಮಗುವಿನ ವರ್ತನೆ

ಬ್ಯೂಲರ್ ಮಕ್ಕಳು ಇತರ ಮಕ್ಕಳ ಸಂಗಡ ಹೇಗೆ ವರ್ತಿಸುವರೆಂಬುದನ್ನು ಸಹ ಬಹಳ ಜಾಗರೂಕತೆಯಿಂದ ಪರೀಕ್ಷಿಸಿರುವರು. ೩-೪ ತಿಂಗಳ ವಯಸ್ಸಿನ ಮಕ್ಕಳಿಬ್ಬರನ್ನು ಒಂದುಕಡೆ ಮಲಗಿಸಿದರೆ ಒಂದು ಮತ್ತೊಂದರ ಇರುವಿಕೆಯನ್ನೆ ಗಮನಿಸದೆ ತನ್ನಷ್ಟಕ್ಕೆ ತಾನು ಇರುವುದು. ಆರು ತಿಂಗಳ ಮಕ್ಕಳಿಬ್ಬರನ್ನು ಜೊತೆಗೂಡಿಸಿದರೆ ಒಂದು ಮತ್ತೊಂದನ್ನು ನೋಡುವುದು. ಅದರ ಗಮನವನ್ನು ತನ್ನ ಕಡೆಗೆ ಎಳೆಯಲು ಕೂಗುವುದು. ಒಂದು ಮಗು ಇನ್ನೊಂದು ಮಗುವನ್ನು ಮುಟ್ಟುವುದು. ಬ್ಯೂಲರ್ ತಮ್ಮ ಅವೇಕ್ಷಣಗಳನ್ನು ಈರೀತಿ ಸಂಗ್ರಹಿಸಿರುವರು.

## ಪಟ್ಟಿ ೧೧

## ಸಣ್ಣ ಮಕ್ಕಳೊಡನೆ ಮಗುವಿನ ವರ್ತನೆ

| ವರ್ತನಾ ವಿಶೇಷ | ವಯಸ್ಸು (ತಿಂಗಳಿನಲ್ಲಿ) |
|---|---|
| ೧. ಗಮನಿಸುವುದು | ೪-೫ |
| ೨. ನೋಡಿ ನಸುನಗುವುದು | ೪-೫ |
| ೩. ಮತ್ತೊಂದು ಮಗುವಿಗೆ ಗಮನಕೊಟ್ಟರೆ ಅಳುವುದು | ೮-೯ |
| ೪. ಬೇರೆ ಮಗುವಿಗೆ ಆಟಿಕೆಯನ್ನು ಕೊಡುವುದು | ೮-೯ |
| ೫. ಇನ್ನೊಂದು ಮಗುವಿನ ಚಲನಗಳನ್ನು ಅನುಕರಿಸುವುದು | ೯-೧೦ |
| ೬. ಆಟಿಕೆಯನ್ನು ತೆಗೆದುಕೊಂಡರೆ ತಡೆಯುವುದು | ೯-೧೦ |
| ೭. ಕೂಡಿ ಆಡಿಕೊಳ್ಳುವುದು | ೧೦-೧೧ |
| ೮. ಆಟಿಕೆಯನ್ನು ಬಿಟ್ಟು ಮತ್ತೊಂದು ಮಗುವಿನ ಕಡೆಗೆ ತಿರುಗುವುದು. | ೧೧-೧೨ |

ಮೇಲಿನ ಎರಡು ಪಟ್ಟಿಗಳಿಂದಲೂ ಮಗುವಿನ ಸಾಮಾಜಿಕ ವರ್ತನೆಯು ಅದರ ದೇಹ, ಬುದ್ಧಿ, ಮತ್ತು ಭಾವನೆಗಳ ಬೆಳವಳಿಗೆಯನ್ನು ಹೊಂದಿಕೊಂಡು ಬೆಳೆಯುವುದೆಂದು ಸ್ಪಷ್ಟವಾಗುವುದು

### ಸಾಮಾಜಿಕ ವರ್ತನೆಯ ವರ್ಗಗಳು

ಆರರಿಂದ ಹದಿನೆಂಟು ತಿಂಗಳವರಗಿನ ಅನೇಕ ಮಕ್ಕಳ ಸಾಮಾಜಿಕ ವರ್ತನೆಯನ್ನು ಪರಿಶೀಲಿಸಿ ಬ್ಯೂಲರ್ ಇವರಲ್ಲಿ ಮೂರು ವರ್ಗಗಳ ಮಕ್ಕಳಿರುವರೆಂದು ಹೇಳಿರುವರು. ಮೊದಲನೆಯ ವರ್ಗದ ಮಕ್ಕಳು ಬೇರೆ ಮಕ್ಕಳನ್ನು ನೋಡಿದರೆ ಅವರ ಜೊತೆಯಲ್ಲಿ ಆಟವಾಡದೆ, ಅದರ ಕಡೆಗೆ ತಮ್ಮ ಗಮನವನ್ನು ಸಹಾ ಕೊಡದೆ ತಮ್ಮಷ್ಟಕ್ಕೆ ತಾವೇ ಆಡಿಕೊಳ್ಳುತ್ತಿರುವರು. ಇಂತಹ ಮಕ್ಕಳನ್ನು 'ಸಹವಾಸ ಅಪ್ರಿಯ'ರೆಂದು ಕರೆಯಬಹುದು. ಇನ್ನು ಕೆಲವರು ಬೇರೆ ಮಕ್ಕಳನ್ನು ನೋಡಿದಾಗ ಬಹಳ ಪರತಂತ್ರರು. ಅವರನ್ನು ನೋಡಿದ ತಕ್ಷಣ ಉತ್ತೇಜಿತರಾಗಿ ಅವರ ಗಮನವನ್ನು ತಮ್ಮ ಕಡೆಗೆ

ಸೆಳೆಯಲು ನಿರಂತರವಾಗಿ ಪ್ರಯತ್ನಿಸುವರು. ತಮ್ಮ ಹತ್ತಿರಿರುವ ಆಟಿಕೆಗಳನೆಲ್ಲಾ ಅವರಿಗೆ ಕೊಟ್ಟು ಸ್ನೇಹವನ್ನು ಬೆಳೆಸಲು ಕಾತುರರಾಗಿರುವರು. ಈ ಪರತಂತ್ರ ಮಕ್ಕಳಲ್ಲಿ ಮತ್ತೊಂದು ವಿಧವಾದ ಗುಂಪಿರುವುದು. ಈ ಮಕ್ಕಳು ಇತರರನ್ನು ಅನುಸರಿಸಿ ಅವರು ಹೇಳಿದಹಾಗೆ ಮಾಡಿ ದೈನ್ಯಭಾವವನ್ನೂ ಹೆದರಿಕೆಯನ್ನು ವ್ಯಕ್ತಪಡಿಸುವರು. ಈ ಎರಡು ಗುಂಪಿನ ಮಕ್ಕಳು ಪರತಂತ್ರರು ಮತ್ತು ಬೇರೆ ಮಕ್ಕಳನ್ನು ಅವಲಂಬಿಸಿಕೊಂಡೇ ಇರುವರು.

ಮಕ್ಕಳಲ್ಲಿ ಸಹವಾಸ ಅಪ್ರಿಯರೂ, ಪರತಂತ್ರರೂ ಅಲ್ಲದೆ ಇನೊಂದು ವರ್ಗವಿರುವುದು. ಈ ಮಕ್ಕಳನ್ನು ಸ್ವತಂತ್ರರೆಂದು ಕರೆಯಬಹುದು. ಬೇರೆ ಮಕ್ಕಳನ್ನು ಗಮನವಿಟ್ಟು ನೋಡಿದರು ಅವರೊಡನೆ ಆಡಿಕೊಳ್ಳುವರು. ಆದರೆ ಅವರಮೇಲೆಯೇ ಆಧಾರವಾಗಿರುವುದಿಲ್ಲ. ಇತರ ಮಕ್ಕಳನ್ನು ನೋಡಿದರೆ ದೈನ್ಯಭಾವವೂ ಇಲ್ಲ; ಉತ್ತೇಜಿತರಾಗಿರುವುದೂ ಇಲ್ಲ; ಹೆದರಿಕೆಯೂ ಇಲ್ಲ. ಬೆರೆಯವರಿದ್ದರೆ ಅವರೊಡನೆ ಆಡಿಕೊಳ್ಳುವರು. ಅವರಲ್ಲದಿದ್ದರೆ ಹುಡಿಕಿಕೊಂಡು ಹೋಗುವುದಿಲ್ಲ. ಪರತಂತ್ರರಾಗಿರುವ ಮಕ್ಕಳು ತಮ್ಮ ಜೊತೆಯಲ್ಲಿ ಆಡುತ್ತಿದ್ದವರು ಹೊರಟು ಹೋದರೆ ಅತ್ತು ತಮ್ಮ ವ್ಯಸನವನ್ನು ಹೊರಪಡಿಸುವರು. ಸ್ವತಂತ್ರರಾಗಿರುವ ಮಕ್ಕಳು ಅವರಿರುವವರೆವಿಗೂ ಅವರೊಡನೆ ಆಡಿ, ಅವರು ಹೊರಟುಹೋದಮೇಲೆ ತಾವೇ ಆಡಿಕೊಳ್ಳುವರು.

ಈ ಮೂರು ವರ್ಗದ ವರ್ತನೆಯೂ ಸ್ವಾಭಾವಿಕವೆಂದು ಹೇಳಬೇಕು. ಈ ವರ್ತನೆಯು ಅತಿ ಚಿಕ್ಕವಯಸ್ಸಿನಿಂದಲೂ ಅಂದರೆ ೬ ತಿಂಗಳ ವಯಸ್ಸಿನಿಂದಲೂ ಕಾಣಬರುವುದು ಮತ್ತು ಯಾವ ಮನೆತನದ ಮಕ್ಕಳೇ ಆಗಲಿ, ಅಂದರೆ ಮನೆಯಲ್ಲಿ ಒಂದೇ ಮಗುವಾದರೂ, ಇಲ್ಲವೆ ೪-೬ ಮಕ್ಕಳ ಸಂಗಡ ಹುಟ್ಟಿದ ಮಗುವಾದರೂ ಬೇರೆ ಬೇರೆ ಸಾಮಾಜಿಕ ವರ್ತನಗಳನ್ನು ತೋರಿಸುವರು. ಈ ವರ್ತನವು ಆವರಣದ ಪ್ರಭಾವದಿಂದಲಾಗಲೀ, ಕಲಿಯುವುದರ ಮೂಲಕವಾಗಲೀ ಆಯಿತೆಂದು ಹೇಳಲಾಗದು. ಆದರೆ ಎಲ್ಲಾ ಮಕ್ಕಳನ್ನೂ

ಈ ವಿಧವಾಗಿ ಮೂರು ವರ್ಗಗಳಲ್ಲಿ ಹಂಚುವುದಕ್ಕಾಗುವುದಿಲ್ಲ. ಒಂದು ಮಗು ಪ್ರತ್ಯೇಕವಾಗಿ ಒಂದು ವರ್ಗಕ್ಕೇ ಸೇರಿದುದು ಎಂದು ಹೇಳಲಾಗುವುದಿಲ್ಲ. ಮಗುವಿನಲ್ಲಿ ಇತರ ವರ್ಗಗಳ ವರ್ತನಗಳಿಗಿಂತ ಒಂದು ವರ್ಗದ ವರ್ತನೆಯು ಹೆಚ್ಚಾಗಿರುವುದೆಂದು ಮಾತ್ರ ಹೇಳಬಹುದು. ಮತ್ತೊಂದು ಮುಖ್ಯಾಂಶವನ್ನು ಗಮನದಲ್ಲಿಟ್ಟಿರಬೇಕು. ಸಾಮಾಜಿಕ ವರ್ತನದ ವೈಚಿತ್ರ್ಯವು ಸಣ್ಣ ವಯಸ್ಸಿನಿಂದಲೂ ಕಾಣಿಸಿಕೊಂಡು ಬಂದರೂ ಮಕ್ಕಳು ಬೆಳೆಯುತ್ತ ಬೆಳೆಯುತ್ತ ಅವರ ಜೀವಮಾನದಲ್ಲಿನ ಅನುಭವಗಳು ಅದನ್ನು ಬದಲಾಯಿಸುವುವು. ಸಹವಾಸ ಅಪ್ರಿಯಸಾದರೂ ಇತರರೊಂದಿಗೆ ಹೊಂದಿಕೊಂಡು ಬಾಳುವುದನ್ನು ಕಲಿಯುವನು. ಪರತಂತ್ರನಾಗಿದ್ದರೂ ಇತರರ ಮೇಲೆ ಅಧೀನನಾಗಿರುವುದನ್ನು ಕಡಿಮೆಮಾಡಿಕೊಂಡು ಬಾಳಲು ಯತ್ನಿಸುವನು.

## ಸಾಮಾಜಿಕ ವರ್ತನದ ಬೆಳವಣಿಗೆಯ ಮಾಪನ

ಬ್ರಿಡ್ಜಸ್ ಎಂಬ ವೈಜ್ಞಾನಿಕರು ಎರಡು ವರ್ಷದಿಂದ ಐದು ವರ್ಷದೊಳಗಿನ ಮಕ್ಕಳ ಸಾಮಾಜಿಕ ವರ್ತನದ ಬೆಳವಣಿಗೆಯನ್ನು ಪರಿಶೀಲಿಸಿರುವರು. ಒಂದು ಮಗು ಬೇರೆ ಮಕ್ಕಳ ಜೊತೆಯಲ್ಲಿ ಹೇಗೆ ವರ್ತಿಸುವುದೆಂಬುದನ್ನೂ ಇತರ ವಯಸ್ಕರ ಜೊತೆಯಲ್ಲಿ ಹೇಗೆ ವರ್ತಿಸುವುದೆಂಬುದನ್ನೂ ಪರೀಕ್ಷಿಸಿದರು. ಈ ಕೆಲಸವನ್ನು ಮಾಡಲು ಸಾಮಾಜಿಕ ವರ್ತನೆಯ ಅನೇಕ ಅಂಶಗಳನ್ನು ಒಳಗೊಂಡ ಒಂದು ಪಟ್ಟಿಯನ್ನು ತಯಾರಿಸಿದರು. ಈ ಪಟ್ಟಿಯಲ್ಲಿ ೮೫ ಅಂಶಗಳನ್ನು ಸೇರಿಸಿರುವರು. ಉದಾಹರಣೆಗೆ ಕೆಳಗೆ ಹತ್ತು ಅಂಶಗಳನ್ನು ತೋರಿಸಲಾಗಿದೆ.

(೧) ಇತರ ಮಕ್ಕಳ ಜೊತೆಯಲ್ಲಿ ಹೆಚ್ಚಾಗಿ ಮಾತನಾಡುವುದು.

(೨) ಮಕ್ಕಳ ಗುಂಪನ್ನು ಸೇರಿ ಆಡುವುದು.

(೩) ಬೇರೆ ಮಗುವಿನ ಒಪ್ಪಿಗೆಯನ್ನು ನಿರೀಕ್ಷಿಸುವುದು.

(೪) ಇನ್ನೊಂದು ಮಗುವಿನ ಸಹಾಯವನ್ನು ಕೇಳುವುದು.

(೫) ತನ್ನ ಆಟಿಕೆಯನ್ನು ಇನ್ನೊಂದು ಮಗುವಿಗೆ ಆಡಲು ಕೊಡುವುದು.

(೬) ಇತರ ಮಕ್ಕಳಿಗೆ ಸಹಾಯಮಾಡಲೆತ್ನಿಸುವುದು.

(೭) ಸಾಧಾರಣವಾಗಿ ಆಟದ ಗುಂಪನ್ನು ಸೇರದೆ ಇರುವುದು.

(೮) ಇತರ ಮಕ್ಕಳ ಆಟಿಕೆಯನ್ನು ಬೇಕು ಎಂದು ಒತ್ತಾಯ ಪಡಿಸುವುದು.

(೯) ಇತರ ಮಕ್ಕಳ ಕೆಲಸಗಳಿಗೆ ಅಡ್ಡಿಯನ್ನುಂಟುಮಾಡುವುದು.

(೧೦) ಇತರ ಮಕ್ಕಳನ್ನು ಆಗಾಗ್ಗೆ ಎಳೆಯುವುದು-ತಳ್ಳುವುದು.

ಹೀಗೆ ಒಂದು ಮಗು ಇತರ ಮಕ್ಕಳ ಜೊತೆಯಲ್ಲಿಯೋ, ಇತರ ವಯಸ್ಕರ ಜೊತೆಯಲ್ಲಿಯೋ ವರ್ತಿಸುತ್ತಿರುವಾಗ ಅದರ ಸಾಮಾಜಿಕ ವರ್ತನೆಯು ಯಾವ ರೀತಿಯಲ್ಲಿ ವ್ಯಕ್ತಪಡುವುದೆಂದು ಗುರುತು ಹಚ್ಚಬಹುದು. ಈ ಪಟ್ಟಿಯ ಮೂಲಕ ಸಾಮಾಜಿಕ ವರ್ತನದ ಬೆಳವಣಿಗೆಯು ಯಾವ ಕ್ರಮದಿಂದ ಆಗುವುದೆಂದು ಪರೀಕ್ಷಿಸಬಹುದು. ಅಲ್ಲದೆ ಒಂದು ಮಗುವಿಗೂ ಇನ್ನೊಂದು ಮಗುವಿಗೂ, ಒಂದು ಗುಂಪಿನಲ್ಲಿ ಬೆಳೆದ ಮಗುವಿಗೂ ಇನ್ನೊಂದು ಗುಂಪಿನಲ್ಲಿ ಬೆಳೆದ ಮಗುವಿಗೂ ಇರುವ ತಾರತಮ್ಯಗಳನ್ನು ಕಂಡುಹಿಡಿಯಬಹುದು. ಮತ್ತು ಅಕ್ರಮ ವರ್ತನೆಯುಳ್ಳ ಮಕ್ಕಳನ್ನು ಈ ಪಟ್ಟಿಯ ಸಹಾಯದಿಂದ ಪರೀಕ್ಷಿಸಿ ತಕ್ಕ ಭಾವಶಿಕ್ಷಣವನ್ನು ಕೊಟ್ಟು ಸರಿಪಡಿಸಬಹುದು.

ಮಗು ಬೆಳೆಯುತ್ತ ಬೆಳೆಯುತ್ತ ಇತರರೊಡನೆ ಸಹಕರಿಸಿ ತನ್ನ ಮತ್ತು ಗುಂಪಿನ ಕೆಲಸಗಳನ್ನು ಸಫಲತೆಯಿಂದ ಸಾಧಿಸಿಕೊಳ್ಳುವುದು ಎಂದು ಬ್ರಿಡ್ಜಸ್ ಪಟ್ಟಿಯಿಂದ ಗೊತ್ತಾಗುವುದು. ಮಗು ಬೇರೆ ಮಕ್ಕಳ ಜೊತೆಯಲ್ಲಿ ಕೂಡಿ ಆಡುವುದೇ ಅಲ್ಲದೆ ಬೇರೆ ಮಕ್ಕಳ ಸಹಾಯವನ್ನು ಪಡೆಯಲು ಯತ್ನಿಸುವುದು; ತನ್ನ ಸರದಿಗಾಗಿ ಕಾಯುವುದು. ತನ್ನ ಸ್ಥಾನವನ್ನೂ ಸಾಮಾನುಗಳನ್ನೂ ಭದ್ರಪಡಿಸಿಕೊಳ್ಳುವುದು. ಬೇರೆ ಮಗು ದುಸ್ಥಿತಿಯಲ್ಲಿದ್ದರೆ ಸಮಾಧಾನಪಡಿಸುವುದು. ಬೇರೆ ಮಕ್ಕಳು ತನ್ನ ಜೊತೆಯಲ್ಲಿ ಸ್ನೇಹಭಾವವನ್ನು ತೋರಿ

ಸಿದರೆ ಅವರನ್ನು ನಿರಾಕರಿಸದೆ ಅವರ ಸಂಗವನ್ನು ಸೇರುವುದು. ಇತರರ ಕೆಲಸವನ್ನು ಕೆಡಿಸುವುದಿಲ್ಲ. ಮೊದಲಿನ ಹಾಗೆ ತುಂಟತನಕ್ಕಾಗಿ ಇತರ ಮಕ್ಕಳನ್ನು ಹೊಡೆಯುವುದು ಜಿಗುಟುವುದು ಮುಂತಾದ ಚೇಷ್ಟೆಗಳನ್ನು ಮಾಡುವುದಿಲ್ಲ. ಬೆಳೆಯುತ್ತ ಬೆಳೆಯುತ್ತ ತನ್ನ ಆಟಿಕೆಗಳನ್ನೂ ತಿಂಡಿಯನ್ನೂ ಇತರ ಮಕ್ಕಳೊಂದಿಗೆ ಹಂಚಿಕೊಳ್ಳುವುದು. ತಮಗಿಂತ ಸಣ್ಣಮಕ್ಕಳ ಹಕ್ಕುಬಾಧ್ಯತೆಗಳನ್ನು ಕಾಯುವುದು. ಗುಂಪಿನಲ್ಲಿ ಸೇರಿ ಹೊಸ ಆಟಪಾಟಗಳನ್ನು ಪ್ರಾರಂಭಿಸುವುದು. ಗುಂಪಿಗೆ ಹೊಸಬರನ್ನು ಸ್ವಾಗತಿಸುವುದು. ಈರೀತಿ ಮಗುವಿನ ಸಾಮಾಜಿಕ ವರ್ತನವು ಮುಂದುವರಿಯುವುದು. ಕೆಲವು ಸಮಯಗಳಲ್ಲಿ ಸಮಾಜವಿರುದ್ಧ ವರ್ತನೆಯು ಆಗಾಗ ತಲೆದೋರುವುದು. ಚೇಷ್ಟೆಗೋಸ್ಕರ ಇತರ ಮಕ್ಕಳನ್ನು ಪೀಡಿಸುವುದು, ಹೊಡೆಯುವುದು, ಜಿಗುಟುವುದು. ಆದರೆ ಈ ವರ್ತನೆಗಳು ಇತರರಲ್ಲಿ ಅಸಮಾಧಾನವನ್ನುಂಟುಮಾಡುವುದರಿಂದ ಕ್ರಮೇಣ ಇವುಗಳನ್ನು ಬಿಟ್ಟು ಸಮಾಜಹಿತವಾದ ವರ್ತನೆಗಳನ್ನು ಕಲಿಯುವುದು. ಮುಖ್ಯವಾಗಿ ಗಮನದಲ್ಲಿಡಬೇಕಾದ ಅಂಶವೇನೆಂದರೆ, ಕೈಲಾದಮಟ್ಟಿಗೆ ಮಕ್ಕಳ ಸದ್ವರ್ತನೆಯು ಈ ಚಿಕ್ಕ ವಯಸ್ಸಿನಲ್ಲಿಯೇ ಬೇರೂರುವ ಹಾಗೆ ನೋಡಿಕೊಳ್ಳಬೇಕು. ಸಮಾಜವಿರುದ್ಧ ವರ್ತನೆಯನ್ನು ವ್ಯಕ್ತಪಡಿಸಿದರೆ "ಪಾಪ ಪುಟ್ಟಮಗು ಚೇಷ್ಟೆಗಾಗಿ ಹೀಗೆ ಮಾಡುವುದು; ಬೆಳೆಯುತ್ತ ಬೆಳೆಯುತ್ತ ಸರಿಹೋಗುವುದು" ಎಂದು ಉದಾಸೀನ ಮಾಡಬಾರದು. ಶಾಲೆಗೆ ಹೋಗುವುದಕ್ಕೆ ಮುಂಚೆಯೇ ಮಗು ಇತರರೊಡನೆ ಕೂಡಿಕೊಂಡು ಬಾಳುವುದನ್ನು ಕಲಿತಿರಬೇಕು.

### ಸಂಘನಿರ್ಮಾಣ ಸಂದರ್ಭಗಳು

ಮಗು ಮೊದಮೊದಲು ತನ್ನ ಪೋಷಕರ ಜೊತೆಯಲ್ಲಿ ಸಾಂಘಿಕ ಸಂಬಂಧಗಳನ್ನು ಬೆಳೆಸುವುದು. ತನಗೆ ಹಸಿವು ನೋವುಗಳುಂಟಾದಾಗ ಅತ್ತು ಇತರರ ಗಮನವನ್ನು ತನ್ನ ಕಡೆಗೆ ಸೆಳೆಯುವುದು. ಮೂರು ತಿಂಗಳಾದಮೇಲೆ ಇತರರು ತನ್ನನ್ನು ಬಿಟ್ಟುಹೋದರೆ ಆಗ ಅಳುವುದು ೬-೮ ತಿಂಗಳ ಮಗು ಇತರರ ಕಡೆಗೆ ಕೈಚಾಚಿ ತನ್ನನ್ನು ಎತ್ತಿಕೊಳ್ಳು

ವಂತೆ ಮಾಡುವುದು ಅಥವ ಇತರರನ್ನು ತನ್ನ ಹತ್ತಿರಕ್ಕೆ ಕೂಗಿ ಬರುವಂತೆ ಮಾಡುವುದು. ಇದೇ ವಯಸ್ಸಿನಲ್ಲಿ ಮತ್ತೊಂದು ಮಗುವಿನ ಜೊತೆಗೆ ಒಂದು ಆಟಿಕೆಯ ಮೂಲಕ ಸಾಂಘಿಕ ಸಂಬಂಧವನ್ನು ಬೆಳೆಸುವುದು. ಎರಡು ವರ್ಷದ ಮಕ್ಕಳ ಮಧ್ಯೆ ಒಂದು ಚೆಂಡನ್ನು ಎಸೆದರೆ ಅದರ ಸುತ್ತಲೂ ಮಕ್ಕಳು ಗುಂಪುಗೂಡುವುವು. ಕೆಲವರು ಅದನ್ನು ನೋಡುವ ಕುತೂಹಲದಿಂದ ಗುಂಪಿನಲ್ಲಿ ಸೇರಬಹುದು. ಮತ್ತೆ ಕೆಲವರು ಆ ಚೆಂಡನ್ನು ಪಡೆಯಬೇಕೆಂಬ ಅಭಿಲಾಷೆಯಿಂದ ಗುಂಪಿನ ಹತ್ತಿರಕ್ಕೆ ಹೋಗುವರು. ೨-೩ ವರ್ಷ ವಯಸ್ಸಿನ ಮಕ್ಕಳು ದೊಡ್ಡಮಕ್ಕಳಾಡುತ್ತಿದ್ದರೆ ಆ ಆಟವನ್ನು ನೋಡುವುದಕ್ಕೋಸ್ಕರ ಗುಂಪುಗೂಡುವರು. ಒಂದು ವರ್ಷ ವಯಸ್ಸಿನಿಂದಲೇ ಮಗು ಮಾತನಾಡುವುದರ ಮೂಲಕ ಮತ್ತೊಬ್ಬರ ಜೊತೆಯಲ್ಲಿ ಸಂಗವನ್ನು ಬೆಳೆಸುವುದು. ಕ್ರಮೇಣ ತನ್ನ ಆವರಣದಲ್ಲಿರುವ ವಸ್ತು ಜ್ಞಾನಕ್ಕೋಸ್ಕರ ಇತರರನ್ನು ಪ್ರಶ್ನಿಸುವುದು.

ಈ ವಿಧವಾದ ಸಂಗ ಬೆಳೆಯಲು ಅನೇಕ ಕಾರಣಗಳಿವೆ. ಮುಖ್ಯವಾಗಿ ಪ್ರಾರಂಭದಲ್ಲಿ ತನ್ನ ಆವಶ್ಯಕತೆ ಪೂರೈಕೆಗಾಗಿ ಇತರರೊಡನೆ ಸಂಗ ಬೆಳೆಸುವುದು. ಕ್ರಮೇಣ ಆಟವಸ್ತುಗಳಲ್ಲಿ ಸಮಾನೋದ್ದೇಶ, ವಸ್ತುಜ್ಞಾನದ ಇಚ್ಛೆ, ಇವು ಸಂಘನಿರ್ಮಾಣಕ್ಕೆ ಕಾರಣಭೂತಗಳಾಗುವುವು.

ಮೊದಲನೆಯ ವರ್ಷದಲ್ಲಿ ಮಗು ಒಂದು ಸಮಯದಲ್ಲಿ ಒಬ್ಬರ ಜೊತೆಯಲ್ಲಿ ಮಾತ್ರ ಸಖ್ಯವನ್ನು ಬೆಳೆಸುವುದು. ಬ್ಯೂಲರ್ ಮುಂತಾದವರ ವೀಕ್ಷಣೆಯ ಪ್ರಕಾರ ಮೂರು ಮಕ್ಕಳಗುಂಪು ಒಂದೂವರೆ ವರ್ಷ ವಯಸ್ಸು ಕಳೆದನಂತರ ಪ್ರಾರಂಭವಾಗುವುದು. ಎರಡನೆಯ ವರ್ಷದಲ್ಲಿ ಇನ್ನಿಬ್ಬರ ಜೊತೆಯಲ್ಲಿ ಸೇರಿ ವರ್ತಿಸಲು ಸಾಧ್ಯವಾದರೂ ಸಾಧಾರಣವಾಗಿ ಮೂರು ವರ್ಷಗಳ ವಯಸ್ಸಿನವರೆಗೂ ಇಬ್ಬರು ಮಕ್ಕಳು ಜೊತೆಗೂಡಿ ಇರುವುದೇ ಹೆಚ್ಚು. ಕ್ರಮೇಣ ವಯಸ್ಸು ಹೆಚ್ಚಿದಂತೆಲ್ಲಾ ಗುಂಪಿನ ಪ್ರಮಾಣವು ಹೆಚ್ಚುತ್ತ ಹೋಗುವುದು. ಒಂದೆರಡು ವರ್ಷದ ಮಕ್ಕಳು ಇತರ ಮಕ್ಕಳಿದ್ದರೂ ಅವರೊಡನೆ

ಸೇರದೆ ಒಂಟಿಯಾಗಿಯೇ ಆಡಿಕೊಳ್ಳಬಹುದು. ಆದರೆ ೩-೪ ವರ್ಷ ವಯಸ್ಸಿಗೆ ಬಂದಾಗ ಶೇಕಡ ೯೨ರಷ್ಟು ಮಂದಿ ಒಂಟಿಯಾಗಿರುವು ದನ್ನು ಬಿಟ್ಟು ಇತರರೊಡನೆ ಸೇರಿ ಆಡುವರು. ೬ ವರ್ಷದ ಮಕ್ಕಳು ಇತರ ಮಕ್ಕಳಿದ್ದರೂ ಅವರೊಡನೆ ಸೇರದೆ ಒಂಟಿಯಾಗಿ ಆಡಿಕೊಳ್ಳುವ ಸಂಭವವೇ ಇಲ್ಲ. ಇದು ಈ ಕೆಳಗಿನ ಪಟ್ಟಿಯಿಂದ ಸ್ಪಷ್ಟವಾಗುವುದು.

**ಪಟ್ಟಿ ೧೨.**

**ಒಂಟಿಯಾಗಿರುವ ಮಕ್ಕಳ ಶೇಕಡಾಕ್ರಮ**

| ವಯಸ್ಸು (ವರ್ಷಗಳಲ್ಲಿ) | ೩–೪ | ೪–೫ | ೫–೬ | ೬–೭ |
|---|---|---|---|---|
| ಒಂಟಿಯಾಗಿರುವವರ ಶೇಕಡ ಕ್ರಮ | ೮% | ೫% | ೨% | ೦% |

## ಸ್ನೇಹದ ಬೆಳವಣಿಗೆ

ಹುಟ್ಟಿದ ಮಗು ಸ್ನೇಹಪ್ರಿಯವೂ ಅಲ್ಲ, ಸ್ನೇಹ ಅಪ್ರಿಯವೂ ಅಲ್ಲ. ಸ್ನೇಹವು ಆವರಣದ ಪ್ರಭಾವದಿಂದ ಉಂಟಾಗುವ ಒಂದು ಸಂಬಂಧ. ಯಾರು ತನ್ನ ಇಚ್ಛೆಗಳನ್ನು ಪೂರೈಸುವರೋ ಅವ ರೊಡನೆ ಸ್ನೇಹಭಾವವುಂಟಾಗುವುದು. ಯಾರಿಂದ ನಮ್ಮ ಇಚ್ಛೆ, ಕಾರ್ಯಕಲಾಪಗಳಿಗೆ ಆಡಚಣೆಯುಂಟಾಗುವುದೋ ಅವರೊಡನೆ ದ್ವೇಷಭಾವವು ಬೆಳೆಯುವುದು. ಸಣ್ಣ ವಯಸ್ಸಿನಲ್ಲಿ ಅತಿ ಜಾಗರೂ ಕತೆಯಿಂದ ಮಕ್ಕಳನ್ನು ತಂದೆತಾಯಿಗಳು ನೋಡಿಕೊಂಡು ಅವರ ಕೋರಿಕೆಗಳನ್ನೆಲ್ಲಾ ಈಡೇರಿಸಿರುವರು ಆದುದರಿಂದ ಪುಟ್ಟಮಕ್ಕಳಲ್ಲಿ ಇತರರೊಡನೆ ದ್ವೇಷಭಾವಕ್ಕಿಂತಲೂ ಸ್ನೇಹಭಾವವು ಅಧಿಕವಾಗಿರು ವುದು. ಮೇರ್ಗಟ್ ಎಂಬುವರು ಎರಡು ವರ್ಷದ ಅನೇಕ ಮಕ್ಕ ಳನ್ನು ತೆಗೆದುಕೊಂಡು ಒಂದು ಆಟದ ಮನೆಯಲ್ಲಿ ಒಂದೊಂದು ಸಲ ಇಬ್ಬಿಬ್ಬರನ್ನು ಮಾತ್ರ ಜೊತೆಗೂಡಿಸಿ ಅವರ ಸಾಂಗಿಕ ವರ್ತನೆಯನ್ನು

ಈ ಪಟ್ಟಿಯನ್ನು ವಿಸ್ ಲಿಟ್ಸ್‌ಕಿಯವರು ತಯಾರಿಸಿರುವರು.

ವೀಕ್ಷಿಸಿದರು. ಇದರ ಫಲಿತಾಂಶವಾಗಿ ಕಂಡುಬಂದದ್ದೇನೆಂದರೆ ಶೇಕಡ ೮೨ರಷ್ಟು ಸಲ ಇಬ್ಬರು ಮಕ್ಕಳಲ್ಲಿಯೂ ಸ್ನೇಹಭಾವವೂ ಇನ್ನುಳಿದ ಶೇಕಡ ೧೮ರಷ್ಟು ಸಲ ದ್ವೇಷಭಾವವೂ ಇದ್ದಿತು.

ಇಬ್ಬರಲ್ಲಿ ಸ್ನೇಹಭಾವವು ಬೆಳೆಯಬೇಕಾದರೆ ಒಬ್ಬರು ಮತ್ತೊಬ್ಬರಿಗೆ ಸಹಾಯಮಾಡಿ ಹಿತವನ್ನುಂಟುಮಾಡಬೇಕು. ಒಬ್ಬರು ಮತ್ತೊಬ್ಬರನ್ನು ರೇಗಿಸಿ ಅವರಿಗೆ ನೋವುಂಟಾಗುವ ಹಾಗೆ ಮಾಡಿ ಅವರ ಕೆಲಸಗಳಿಗೆ ಅಡಚಣೆಯನ್ನು ತಂದೊಡ್ಡಿದರೆ ದ್ವೇಷಭಾವವುಂಟಾಗುವುದು ಸಹಜ. ಒಂದೇ ಮನೆಯಲ್ಲಿ ಇರುವವರಲ್ಲಿ ಪರಸ್ಪರ ಸಂಬಂಧವು ಹತ್ತಿರವಾದುದು. ಆದುದರಿಂದಲೇ ಒಂದೇ ಮನೆಯಲ್ಲಿ ಇರುವ ವ್ಯಕ್ತಿಗಳಲ್ಲಿ ಅತ್ಯಂತ ಸ್ನೇಹವಾದರೂ ಇರಬಹುದು, ಇಲ್ಲವೆ ಅತಿಯಾದ ದ್ವೇಷವಾದರೂ ಇರಬಹುದು.

ಒಂದು ಮಗು ಇನ್ನೊಂದು ಮಗುವನ್ನು ಪದೇ ಪದೇ ರೇಗಿಸಿ, ಹಾಸ್ಯಮಾಡಿ ಅದಕ್ಕೆ ನೋವುಂಟುಮಾಡಿದರೆ ಆಗ ಅವರಿಬ್ಬರಲ್ಲಿ ದ್ವೇಷವೂ, ಹೊಟ್ಟೆಕಿಚ್ಚುಗಳುಂಟಾಗುವುವು. ಈ ದ್ವೇಷ ಹೊಟ್ಟೆಕಿಚ್ಚುಗಳೇ ಮುಂದೆ ಗುಂಪಿನ ದ್ವೇಷ ಹೊಟ್ಟೆಕಿಚ್ಚುಗಳಾಗಿ ಪರಿಣಮಿಸುವುವು.

ಗಂಡು ಹೆಣ್ಣುಗಳ ಭೇದವಾಗಲೀ, ಜಾತಿ ಮತಗಳ ವ್ಯತ್ಯಾಸವಾಗಲೀ, ಬಡತನ ಸಿರಿತನಗಳ ಅಂತರವಾಗಲೀ, ಮೈಬಣ್ಣಗಳ ತಾರತಮ್ಯವಾಗಲೀ ಐದು ವರ್ಷ ವಯಸ್ಸಿನೊಳಗಿರುವ ಮಕ್ಕಳಲ್ಲಿರುವ ಸ್ನೇಹಭಾವವನ್ನು ತಾಕಲಾರದು. ಒಂದು ಮಗು ಮತ್ತೊಂದು ಮಗುವಿನ ಜೊತೆಯಲ್ಲಿ ಸಹಜವಾಗಿಯೇ ಆಡಲು ಪ್ರಾರಂಭಿಸುವುದು. ಈ ವಯಸ್ಸಿನಲ್ಲಿ ಒಂದು ಮಗುವಿಗೂ ಮತ್ತೊಂದು ಮಗುವಿಗೂ ದ್ವೇಷ ಹುಟ್ಟಬೇಕಾದರೆ ಒಂದೇ ಕಾರಣ—ತನ್ನ ಕಾರ್ಯಕಲಾಪಗಳಿಗೆ ಅಡಚಣೆ ತರುವುದು.

## ನಾಯಕತ್ವದ ಬೆಳವಣಿಗೆ

ಕೆಲವು ಸಮಯಗಳಲ್ಲಿ ನಾಯಕತ್ವವು ಮಗುವಿನ ಮೊದಲ

ವರ್ಷದಲ್ಲಿಯೇ ಕಾಣಿಸಿಕೊಳ್ಳುವುದು. ಕೆಲವರು ಈ ವಯಸ್ಸಿನಲ್ಲಿಯೇ ಇತರ ಮಕ್ಕಳ ಜೊತೆಯಲ್ಲಿ ಸಂಗ ಬೆಳೆಸುವಾಗ ಒಂದು ಧೃಢತೆಯನ್ನು ತೋರಿಸುವರು. ಇತರ ಮಕ್ಕಳ ಮತ್ತು ವಯಸ್ಕರೊಡನೆ ವರ್ತಿಸುವಾಗ ಯಾವ ಸಂದೇಹ ಭೀತಿಗಳನ್ನೂ ವ್ಯಕ್ತಪಡಿಸದೆ ಇರುವರು. ತಮ್ಮ ವಯಸ್ಸಿನ ಮತ್ತೊಂದು ಮಗುವನ್ನು ಜೊತೆಯಲ್ಲಿ ಬಿಟ್ಟರೆ ಮೇಲುಗೈಯ್ಯನ್ನು ತೋರಿಸುವುದು. ಈ ಮಕ್ಕಳಲ್ಲಿರುವ ವ್ಯತ್ಯಾಸವೇನೆಂದರೆ—ತಮ್ಮ ಕಾರ್ಯಕಲಾಪಗಳಲ್ಲಿ ಆರಂಭಶಕ್ತಿಯನ್ನು ಪ್ರಕಟಿಸುವರು. ಕೆಲವರು ಹೊಸ ಹೊಸ ಆಟಗಳನ್ನು ಅಥವಾ ಆಟವನ್ನು ಒಂದು ಹೊಸ ರೀತಿಯಲ್ಲಿ ಆಡುವುದರಲ್ಲಿ ಮುಂದು ಹೆಜ್ಜೆ ಇಡುವರು.

ಎರಡನೆಯ ವರ್ಷದ ಅಂತ್ಯದಲ್ಲಿ ವೈಜ್ಞಾನಿಕರು ಮಕ್ಕಳಲ್ಲಿ ಎರಡು ತರಹದ ಮುಂದಾಳುತನವನ್ನು ಕಾಣಬಹುದೆಂದು ಹೇಳುವರು. ಒಂದು ತರಹದ ಮುಂದಾಳು, ತನ್ನ ಸಂಗಾತಿಗಳ ಮೇಲೆ ಅಧಿಕಾರವನ್ನು ಚಲಾಯಿಸುವನು, ಮತ್ತೊಂದು ತರಹ ಮುಂದಾಳು ತನ್ನ ಸಂಗಾತಿಗಳನ್ನು ಪ್ರೋತ್ಸಾಹಿಸಿ ಅವರ ಒಪ್ಪಿಗೆ ಮತ್ತು ಭಕ್ತಿಯನ್ನು ಸಂಪಾದಿಸುವನು. ನಾಯಕತ್ವವನ್ನು ವ್ಯಕ್ತಪಡಿಸುವ ಮಗುವಿನಲ್ಲಿ ಎರಡು ಗುಣಗಳು ಕಾಣಿಸಿಕೊಳ್ಳುವುವು. ಇತರ ಮಕ್ಕಳ ಜೊತೆಯಲ್ಲಿರುವಾಗ ಅತಿಯಾದ ಸಂತೋಷವನ್ನಾಗಲೀ ಭಯ, ದ್ವೇಷಗಳನ್ನಾಗಲೀ ತೋರಿಸದೆ ಒಂದು ಸಮತೆಯಿಂದ ವರ್ತಿಸುವುದು ಮತ್ತು ಆಟಪಾಟಗಳಲ್ಲಿ ಪ್ರಾರಂಭ ಶಕ್ತಿಯನ್ನು ತೋರಿಸಿ ಮುಂದು ಹೆಜ್ಜೆ ಇಡುವುದು. ಐದು ವರ್ಷದೊಳಗಿನ ನಾಯಕತ್ವವು ಎರಡು ಮೂರು ಅಥವ ನಾಲ್ಕು ಮಕ್ಕಳನ್ನು ಒಳಗೊಂಡಿರುವುದು. ಇನ್ನೂ ಹೆಚ್ಚು ವಯಸ್ಸಾದ ಮೇಲೆಯೇ ದೊಡ್ಡ ಗುಂಪುಗಳ ನಾಯಕತ್ವವು ಸಾಧ್ಯವಾಗುವುದು. ಈ ಐದು ವರ್ಷ ವಯಸ್ಸಿನೊಳಗಿನ ಮಕ್ಕಳ ಗುಂಪುಗಳಲ್ಲಿ ಮೂರು ನಾಲ್ಕು ಮಕ್ಕಳಗಿಂತ ಹೆಚ್ಚಾಗಿರುವುದಿಲ್ಲ.

## ಮಕ್ಕಳ ಕಲಹಗಳು

ಮಕ್ಕಳಲ್ಲಿ ಅನೇಕ ವೇಳೆ ಕಲಹಗಳಾಗುವುದನ್ನು ನೋಡುವೆವು.

ಒಂದು ಆಟಿಕೆಯು ಇಬ್ಬರ ಕಲಹಕ್ಕೆ ಕಾರಣವಾಗುವುದ. ಕೆಲವು ಸಮಯಗಳಲ್ಲ ಚೇಷ್ಟೆಗಾಗಿ ಒಂದು ಮಗು ಮತ್ತೊಂದು ಮಗುವನ್ನು ನೋಯಿಸಬಹುದು. ಆಗ ಕಲಹ ಆರಂಭವಾಗುವುದು. ಮೇಲೆ ಬೀಳುವ ಮಗು ಮತ್ತೊಂದು ಮಗುವನ್ನು ಹೊಡೆಯಬಹುದು, ಅಥವ ಬಯ್ಯಬಹುದು. ಇದಕ್ಕೆ ಪ್ರತಿಕ್ರಿಯೆಯಾಗಿ ಹಾನಿಹೊಂದಿದ ಮಗು ಹಿಂತಿರುಗಿ ಹೊಡೆಯಬಹುದು, ಬಯ್ಯಬಹುದು, ಇಲ್ಲವೆ ಅಳ ಬಹುದು. ಹೈನಿಗ್ ಮತ್ತು ಕಾಯಿಲರ್ ಇವರ ಪ್ರಕಾರ ಎರಡು ವರ್ಷದಿಂದ ಐದು ವರ್ಷದೊಳಗಿನ ಮಕ್ಕಳಲ್ಲಿ ಮೂರನೆಯ ಒಂದು ಭಾಗ ಕಲಹಗಳು ಆಟಿಕೆಗಳಿಂದ ಹುಟ್ಟುವುವು. ಈ ಕಲಹಗಳಲ್ಲಿ ವಿಚಿತ್ರವಾದ ಅಂಶಗಳಿರಡಿವೆ. ಕಲಹವು ಬಹಳ ಹೊತ್ತಿರುವುದಿಲ್ಲ. ಸಾಧಾರಣವಾಗಿ ೨-೫ ನಿಮಿಷಗಳ ಕಾಲ ಇರುವುದು. ಆಮೇಲೆ ಮಕ್ಕಳು ಮತ್ತೆ ಸ್ನೇಹಿತರಾಗಿರುವರು. ಈ ವಯಸ್ಸಿನಲ್ಲಿ ಕಲಹವು ಚಿರಸ್ಥಾಯಿಯಾದ ದ್ವೇಷವನ್ನು ಹುಟ್ಟಿಸುವುದಿಲ್ಲ. ಇದು ಕೇವಲ ಕ್ಷಣಿಕವಾದುದು. ಮತ್ತೊಂದು ಅಂಶವೇನೆಂದರೆ ಯಾವ ಕಾರಣ ದಿಂದ ಕಲಹವು ಪ್ರಾರಂಭವಾಗುವುದೋ ಆ ಕಾರಣವು ಸಾಧಿತವಾಗು ವವರೆಗೂ ಕಲಹವನ್ನು ಮುಂದುವರಿಸುವುದಿಲ್ಲ. ಹೈನಿಗ್ ಪ್ರಕಾರ ಶೇಕಡ ೨೫ ರಷ್ಟು ಕಲಹಗಳಲ್ಲಿ ಮಾತ್ರ ಮೇಲೆ ಬೀಳುವ ಮಗು ತನ್ನ ಹಟವನ್ನು ಸಾಧಿಸಿಕೊಳ್ಳುವವರೆಗೂ ಜಗಳ ಮಾಡುತ್ತಿರುವುದು. ಇನ್ನುಳಿದ ಕಲಹಗಳಲ್ಲಿ ಒದೆರಡು ನಿಮಿಷಗಳನಂತರ ಜಗಳವಾಡು ವುದನ್ನು ಬಿಟ್ಟು ಬೇರೆ ಕೆಲಸಗಳಲ್ಲಿ ಮಗ್ನರಾಗುವರು. ಜಗಳ ಹೂಡು ವುದು ಸ್ವಾಭಾವಿಕವಲ್ಲ. ಕಾರಣಾಂತರಗಳಿಂದ ಜಗಳವು ಪ್ರಾರಂಭ ವಾಗುವುದು. ಒಂದು ಮಗು ಸಾಧಾರಣವಾಗಿ ಇತರ ಮಕ್ಕಳ ಮೇಲೆ ಬೀಳುತ್ತಿದ್ದರೆ ಇದು ಸಹಜ ಗುಣದಿಂದ ಉಂಟಾದುದಲ್ಲ. ಮೇಲೆ ನೋಡಿದ ಹಾಗೆ ಕೆಲವು ಮಕ್ಕಳು ಇತರರನ್ನು ಕಂಡರೆ ಸ್ವಾಭಾವಿಕ ವಾಗಿ ಕುತೂಹಲವನ್ನು ತೋರಿಸಿ ಅದರ ಸಂಗಡ ಆಡುವುದಕ್ಕೆ ಆರಂ ಭಿಸುವುದು. ಮತ್ತೆ ಕೆಲವರು ಇತರ ಮಕ್ಕಳಲ್ಲಿಯೂ ಆಟಪಾಟಗಳ ಲ್ಲಿಯೂ ಆಸಕ್ತಿಯನ್ನು ತೋರಿಸದೆ ಸುಮ್ಮನಿರುವರು. ಹೆಚ್ಚು

ಉತ್ಸಾಹವಿರುವ ಮಗು ನಿರುತ್ಸಾಹಿಯಾದ ಅಥವ ಕಡಿಮೆ ಉತ್ಸಾಹಿಯಾದ ಮಕ್ಕಳೊಂದಿಗೆ ಸೇರುವಾಗ ಕಲಹಗಳು ತಾವಾಗಿಯೇ ಹುಟ್ಟುವುವು. ಜರ್ಸೈಲ್ಡ್ ಹೇಳಿರುವ ಹಾಗೆ "ಪ್ರಾರಂಭದ ಸಾಮಾಜಿಕ ವರ್ತನೆಯಲ್ಲಿ ಮಕ್ಕಳು ಒಂದು ಪ್ರತ್ಯೇಕವಾದ ಕ್ರಮವನ್ನು ತೋರ್ಪಡಿಸುವುದಿಲ್ಲ. ಮಗು ತನ್ನ ಜೀವನವನ್ನೆ ಸಮಾಜವಿರುದ್ಧವಾಗಿ ಅಥವ ಸಮಾಜಪ್ರಿಯವಾಗಿ ಸಹಕರಿಸುವವನಾಗಿ ಇಲ್ಲವೇ ಅಸಹಕಾರಿಯಾಗಿ ಪ್ರಬಲನಾಗಿ ಅಥವ ವಿಧೇಯನಾಗಿ ಜಗಳಗಂಟನಾಗಿ ಅಥವ ಶಾಂತಿ ಪ್ರಿಯನಾಗಿ ಪ್ರಾರಂಭಿಸುವುದಿಲ್ಲ" ದೊಡ್ಡವರಲ್ಲಿ ಈ ವರ್ತನಗಳೆಲ್ಲವೂ ಸ್ವಭಾವಕ್ಕಿಂತಲೂ ಹೆಚ್ಚಾಗಿ ಅನುಭವದ ಮೇಲೆ ಆಧಾರ ಹೊಂದಿರುವುವು.

### ಇತರರೊಡನೆ ಬೆಳೆಯುವ ಸಂಬಂಧ

ಮೊದಲು ಮಕ್ಕಳು ತಾಯಿತಂದೆಯರೊಡನೆ ಸಾಮಾಜಿಕ ಸಂಬಂಧವನ್ನು ಬೆಳೆಸುವರು. ತಾಯಿಯು ತನಗೆ ಬೇಕಾದುದನ್ನೆಲ್ಲಾ ಒದಗಿಸಿ ಕೊಡುವುದರಿಂದ ತಾಯಿಯನ್ನು ಪ್ರೀತಿಸತೊಡಗುವುದು. ತಂದೆ ತಾಯಿಗಳು ಮಗು ಬೆಳೆದ ಹಾಗೆಲ್ಲ ಅದರ ಪ್ರತಿಯೊಂದು ಬಯಕೆಯನ್ನೂ ನಿರೀಕ್ಷಿಸಿ ಸಫಲ ಮಾಡಿದರೆ ಮಗುವಿನಲ್ಲಿ ಒಂದು ಕೆಟ್ಟ ಪರಿಣಾಮವುಂಟಾಗುವುದು. ಮನೆಯ ಹೊರಗಿನವರು ತನ್ನ ಬಯಕೆಗಳನ್ನೆಲ್ಲಾ ನಿರೀಕ್ಷಿಸಿ ತನಗೆ ಬೇಕಾದ ಹಾಗೆ ವರ್ತಿಸದೆ ಹೋದರೆ ಮಗುವಿಗೆ ನಿರಾಶೆಯುಂಟಾಗುವುದು. ಇದರಿಂದ ಮಗು ಹೊರಗಿನವರ ಸಂಬಂಧವನ್ನು ಬೆಳೆಸದೆ ಮನೆಯವರ ಕಡೆಗೇ ತಿರುಗುವುದು. ತಂದೆ ತಾಯಿಗಳೂ ಈ ಗುಣವನ್ನು ಪ್ರೋತ್ಸಾಹಿಸಬಹುದು. ತಮ್ಮ ಮೇಲೆಯೇ ಆಧಾರಗೊಂಡಿದ್ದರೆ ಅವರಿಗೆ ಹೆಚ್ಚು ತೃಪ್ತಿಯಾಗಿ ಮಗುವನ್ನು ಇತರರೊಡನೆ ಸೇರಿ ವರ್ತಿಸುವ ಹಾಗೆ ಬಿಡುವುದಿಲ್ಲ. ಇದರಿಂದ ಮಗು ಬೆಳೆದಮೇಲೆ ಅನೇಕ ಕಷ್ಟಗಳಿಗೆ ಗುರಿಯಾಗುವುದು.

ಸಾಮಾಜಿಕ ವರ್ತನೆಯಲ್ಲಿ ತಿಳಿಯಬೇಕಾದ ಅಂಶಗಳಾವುವೆಂದರೆ ಮನುಷ್ಯರಲ್ಲಿ ತಾರತಮ್ಯಗಳಿವೆ; ಎಲ್ಲರೂ ಒಂದೇ ರೀತಿ ವರ್ತಿಸು

ವುದಿಲ್ಲ. ಬೇರೆ ಬೇರೆ ಜನರಲ್ಲಿ ಅವರಿಗೆ ಅನುಗುಣವಾಗಿ ಬೇರೆ ಬೇರೆ ವಿಧವಾಗಿ ನಡೆದುಕೊಳ್ಳಬೇಕು. ನಮ್ಮನ್ನು ಎಲ್ಲರೂ ಒಂದೇ ವಿಧವಾಗಿ ಕಾಣುವುದಿಲ್ಲ. ಕೆಲವರು ನಮ್ಮನ್ನು ಪ್ರೀತಿಸಬಹುದು; ಕೆಲವರು ಉದಾಸೀನ ಮಾಡಬಹುದು; ಇನ್ನು ಕೆಲವರು ದ್ವೇಷಿಸಬಹುದು ಈ ಮೂರು ಅಂಶಗಳನ್ನು ಮನಗಂಡರೆ, ಸಾಮಾಜಿಕ ಜೀವನವು ಸರಾಗವಾಗಿ ಮುಂದುವರಿಯುವುದು. ಈ ಅಂಶಗಳು ಮನದಟ್ಟಾಗಬೇಕಾದರೆ, ನಾವು ಅನೇಕರೊಡನೆ ಒಡನಾಡಬೇಕು. ಎಷ್ಟು ಹೆಚ್ಚಾಗಿ ನಾವು ಇತರರನ್ನು ಸಂಧಿಸುತ್ತೇವೆಯೋ, ಅಷ್ಟೇ ಪ್ರಮಾಣದಲ್ಲಿ ನಮ್ಮ ಸಾಮಾಜಿಕ ಜೀವನವು ಮುಂದುವರಿಯುವುದು. ಆದುದರಿಂದ ಪ್ರಾರಂಭದಿಂದಲೂ, ತಂದೆ ತಾಯಿಗಳೂ ಉಪಾಧ್ಯಾಯರೂ ತಮ್ಮ ಅಧೀನದಲ್ಲಿರುವ ಮಕ್ಕಳನ್ನು ಇತರ ಮಕ್ಕಳೊಡನೆಯೂ ವಯಸ್ಕರೊಡನೆಯೂ ಸಂಗ ಬೆಳೆಸುವ ಹಾಗೆ ಸನ್ನಿವೇಶಗಳನ್ನುಂಟುಮಾಡಬೇಕು.

ಮಗು ಯಾರೊಡನೆ ಸಂಗ ಬೆಳೆಸುವುದೆಂಬುದು ಮಗುವಿಗೂ ತಂದೆ ತಾಯಿಗಳಿಗೂ ಇರುವ ಸಂಬಂಧದ ಮೇಲೆ ಆಧಾರವಾಗಿರುವುದು. ತಾಯಿತಂದೆಗಳು ತನ್ನನ್ನು ಹೇಗೆ ನೋಡಿಕೊಂಡಿರುವರೋ ಅದೇ ರೀತಿ ತನ್ನನ್ನು ನೋಡಿಕೊಳ್ಳುವ ಇತರರೊಡನೆ ಸಂಗ ಬೆಳೆಸುವುದು. ಅಥವಾ ತಂದೆ ತಾಯಿಗಳು ತನಗೆ ಯಾವುದನ್ನು ಒದಗಿಸಿಕೊಡಲಿಲ್ಲವೋ, ಅದನ್ನು ಒದಗಿಸಿಕೊಟ್ಟವರ ಜೊತೆಯಲ್ಲಿ ಸೇರಬಹುದು. ಈ ಎರಡರಲ್ಲಿ ಯಾವುದನ್ನು ಮಗು ಆರಿಸುವುದು ಎಂಬ ವಿಷಯವು ಮಗುವಿನ ಆಸೆನಿರಾಸೆಗಳ ಮೇಲೆ ನಿಂತಿರುವುದು.

ಕೆಲವು ಮಕ್ಕಳು ತಮ್ಮಲ್ಲಿ ಆತ್ಮ ಭರವಸೆ ಇಲ್ಲದೆ ಇತರರೊಡನೆ ಸೇರದೆ ಒಂಟಿಯಾಗಿರುವುವು. ಅನುಭವದ ಅಭಾವ ಇಲ್ಲವೇ ಕೆಟ್ಟ ಪರಿಣಾಮಗಳುಂಟಾಗುವುದೆಂಬ ಹೆದರಿಕೆಯು ಇದಕ್ಕೆ ಕಾರಣವಾಗಬಹುದು. ಮತ್ತೆ ಕೆಲವರು ಅತಿಯಾಗಿ ಮೇಲೆ ಬಿದ್ದು ಎಲ್ಲರೊಡನೆಯೂ ಸಂಗ ಬೆಳೆಸಲು ಪ್ರಯತ್ನಿಸುವರು. ದಾರಿಯಲ್ಲಿ ಸಿಕ್ಕಿದವರೊಡನೆ ಮಾತನಾಡಲಾರಂಭಿಸುವರು. ಇದೂ ಅನುಭವದ ಅಭಾವದ

ದೆಸೆಯಿಂದುಂಟಾದುದು· ಅಥವಾ ತಾನು ಯಾರಿಗೂ ಬೇಕಾದವನಲ್ಲ ವೆಂಬ ಭಾವನೆಯನ್ನು ಸರಿದೂಗಿಸುವುದಕ್ಕೋಸ್ಕರ ಮೇಲೆ ಬಿದ್ದು ಎಲ್ಲರೊಡನೆಯೂ ಮಾತನಾಡಿ 'ತಾನು ಎಲ್ಲರಿಗೂ ಬೇಕಾದವನು' ಎಂಬ ಭಾವನೆಯು ತನ್ನಲ್ಲಿ ಬರುವ ಹಾಗೆ ಮಾಡಿಕೊಳ್ಳುವರು. ಈ ಎರಡು ವರ್ತನೆಗಳೂ ವಿಪರೀತ ವರ್ತನೆಗಳು. ತಂದೆ ತಾಯಿಗಳೂ ಉಪಾಧ್ಯಾಯರೂ ಮಕ್ಕಳು ಈ ವಿಪರೀತ ವರ್ತನೆಯನ್ನು ಬಿಟ್ಟ ನೆಮ್ಮದಿಯಾಗಿ ಆರಾಮದಿಂದ ಇತರರೊಡನೆ ವರ್ತಿಸುವ ಹಾಗೆ ಸನ್ನಿವೇಶಗಳನ್ನು ಕಲ್ಪಿಸಿಕೊಡಬೇಕು. ಈ ವಿಪರೀತ ವರ್ತನೆಗಳಿಗೆ ಮೂಲಕಾರಣ–ತನ್ನ ವ್ಯಕ್ತಿತ್ವವನ್ನು ಮರೆಯಲಾಗದೇ ಇರುವುದು. ಇದನ್ನು ಹೋಗಲಾಡಿಸಿದರೆ ಮಕ್ಕಳು ಇತರರ ಜೊತೆಯಲ್ಲಿ ಆರಾಮವಾಗಿ ಸಂಗ ಬೆಳೆಸುವರು. ಇದನ್ನು ಸಾಧಿಸಲು ಗುಂಪಿನ ಆಟಗಳು ಬಹಳ ಸಹಕಾರಿಯಾಗುವುವು. ಇತರರೊಡನೆ ಸೇರಿ ಆಡುತ್ತಿದ್ದರೆ ಆ ಆಟದಲ್ಲಿ ಮಗು ಮಗ್ನನಾಗಿ ತನ್ನ ವ್ಯಕ್ತಿತ್ವವನ್ನು ಮರೆತು ಇತರ ಹುಡುಗರನ್ನು ಪ್ರತ್ಯೇಕ ವ್ಯಕ್ತಿಗಳೆಂದು ಭಾವಿಸದೆ, ಅವರೂ ಆಟದ ಭಾಗಗಳೆಂದು ತಿಳಿದು ಅವರೊಡನೆ ಸೇರಿ ಆರಾಮವಾಗಿ ವರ್ತಿಸುವುದನ್ನು ಕಲಿಯುವದು.

ಮಕ್ಕಳ ಸಾಮಾಜಿಕ ವರ್ತನೆಯಲ್ಲಿ ಮತ್ತೊಂದು ವೈಶಿಷ್ಟ್ಯವಿರುವುದು. ಕೆಲವರು ತಾವು ಇತರರಿಗೆ ಏನೂ ಕೊಡದೆ ಇತರರಿಂದ ಎಲ್ಲವನ್ನೂ ಪಡೆಯಲು ಯತ್ನಿಸುವರು. ಇನ್ನು ಕೆಲವರು ತಮ್ಮ ಹತ್ತಿರವಿರುವುದೆಲ್ಲವನ್ನೂ ಇತರರಿಗೆ ಕೊಟ್ಟು ಅವರಿಂದ ಏನನ್ನೂ ಪಡೆಯದೆ ಇರುವರು. ಸಾಧಾರಣವಾಗಿ ಸ್ವಾರ್ಥಪರತೆಯೇ ಹೆಚ್ಚಾಗಿ ಕಂಡು ಬರುವುದು. ಎರಡನೆಯ ವರ್ತನೆಯು ನಿಸ್ವಾರ್ಥತೆಯಿಂದ ಹುಟ್ಟಿದ ವರ್ತನೆಯಲ್ಲ. ಧಾರಾಳಭಾವದಿಂದಲ್ಲ ಇತರರಿಗೆ ಕೊಡುವುದು; ಇತರರ ಮೆಚ್ಚಿಗೆಯನ್ನು ಪಡೆಯಲು ಇರುವ ಅಗಾಧವಾದ ಆಕಾಂಕ್ಷೆಯೇ ಈ ದುಂದುಗಾರಿಕೆಗೆ ಕಾರಣ.

ಸಾಧಾರಣವಾಗಿ ಒಂದು ಮಗು ಸಮವಯಸ್ಕನ ಜೊತೆಯಲ್ಲಿ ಸ್ನೇಹಭಾವವನ್ನು ಬೆಳೆಸುವುದು. ಆದರೆ ಕೆಲವು ಸಮಯಗಳಲ್ಲಿ ತನ

ಗಿಂತ ಬಹಳ ದೊಡ್ಡವರ ಇಲ್ಲವೆ ಬಹಳ ಚಿಕ್ಕವರ ಜೊತೆಯಲ್ಲಿಯೇ ಸ್ನೇಹ ಬೆಳೆಸುವುದುಂಟು. ಸಮ ವಯಸ್ಕನ ಜೊತೆಯಲ್ಲಿ ಸಂಗ ಬೆಳೆಸಲು ಅಸಮರ್ಥನಾದುದರಿಂದ ಹೀಗೆ ವರ್ತಿಸುವುದು. ಚಿಕ್ಕವರ ಜೊತೆಯಲ್ಲಿ ಕೂಡಿದರೆ ಅವರು ತಾನು ಹೇಳಿದಂತೆ ಮಾಡಿ ತನಗೆ ವಿಧೇಯರಾಗಿರುವರೆಂಬ ಅಭಿಲಾಷೆಯೇ ಇದಕ್ಕೆ ಕಾರಣ. ಮನೆಯಲ್ಲಿ ತನಗೆ ಬೇಕಾದುದು ಕಷ್ಟವಿಲ್ಲದೆಯೇ ಸಿಕ್ಕುವುದರಿಂದ ಸಮವಯಸ್ಕರ ಜೊತೆಯಲ್ಲಿ ಕಾದಾಡಿ ತನ್ನ ಆವಶ್ಯಕತೆಗಳನ್ನು ಪೂರೈಸಿಕೊಳ್ಳಲು ಅಸಮರ್ಥನಾಗಿ ಚಿಕ್ಕವರ ಜೊತೆಯಲ್ಲಿ ಸ್ನೇಹ ಬೆಳೆಸುವನು. ತನಗಿಂತ ದೊಡ್ಡವರ ಜೊತೆಯಲ್ಲಿ ಸ್ನೇಹಮಾಡುವವನು, ತನ್ನನ್ನು ಇತರರೂ, ತಂದೆ ತಾಯಿಗಳು ನೋಡಿಕೊಂಡ ಹಾಗೆ ನೋಡಿಕೊಳ್ಳುವರೆಂಬ ಆಸೆಯಿಂದ ಹೀಗೆ ಮಾಡುವನು. ಇಂತಹ ಮಕ್ಕಳಲ್ಲಿ ಭದ್ರತೆಯ ಭಾವವು ಇಲ್ಲದಿರುವುದರಿಂದಲೂ, ಇತರರು ತನ್ನನ್ನು ಕಾಪಾಡಬೇಕೆಂಬ ಇಚ್ಛೆ ಇರುವುದರಿಂದಲೂ ತನಗಿಂತ ದೊಡ್ಡವರ ಜೊತೆಯನ್ನೇ ಸೇರುವನು.

## ದೇಹದ ಆರೋಗ್ಯ ಮತ್ತು ಸಾಮಾಜಿಕವರ್ತನೆ

ಮಗುವಿನ ದೇಹಾರೋಗ್ಯವು ಸಾಮಾಜಿಕವರ್ತನೆಯ ಮೇಲೆ ಪರಿಣಾಮವನ್ನುಂಟುಮಾಡುವುದು. ಮಗು ಖಾಯಿಲೆಯಿಂದ ಮಲಗಿದರೆ ಮನೆಯವರೆಲ್ಲರೂ ಅದನ್ನು ಅತಿ ಜಾಗರೂಕತೆಯಿಂದ ನೋಡಿಕೊಳ್ಳುವರಷ್ಟೆ. ಅದರಿಂದ ಮಗು ಸ್ವಾರ್ಥಪರವಾಗಿ, ಹಟಮಾರಿಯಾಗಿ, ಎಲ್ಲರೂ ತನ್ನ ಸೇವೆ-ಶುಶ್ರೂಷೆಯಲ್ಲಿರಬೇಕೆಂದೂ, ಎಲ್ಲರೂ ತನ್ನ ಅಪ್ಪಣೆಯನ್ನು ನೆರವೇರಿಸಬೇಕೆಂದೂ, ಬಯಸುವುದು. ಮಗುವಿಗೆ ಆಹಾರ ಕಡಿಮೆಯಾಗಿ ಬಲಹೀನವಾದರೆ, ಇತರರಮೇಲೆ ಅಧೀನನಾಗಿದ್ದು ಅತಿಯಾದ ಸಂಕೋಚ, ನಾಚಿಕೆ, ನಮ್ರಭಾವಗಳುಳ್ಳವನಾಗುವನು. ದೊಡ್ಡವನಾದಮೇಲೆ ಇತರರ ಸಂಗವನ್ನು ಬೆಳೆಸಲು ಹಿಂಜರಿಯುವನು. ದೇಹದಲ್ಲಿ ಯಾವುದಾದರೂ ನ್ಯೂನತೆಯಿದ್ದರೆ ಇತರ ಮಕ್ಕಳ ಹಾಸ್ಯಕ್ಕೊಳಗಾಗುವನು. ಇದರಿಂದ ಮಗುವಿನ ವ್ಯಕ್ತಿತ್ವಕ್ಕೆ ಕುಂದಕ ಬಂದು ತಾನು ಕೀಳೆಂಬ ಭಾವನೆಯನ್ನು

ಹೊಂದುವನು. ಕೆಲವು ಸಮಯಗಳಲ್ಲಿ ತಾನು ಕೀಳೆಂಬ ಈ ಭಾವನೆಯು, ಇತರರ ಮೇಲೆ ಬಿದ್ದು ತಾನು ದೊಡ್ಡವನೆಂದು ತೋರ್ಪಡಿಸಿಕೊಳ್ಳುವ ವಿಪರೀತವರ್ತನೆಗೆ ಕಾರಣವಾಗುವುದು.

## ಕುಟುಂಬದಲ್ಲಿ ಮಗುವಿನ ಸ್ಥಾನದ ಪ್ರಭಾವ

ಫ್ರಾಯಿಡ್, ಆಡ್ಲರ್ ಮುಂತಾದ ವೈಜ್ಞಾನಿಕರು 'ಮಗುವಿನ ಬೆಳವಣಿಗೆಯು ಕುಟುಂಬದ ಪರಿಸ್ಥಿತಿಯನ್ನು ಹೊಂದಿಕೊಂಡಿರುವುದು' ಎಂದು ಸಾರಿರುವರು. ತಾಯಿಯು ಮಗನನ್ನೂ ತಂದೆಯು ಮಗಳನ್ನೂ ಅತಿ ಹೆಚ್ಚಾದ ಆದರದಿಂದ ನೋಡಿಕೊಂಡರೆ ಮಕ್ಕಳಲ್ಲಿ ಕೆಟ್ಟ ಪರಿಣಾಮವುಂಟಾಗುವುದೆಂದು ಫ್ರಾಯಿಡ್ ಹೇಳಿರುವರು. ಈ ರೀತಿ ಬೆಳೆದ ಮಕ್ಕಳು ತಮ್ಮ ಪೂರ್ಣ ಇಚ್ಛೆಗಳನ್ನು ತಂದೆತಾಯಿಗಳ ಮೇಲೆ ತಿರುಗಿಸಿ ವಿಪರೀತ ವರ್ತನೆಗೆ ಒಳಪಡುವರು. ಈ ಸ್ಥಿತಿಯೇ ಬೆಳೆದ ಮೇಲೆ, ಉನ್ಮಾದಾವಸ್ಥೆಗೆ ಕಾರಣವಾಗುವುದು. ಆದುದರಿಂದ ತಂದೆತಾಯಿಗಳು ಮಕ್ಕಳ ವ್ಯಕ್ತಿತ್ವವನ್ನು ಗೌರವಿಸಿ, ಅವರು ಬೆಳೆದ ಹಾಗೆಲ್ಲಾ ಸ್ವತಂತ್ರರಾಗಿರುವ ಹಾಗೆ ನೋಡಿಕೊಳ್ಳಬೇಕು.

ಆಡ್ಲರ್ ಎಂಬವರು ಒಂದು ಮನೆಯಲ್ಲಿರುವ ಮೊದಲನೆಯ ಮಗು, ಎರಡನೆಯ ಮಗು, ಕೊನೆಯ ಮಗು ಮತ್ತು ಒಂಟಿಯಾಗಿ ಬೆಳೆಯುವ ಮಗು, ಈ ಮಕ್ಕಳಲ್ಲಿ ಮಾನಸಿಕವಿಕಾಸವು ಬೇರೆಬೇರೆ ರೀತಿಯಿಂದ ನಡೆಯುವುದೆಂದು ಹೇಳಿರುವರು. ಆದರೆ ಈ ವಾದಕ್ಕೆ ಪರಿಶೋಧನೆಗಳ ಫಲಿತಾಂಶಗಳು ಬೆಂಬಲಕೊಟ್ಟಿಲ್ಲ. ಒಂಟಿಗನಾಗಿರುವ ಮಗು ಓದುಬರೆಹಗಳಲ್ಲಿ ಮುಂದುವರಿದರೂ, ಸಾಮಾಜಿಕ ವರ್ತನೆಯಲ್ಲಿ ಹೆದರಿಕೆ ಅಂಜುಬುರುಕುತನವನ್ನೂ, ಇಲ್ಲವೇ, ಇತರರ ಮೇಲೆ ಅಧಿಕಾರವನ್ನೂ ಚಲಾಯಿಸುವ ಮನೋಭಾವವನ್ನೂ ತೋರಿಸುವುದು. ಅಣ್ಣತಮ್ಮಂದಿರು ಹೆಚ್ಚಾಗಿರುವ ಮನೆಯ ಮಗು ಸಾಮಾಜಿಕ ವರ್ತನೆಯಲ್ಲಿ ಒಂದು ಸಮತ್ವವನ್ನು ತೋರುವುದು.

ತಾಯಿತಂದೆಗಳಲ್ಲೊಬ್ಬರನ್ನು ಕಳೆದುಕೊಂಡ ಮಗು, ಮಲತಾಯಿಯಿರುವ ಮಗು, ವ್ಯಭಿಚಾರದಿಂದ ಹುಟ್ಟಿದ ಮಗು, ಸಾಮಾ

ಜಿಕ ಬೆಳೆವಣಿಗೆಯು ನ್ಯೂನತೆಗಳನ್ನೊಳಗೊಂಡಿರುವುದು. ಅದು ಬೇರೆಯವರೊಡನೆ ಸರಿಸಮನಾಗಿ ಸಂಗವನ್ನು ಬೆಳಿಸಲಾರದು.

ಅವಳಿ ಮಕ್ಕಳಲ್ಲಿ ಸಹ, ಸಾಮಾಜಿಕ ನಡೆವಳಿಕೆಯಲ್ಲಿ ವ್ಯತ್ಯಾಸಗಳಿರುವುವು. ಇಬ್ಬರೂ ಒಂದೇಕಾಲದಲ್ಲಿ ಹುಟ್ಟಿ ಒಂದೇ ಮನೆಯಲ್ಲಿ ಒಂದೇ ವಾತಾವರಣದಲ್ಲಿ ಬೆಳೆದರೂ, ಒಂದು ಮಗು ಹೆದರಿಕೆಯಿಲ್ಲದೆ ಸ್ವೇಚ್ಛಾಪ್ರವರ್ತಕನಾಗಿರುವುದು ಮತ್ತೊಂದು ಲಜ್ಜೆಯಿಂದಲೂ, ಭಯದಿಂದಲೂ, ವಿನಯದಿಂದಲೂ ಇರುವುದು. ಅಮೆರಿಕದೇಶದಲ್ಲಿ ಒಂದೇ ತಾಯಿಯ ಹೊಟ್ಟೆಯಲ್ಲಿ ಐದು ಹೆಣ್ಣುಮಕ್ಕಳು (ಡೈಯೋನೆ ಕ್ವಿಂಟುಪ್ಲೆಟ್ಸ್) ಜನಿಸಿದರು. ಈ ಮಕ್ಕಳ ಬೆಳೆವಣಿಗೆಯನ್ನು ಜಾಗರೂಕತೆಯಿಂದ ಮನಶ್ಶಾಸ್ತ್ರಜ್ಞರು ಪರಿಶೀಲಿಸಿದರು. ಈ ಐದು ಮಕ್ಕಳೂ ಒಂದೇ ಗರ್ಭಕಟ್ಟಿದ ತತ್ತಿಯ ವಿಭಾಗಗಳಿಂದ[1] ಉತ್ಪನ್ನವಾದರೂ, ಒಬ್ಬೊಬ್ಬರಲ್ಲಿ ಒಂದೊಂದು ವಿಧವಾದ ಸಾಮಾಜಿಕ ವರ್ತನೆಯು ಕಂಡುಬಂದಿತು. ಒಂದು ಹುಡುಗಿಯು ಸರ್ವಜನಪ್ರಿಯಳಾಗಿಯೂ, ಎರಡನೆಯವಳು ಜಗಳಗಂಟಿಯಾಗಿಯೂ, ಮೂರನೆಯವಳು ತನ್ನಷ್ಟಕ್ಕೆತಾನೆ ಆಡಿಕೊಂಡು ಬೇರೆಯವರೊಡನೆ ಸ್ನೇಹ ಕಲಹಗಳಿಲ್ಲದೆಯೂ, ನಾಲ್ಕನೆಯವಳು ಯಾವರೀತಿಯ ನಿರ್ದಿಷ್ಟವಾದ ಚಿನ್ಹೆಗಳಿಲ್ಲದವಳಾಗಿದ್ದು ಒಂದೊಂದು ಸಮಯದಲ್ಲಿ ಒಂದೊಂದು ರೀತಿಯಲ್ಲಿ ವರ್ತಿಸುವವಳಾಗಿಯೂ, ಐದನೆಯವಳು ಯಾವಾಗಲೂ ಮೊದಲನೆಯವಳ ಮೇಲೆ ಆಧಾರಗೊಂಡಿರುವವಳಾಗಿಯೂ ಇದ್ದರು.

ಹೀಗೆ ಸಣ್ಣ ಮಕ್ಕಳಲ್ಲಿಯೂ ಅವರ ಸಾಮಾಜಿಕವರ್ತನೆಯಲ್ಲಿ ಅನೇಕ ಭೇದಗಳಿರುವುವು. ಆದುದರಿಂದ ತಂದೆತಾಯಿಗಳು ಮತ್ತು ಉಪಾಧ್ಯಾಯರು ಮಕ್ಕಳು ಸಮಾಜಸೇವೆ ಮಾಡಲೂ, ಸ್ನೇಹಭಾವಗಳನ್ನು ಬೆಳಿಸಲೂ ಬೇಕಾದ ಅನುಕೂಲಗಳನ್ನು ಕಲ್ಪಿಸಿಕೊಡಬೇಕು. ಚಿಕ್ಕ ವಯಸ್ಸಿನಲ್ಲಿ ಬೇರೆ ಜನರಲ್ಲಿ ಅಭಿಮಾನ ಸ್ನೇಹಭಾವ ಮುಂತಾದ ಗುಣಗಳನ್ನು ಅಭ್ಯಾಸಕ್ಕೆ ತಂದರೆ, ಅವರು ದೊಡ್ಡವರಾದ ಮೇಲೆ

1. ಮೂರನೆಯ ಅಧ್ಯಾಯವನ್ನು ನೋಡಿ.

ಬೇರೆ ಜನರೊಡನೆ ಸೇರಿ, ಸಮಾಜದ ಉನ್ನತಿಗೆ ಕೆಲಸಮಾಡುವರು. ಚಿಕ್ಕವಯಸ್ಸಿನಲ್ಲಿಯೇ ಹೊಟ್ಟೆಕಿಚ್ಚು ಮೇಲುಕೀಳು ಭಾವನೆಗಳು, ಸ್ವಾರ್ಥತೆ ಮುಂತಾದ ದುರ್ಗುಣಗಳು ಬೇರೂರಿದರೆ ದೊಡ್ಡವರಾದ ಮೇಲೆ ಅವರಲ್ಲಿ ಹೃದಯ ವೈಶಾಲ್ಯ ಪ್ರೇಮ ಕನಿಕರ ಸಹಾನುಭೂತಿ ಮುಂತಾದ ಉದಾತ್ತ ಗುಣಗಳು ಬರುವುದು ಕಷ್ಟ.

# ಅಧ್ಯಾಯ ೧೧

## ನೈತಿಕ ಬೆಳವಣಿಗೆ

ಸಮಾಜದ ಧರ್ಮವನ್ನು ಅನುಸರಿಸಿ ವರ್ತಿಸುವ ವ್ಯಕ್ತಿಯ ನಡತೆಯು ನೀತಿಯುತವಾದುದೆಂದು ಹೇಳಬಹುದು. ಎಲ್ಲರೂ ಅದು ಒಳ್ಳೆಯ ಮಾರ್ಗವೆಂದು ಹೇಳಿದರೆ ಅದು ನೈತಿಕಮಾರ್ಗವಾಗುವುದು. ಜನ ಸಮುದಾಯವು ಅದು ಕೆಟ್ಟ ವರ್ತನೆಯೆಂದರೆ ಆ ನಡತೆಯು ನೀತಿವಿರುದ್ಧವಾಗುವುದು ಒಳ್ಳೆಯ ನಡತೆಯಲ್ಲಿ ಎರಡು ಮುಖ್ಯಾಂಶಗಳಿವೆ. ಒಂದು ವ್ಯಕ್ತಿಗೆ ಸಂಬಂಧಪಟ್ಟದು ; ಮತ್ತೊಂದು ಸಮಾಜಕ್ಕೆ ಸಂಬಂಧಪಟ್ಟುದು. ಸಾಧಾರಣವಾಗಿ ಜನರು ಒಳ್ಳೆಯ ನಡತೆಯನ್ನು ಅವಲಂಬಿಸಲು ಸಮಾಜದ ಹೆದರಿಕೆಯೇ ಕಾರಣ. ಕೆಟ್ಟ ನಡತೆಯನ್ನು ಅವಲಂಬಿಸುವವರನ್ನು ಇತರರು ದುರ್ಗುಣಗಳೆಂದು ಹೇಳುವರು. ಅವರ ಸಂಗವನ್ನು ಬಿಡುವರು. ಗುಂಪಿನಿಂದ ಅಂತಹವರನ್ನು ದೂರಮಾಡುವರು. ಕೋರ್ಟು-ಕಛೇರಿಗಳ ಮೂಲಕ ಅವರಿಗೆ ಶಿಕ್ಷೆವಿಧಿಸುವಂತೆ ಮಾಡುವರು. ಈ ಹೆದರಿಕೆಯಿಂದ ಸಾಧಾರಣವಾಗಿ ಜನರು ಒಳ್ಳೆಯ ನಡತೆಯನ್ನು ಅವಲಂಬಿಸುವರು. ಆದರೆ ಜೀವನದಲ್ಲಿ ಒಂದು ಗುರಿಯನ್ನಿಟ್ಟುಕೊಂಡು ಆ ಗುರಿಯನ್ನು ಸಾಧಿಸುವುದರಲ್ಲಿ ತೊಡಗಿರುವ ವ್ಯಕ್ತಿಯ ನಡತೆಯು ಇನ್ನೂ ಉನ್ನತವಾದುದಾಗಿರುವುದು.

ಯಾವ ಮನುಷ್ಯನೇ ಆಗಲಿ ಒಳ್ಳೆಯ ನಡತೆಯಿಂದಿರಬೇಕಾದರೆ ತನ್ನ ಭಾವಗಳ ಮೇಲೆ ಸ್ವಾಧೀನವಿರಬೇಕು, ಆತ್ಮಗೌರವವಿರಬೇಕು, ನಡತೆಯಲ್ಲಿ ಒಂದು ಹಿಡಿತವಿರಬೇಕು. ಸತ್ಯವನ್ನು ಬಿಡದೆ ತನ್ನ ಸುತ್ತಲಿರುವ ಮನುಷ್ಯರೊಡನೆ ತಾಳ್ಮೆಯಿಂದಲೂ, ಅನ್ಯೋನ್ಯತೆಯಿಂದಲೂ, ವಿನಯದಿಂದಲೂ ಬಾಳಬೇಕು. ಇಂತಹ ವರ್ತನೆಗೆ ಬಾಲ್ಯದಲ್ಲಿ ನಮಗೆ ದೊರಕುವ ಶಿಕ್ಷಣವೇ ತಳಹದಿ. ಮಗುವಿನಲ್ಲಿ ಒಂದು ನಡತೆಯು ಒಳ್ಳೆಯದು ಅಥವಾ ಕೆಟ್ಟದು ಎಂಬ ತಿಳಿವಳಿಕೆ

ಯಾವರೀತಿ ಹುಟ್ಟಿ ಬೆಳೆಯುವುದೆಂಬುದನ್ನು ಶಾಸ್ತ್ರಜ್ಞರು ಪರೀಕ್ಷಿಸಿರುವರು.

ಹಾರ್ಟ್‌ಷಾರ್ನ್ ಮತ್ತು ಮೇಯವರು ಅನೇಕ ಸನ್ನಿವೇಶಗಳನ್ನು ಒದಗಿಸಿ ಅವುಗಳಲ್ಲಿ ಮಕ್ಕಳು ಯಾವ ರೀತಿಯನ್ನು ಅವಲಂಬಿಸಿ ವರ್ತಿಸುವರೆಂದು ಪರೀಕ್ಷಿಸಿರುವರು. ಒಂದು ಶಾಲೆಯಲ್ಲಿ ಒಂದೊಂದು ಮಗುವಿಗೂ ಒಂದೊಂದು ಚೀಲದಲ್ಲಿ ಸಾಮಾನುಗಳನ್ನು ಕೊಟ್ಟು "ಸ್ವಲ್ಪಹೊತ್ತು ಈ ಸಾಮಾನುಗಳ ಜೊತೆಯಲ್ಲಿ ನೀವು ಆಡಿಕೊಂಡು ಪುನಃ ಅವುಗಳನ್ನೆಲ್ಲಾ ಚೀಲದಲ್ಲಿಯೇ ತುಂಬಿ ಹಿಂದೆ ಕೊಡಿ'' ಎಂದು ಹೇಳಲಾಯಿತು. ಇಂತಹ ಮಾರ್ಗಗಳಿಂದ ಒಂದು ಗುಂಪಿನಲ್ಲಿ ಸುಳ್ಳುಹೇಳುವುದು, ಕಳ್ಳತನ ಮಾಡುವುದು ಮತ್ತೊಬ್ಬರಿಗೆ ಸಹಾಯಮಾಡುವುದು ಮುಂತಾದ ಗುಣಗಳ ವ್ಯಾಪ್ತಿಯನ್ನು ಕಂಡು ಹಿಡಿದಿರುವರು. ಈ ಪರಿಶೀಲನದ ಫಲಿತಾಂಶಗಳು




ಚಿತ್ರ ೩೦ ನಿಜ ಹೇಳುವುದರಲ್ಲಿ ಪಡೆದ ಅಂಕಿಗಳ ಹಂಚಿಕೆ

ಮಕ್ಕಳಲ್ಲಿ ಸುಳ್ಳುಹೇಳುವ ಗುಂಪು, ಅಥವ ನಿಜಹೇಳುವ ಗುಂಪು ಎಂಬ ಎರಡು ಗುಂಪುಗಳಿಲ್ಲವೆಂದು ವ್ಯಕ್ತವಾಯಿತು. ಕೆಲವರು

ಸುಳ್ಳುಹೇಳುವುದಿಲ್ಲ; ಕೆಲವರು ಸ್ವಲ್ಪ ಸುಳ್ಳನ್ನು ಹೇಳುವರು ಮತ್ತೆ ಕೆಲವರು ಹೆಚ್ಚಾಗಿ ಸುಳ್ಳನ್ನು ಹೇಳುವರು. ಹೀಗೆ ಸುಳ್ಳಿನ ಪ್ರಮಾಣವು ಹೆಚ್ಚುಕಡಿಮೆಯಾಗಿರುವುದೇ ಹೊರತು ಸಂಪೂರ್ಣವಾಗಿ ಸದಾ ಸುಳ್ಳು ಹೇಳುವುದು ಅಸಾಧ್ಯ. ಒಂದು ಸನ್ನಿವೇಶದಲ್ಲಿ ಸುಳ್ಳು ಹೇಳಿದರೆ ಮತ್ತೊಂದು ಸನ್ನಿವೇಶದಲ್ಲಿ ನಿಜ ಹೇಳುವರು. ಹೀಗೆ ಕಳ್ಳತನ, ಮೋಸ, ಅಸಹಕಾರ ಮುಂತಾದ ದುರ್ಗುಣಗಳು ಕೆಲವು ಸನ್ನಿವೇಶಗಳಲ್ಲಿ ಕಾಣಿಸಿಕೊಂಡು ಮತ್ತೆ ಕೆಲವು ಸನ್ನಿವೇಶಗಳಲ್ಲಿ ಕಾಣಿಸಿಕೊಳ್ಳದೆ ಇರಬಹುದು. ಪರೀಕ್ಷಿಸಿರುವ ಗುಂಪುಗಳಲ್ಲಿ ಶೇ. ೭೦-೮೦ ಮಂದಿ ಸ್ವಲ್ಪಮಟ್ಟಿಗೆ ಅಪ್ರಮಾಣಿಕತೆಯನ್ನು ತೋರಿಸಿರುವರು.




ಚಿತ್ರ ೪೧ ಬುದ್ಧಿಶಕ್ತಿ ಮತ್ತು ನೀತಿಯ ತಿಳುವಳಿಕೆಯ ಅಂಕಿ

ಟರ್ಮನ್ ಎಂಬುವರ ಪರಿಶೋಧನೆಯ ಪ್ರಕಾರ ಹೆಚ್ಚು ಬುದ್ಧಿಶಕ್ತಿಯುಳ್ಳವರು ಹೆಚ್ಚು ಪ್ರಮಾಣಿಕತೆಯನ್ನು ತೋರಿಸುವರು. ಹಾರ್ಟ್‌ಷಾರ್ನ್ ಮತ್ತು ಮೇಯವರು ಬುದ್ಧಿಶಕ್ತಿಗೂ ಪ್ರಮಾಣಿಕತೆಗೂ ೦·೫ ಸಂಬಂಧವಿದೆಯೆಂದು ಕಂಡುಹಿಡಿದಿರುವರು. ಅಂದರೆ ಸಾಧಾರಣವಾಗಿ ಬುದ್ಧಿಶಕ್ತಿಯೂ ಪ್ರಮಾಣಿಕತೆಯೂ ಜೊತೆಗೊಂಡಿರುವುದು. ಬರ್ಟ್ ಎಂಬುವರ ಪ್ರಕಾರ ಬಾಲ ಕಳ್ಳರಲ್ಲಿ ಶೇಕಡ ೮ ಮಂದಿ ಬುದ್ಧಿಶಕ್ತಿಯಿಲ್ಲದವರು ಇರುತ್ತಾರೆ. ಇವರ ಐಕ್ಯೂ ೭೦ ಕ್ಕಿಂತ ಕಡಿಮೆ ಇರುವುದು. ಶೇಕಡ ೬೬·೫ ರಷ್ಟು ಮಂದಿಯ ಬುದ್ಧಿಶಕ್ತಿಯು ಐಕ್ಯೂ ೯೫ ಕ್ಕಿಂತ ಕಡಿಮೆ ಇರುವುದು. ಇನ್ನುಳಿದ ೩೩·೫ ರಷ್ಟು ಮಂದಿಯ ಐಕ್ಯೂ ೯೫ ಕ್ಕಿಂತಲೂ ಹೆಚ್ಚಾಗಿರುವುದು. ಅಂದರೆ ಟರ್ಮನ್, ಬರ್ಟ್ ಇವರ ಪರಿಶೋಧನೆಗಳ ಪ್ರಕಾರ, ಬುದ್ಧಿಶಕ್ತಿ ಕಡಿಮೆಯುಳ್ಳವರಲ್ಲಿ ಕಳ್ಳರ ಮತ್ತು ಪುಂಡರ ಸಂಖ್ಯೆಯು ಹೆಚ್ಚು; ಬುದ್ಧಿಶಕ್ತಿ ಹೆಚ್ಚಾಗಿರುವವರ ಗುಂಪಿನಲ್ಲಿ ಇವರ ಸಂಖ್ಯೆಯು ಕಡಿಮೆ. ಬಾಲ ಕಳ್ಳರಲ್ಲಿ ½ ಭಾಗಕ್ಕೆ ಬುದ್ಧಿಕಡಿಮೆ ಇರುವುದೂ ಮಿಕ್ಕ ½ ಭಾಗದವರ ಬುದ್ಧಿಶಕ್ತಿಯು ಸರಾಸರಿಗಿಂತ ಹೆಚ್ಚು.

ಸೆರೆಮನೆಗಳಲ್ಲಿಯೋ ಅಥವ ಕಳ್ಳಹುಡುಗರಿಗೆ ಪ್ರತ್ಯೇಕವಾಗಿ ಸ್ಥಾಪಿಸಿರುವ ವಿಶೇಷರೀತಿಯ ಶಾಲೆಗಳಲ್ಲಿಯೋ ಇರುವ ಹುಡುಗರ ನೈತಿಕಜ್ಞಾನವನ್ನು ಪರಿಶೀಲಿಸಿರುವರು. ಈ ಹುಡುಗರ ನೈತಿಕಜ್ಞಾನವು ಸಾಧಾರಣಶಾಲೆಯಲ್ಲಿರುವ ಹುಡುಗರ ನೈತಿಕಜ್ಞಾನಕ್ಕಿಂತಲೂ ಬಹಳ ಕಡಿಮೆಯೆಂದು ತಿಳಿದುಬಂದಿತು. ಕಳ್ಳತನ ಪುಂಡತನಗಳಿಗೆ ನೈತಿಕಜ್ಞಾನದ ನ್ಯೂನತೆಯು ಒಂದು ಕಾರಣವೆಂದು ಇದರಿಂದ ಗೊತ್ತಾಗುವುದು.

ಹಾರ್ಟ್‌ಷಾರ್ನ್ ಮತ್ತು ಮೇಯವರು ಮಕ್ಕಳ ನೈತಿಕಜ್ಞಾನಕ್ಕೂ ಅವರ ತಂದೆತಾಯಿಗಳ ನೈತಿಕಜ್ಞಾನಕ್ಕೂ ೦·೫೫ ಸಂಬಂಧವಿರುವುದೆಂದು ಕಂಡು ಹಿಡಿದಿರುವರು. ಯಾವುದು ಒಳ್ಳೆಯದು ಯಾವುದು ಕೆಟ್ಟದು ಎಂಬ ಜ್ಞಾನವು ತಾಯಿತಂದೆಗಳಲ್ಲಿ ಹೆಚ್ಚಾಗಿದ್ದರೆ ಮಕ್ಕಳಲ್ಲಿಯೂ ಹೆಚ್ಚಾಗಿರುವುದೆಂದು ತಿಳಿದುಬರುತ್ತದೆ.

ಮಕ್ಕಳ ನೈತಿಕಜ್ಞಾನಕ್ಕೂ ನೀತಿಪಾಠವನ್ನು ಹೇಳುವ ಉಪಾಧ್ಯಾಯರ ನೈತಿಕಜ್ಞಾನಕ್ಕೂ ೦-೦೦೨ ಸಂಬಂಧನ ವಿರುವುದೆಂದು ಅವರು ಕಂಡು ಹಿಡಿದಿರುವರು ಆದುದರಿಂದ ಮಕ್ಕಳ ನೈತಿಕ ಜ್ಞಾನವು ತಾಯಿತಂದೆಗಳ ನೈತಿಕಜ್ಞಾನವನ್ನು ಬಹುವಾಗಿ ಅವಲಂಬಿಸಿರುವುದೆಂದು ಸ್ಪಷ್ಟವಾಗುತ್ತದೆ. ಇದೂ ಅಲ್ಲದೆ ಮಕ್ಕಳ ನೈತಿಕ ಜ್ಞಾನಕ್ಕೂ ತಾಯಿಯ ನೈತಿಕಜ್ಞಾನಕ್ಕೂ ಇರುವ ಸಂಬಂಧವು, ಮಕ್ಕಳ ನೈತಿಕಜ್ಞಾನಕ್ಕೂ ತಂದೆಯ ನೈತಿಕಜ್ಞಾನಕ್ಕೂ ಇರುವ ಸಂಬಂಧಕ್ಕಿಂತಲೂ ಹೆಚ್ಚಾಗಿರುವುದು. ಇದರ ಮುಖ್ಯಾಂಶವೇನೆಂದರೆ ಮಗುವಿನ ನೈತಿಕವರ್ತನೆಯು ಅದರ ನೈತಿಕಜ್ಞಾನವನ್ನು ಅನುಸರಿಸಿರುವುದು ; ನೈತಿಕಜ್ಞಾನವು ತಾಯಿಯ ನೈತಿಕಜ್ಞಾನವನ್ನು ಅವಲಂಬಿಸಿರುವುದು. ಆದುದರಿಂದ ಸಮಾಜದಲ್ಲಿ ನೈತಿಕವರ್ತನವು ಹೆಚ್ಚಬೇಕಾದರೆ ತಾಯಿತಂದೆಯರ ನೈತಿಕಜ್ಞಾನವು ಹೆಚ್ಚಬೇಕು. ಈ ಕಾರಣದಿಂದಲೇ ವಿದ್ಯಾವಿಹೀನರೂ, ಅಸಂಸ್ಕೃತರೂ ಆದ ಬಡವರ ಮನೆಯಮಕ್ಕಳು ಹೆಚ್ಚಾಗಿ ಬಾಲ ಕಳ್ಳರಾಗುವರು.

ಪಟ್ಟಿ ೧೩

## ಮಕ್ಕಳ ಮತ್ತು ಅವರ ಸಂಪರ್ಕದಲ್ಲಿರುವವರ ನೈತಿಕ ಜ್ಞಾನದ ಸಂಬಂಧನ

| | |
|---|---|
| ಮಕ್ಕಳ ನೈತಿಕ ಜ್ಞಾನಕ್ಕೂ ತಾಯಿ ತಂದೆಗಳ ನೈತಿಕ ಜ್ಞಾನಕ್ಕೂ .... .... | ೦·೫೫ |
| ಮಕ್ಕಳ ನೈತಿಕ ಜ್ಞಾನಕ್ಕೂ ಸ್ನೇಹಿತರ ನೈತಿಕ ಜ್ಞಾನಕ್ಕೂ | ೦·೩೫ |
| ಮಕ್ಕಳ ನೈತಿಕ ಜ್ಞಾನಕ್ಕೂ ಬಾಲ ಸಂಘಗಳ ಮುಖಂಡರ ನೈತಿಕ ಜ್ಞಾನಕ್ಕೂ .... .... | ೦·೧೪ |
| ಮಕ್ಕಳ ನೈತಿಕ ಜ್ಞಾನಕ್ಕೂ ಉಪಾಧ್ಯಾಯರ ನೈತಿಕ ಜ್ಞಾನಕ್ಕೂ .... .... | ೦·೦೬ |
| ಮಕ್ಕಳ ನೈತಿಕ ಜ್ಞಾನಕ್ಕೂ ನೀತಿ ಬೋಧಕರ ನೈತಿಕ ಜ್ಞಾನಕ್ಕೂ .... .... | ೦·೦೦೨ |

ಶೇಕಡ ೭೦·೮ ರಷ್ಟು ಬಾಲ ಕಳ್ಳರು ಹೀನ ಸ್ಥಿತಿಯಲ್ಲಿರುವ ಮನೆತನಗಳಿಂದ ಬರುವರೆಂದು ಕಂಡು ಬಂದಿದೆ. ಇಂತಹ ಮನೆಗಳಲ್ಲಿ ತಂದೆ ತಾಯಿಯರಿಬ್ಬರೂ ಜೀವನೋಪಾಯಕ್ಕೆ ಮನೆಯನ್ನೂ ಮಕ್ಕಳನ್ನೂ ಬಿಟ್ಟು ತಮ್ಮ ಕೆಲಸಗಳಿಗೆ ಹೋಗಬೇಕಾಗುವುದು. ಆದುದರಿಂದ ಮಕ್ಕಳು ಮೇಲ್ವಿಚಾರಣೆಯಿಲ್ಲದೆ ಬೆಳೆಯುವರು. ಇದರಿಂದ ನೀತಿ ರಹಿತವಾದ ವರ್ತನೆಗೆ ಅವಕಾಶ ದೊರೆಯುವುದು. ತಂದೆ ತಾಯಿಗಳಲ್ಲಿ ಒಬ್ಬರು ತೀರಿಹೋಗುವುದು, ದಾಂಪತ್ಯ ವಿಚ್ಛೇದನ, ದಾಂಪತ್ಯ ಕಲಹ, ದಾಂಪತ್ಯ ದ್ರೋಹ ಮುಂತಾದ ಕಾರಣಗಳೂ ಸಹ ಬಾಲರಲ್ಲಿ ಕಳ್ಳತನ ಪುಂಡುತನವನ್ನು ಉಂಟುಮಾಡುವುವು. ಮತ್ತೊಂದು ಮುಖ್ಯ ಕಾರಣವೇನೆಂದರೆ ಸಹವಾಸದೋಷ, ಹುಡುಗರು ಕೆಟ್ಟಮಕ್ಕಳ ಜೊತೆಯಲ್ಲಿ ಸೇರಿದರೆ ಅವರೂ ಕೆಟ್ಟವರಾಗುವರು.

ಮಕ್ಕಳು ಬೆಳೆಯುತ್ತ ಅವರ ಪ್ರಾಮಾಣಿಕತೆಯು ಹೇಗೆ ಬೆಳೆಯುವುದೆಂದು ಟ್ಯೂಡರ್-ಹಾರ್ಟ್ ಎಂಬುವರು ಪರಿಶೀಲಿಸಿದರು. ಶಾಲೆಯ ಹುಡುಗರನ್ನು "ಸುಳ್ಳು ಹೇಳಲೇ ಬೇಕಾದ ಸಂದರ್ಭಗಳುಂಟೆ?" ಎಂದು ಪ್ರಶ್ನಿಸಿ ಅವರ ಉತ್ತರಗಳನ್ನು ಪರೀಕ್ಷೆಮಾಡಿದರೆ ಈ ಅಂಶಗಳು ಕಂಡು ಬಂದುವು. ಐದು ಆರನೆಯ ತರಗತಿ




ಚಿತ್ರ ೩೨ ವಯಸ್ಸು ಬೆಳದಂತೆ ಸುಳ್ಳು ಹೇಳುವುದು ಹೆಚ್ಚುತ್ತದೆ

ಯಲ್ಲಿ ಓದುವ ಮಕ್ಕಳು ಶೇಕಡ ೭೦ ರಷ್ಟು ಮಂದಿ ಸುಳ್ಳು ಹೇಳಬೇಕಾದ ಸಂದರ್ಭಗಳು ಇಲ್ಲವೇ ಇಲ್ಲ ಎಂದು ಹೇಳಿದರು. ಇದೇ ಉತ್ತರವನ್ನು ಏಳು, ಎಂಟು, ಒಂಭತ್ತನೇ ತರಗತಿಗಳಲ್ಲಿ ಶೇಕಡ ೬೦ ರಷ್ಟು ಮಂದಿ ಮಾತ್ರ ಕೊಟ್ಟರು; ಹತ್ತರಿಂದ ಹನ್ನೆರಡನೇ ತರಗತಿಯ ಮಕ್ಕಳಲ್ಲಿ ಶೇಕಡ ೪೫ರಷ್ಟು ಮಂದಿ ಮೇಲಿನ ಉತ್ತರವನ್ನು ಕೊಟ್ಟರು. ಅಂದರೆ ಮೊದಲು ಮೊದಲು ತಂದೆ ತಾಯಿಗಳು ಹೇಳುವ ಮಾತುಗಳನ್ನು ಕೇಳಿ ಯಾವ ಸಂದರ್ಭದಲ್ಲಿಯೂ ಸುಳ್ಳು ಹೇಳಬಾರದು ಎಂಬ ನಂಬಿಕೆಯನ್ನುಳ್ಳ ಮಕ್ಕಳು ಬೆಳೆಯುತ್ತ ಬೆಳೆಯುತ್ತ ಈ ನಂಬಿಕೆಯನ್ನು ಕೈ ಬಿಡುವರು. ಇದಕ್ಕೆ ಕಾರಣ ಅವರು ದೊಡ್ಡವರ ವರ್ತನೆಯನ್ನು ವೀಕ್ಷಿಸುವುದು ಎಂದು ಹೇಳಬಹುದು. ದೊಡ್ಡವರು ಮಕ್ಕಳಿಗೆ ಸುಳ್ಳು ಹೇಳಬಾರದು ಎಂದು ಉಪದೇಶ ಮಾಡುವರೇ ಹೊರತು ಕಾರ್ಯತಃ ತಮ್ಮ ನಡೆವಳಿಕೆಯಲ್ಲಿ ಇದನ್ನು ಅವಲಂಬಿಸುವುದಿಲ್ಲ. ಮಕ್ಕಳೂ ದೊಡ್ಡವರಾಗುತ್ತ ತಮ್ಮ ಸುತ್ತಮುತ್ತಲಿನ ದೊಡ್ಡವರನ್ನು ಅನುಕರಿಸಿ ಪ್ರಾಮಾಣಿಕತೆಯಲ್ಲಿ ಭರವಸೆಯನ್ನು ಕಳೆದುಕೊಳ್ಳುವರು. ಟ್ಯೂಡರ್ ಹಾರ್ಟ್‌ರು "ಸಾಮಾಜಿಕ ಕಾರಣಗಳಿಂದ ಸುಳ್ಳನ್ನು ಹೇಳಬಹುದೇ?" ಎಂದು ಕೇಳಲು, ಕೆಲವರು ಮತ್ತೊಬ್ಬರನ್ನು ರಕ್ಷಿಸುವುದಕ್ಕೋಸ್ಕರ ಸುಳ್ಳು ಹೇಳಬಹುದು ಎಂದು ಹೇಳಿದರು. ಕಷ್ಟ ಪರಿಸ್ಥಿತಿಗಳಿಂದ ಪಾರಾಗಲು ಸುಳ್ಳು ಹೇಳಬಹುದೆಂದು ಮತ್ತೆ ಕೆಲವರು ಹೇಳಿದರು. ಹನ್ನೊಂದು ವರ್ಷದ ಒಂದು ಹುಡುಗಿಯು "ಮಕ್ಕಳು ಸುಳ್ಳು ಹೇಳಬೇಕಾಗಿಲ್ಲ ಆದರೆ ದೊಡ್ಡವರು ಕೆಲವು ವೇಳೆ ಸುಳ್ಳು ಹೇಳಬೇಕಾಗುವುದು" ಎಂದು ಹೇಳಿದಳು. ವಯಸ್ಸು ಹೆಚ್ಚುತ್ತ ಹೆಚ್ಚುತ್ತ ಈ ರೀತಿಯಾಗಿ ಸುಳ್ಳು ಹೇಳಲು ಇರುವ ಕಾರಣಗಳನ್ನು ಕೊಡುವುದೂ ಹೆಚ್ಚುವುದು.

ಸಾಧಾರಣವಾಗಿ ನೈತಿಕ ಬೆಳವಣಿಗೆಯಲ್ಲಿ ಮೂರು ಅಂತಸ್ತುಗಳಿವೆಯೆಂದು ನಂಬುವರು. ಮೊದಮೊದಲು ಮಕ್ಕಳವರ್ತನೆಯು ನೀತಿಗೆ ವಿಹಿತವೂ ಅಲ್ಲ ನೀತಿರಹಿತವೂ ಅಲ್ಲ. ಅವರು ಬೆಳೆಯುತ್ತ ಬೆಳೆಯುತ್ತ ಯಾವುದು ನೈತಿಕವರ್ತನೆ, ಯಾವುದು ನೀತಿಗೆ ವಿರುದ್ಧ

ಎಂಬ ತಿಳಿವಳಿಕೆಯನ್ನು ಪಡೆದು ವಯಸ್ಕರಾದಮೇಲೆ ಅವರ ವರ್ತನೆಗಳೆಲ್ಲವೂ ನೀತಿಧರ್ಮಗಳ ಆಧಾರದಮೇಲೆ ನಿಂತಿರುವುವೆಂದು ಭಾವಿಸುವುದುಂಟು. ಇದರಿಂದಲೇ ಕಾನೂನುಪ್ರಕಾರ ಯಾರು ಒಂದು ಕೆಲಸ ತಪ್ಪೆಂದು ತಿಳಿದೂ ಅದನ್ನು ಮಾಡುವರೋ ಅವರು ಶಿಕ್ಷಾರ್ಹರೆಂದು ಭಾವಿಸುವರು. ಆದಕಾರಣ ಹದಿನಾರು ವರ್ಷಗಳಿಗಿಂತ ಹೆಚ್ಚಾದ ವಯಸ್ಸಿನವರು ತಮ್ಮ ಕಾರ್ಯಗಳಿಗೆ ತಾವು ಜವಾಬ್ದಾರರೆಂದೂ ಆ ವಯಸ್ಸಿಗಿಂತ ಕಡಿಮೆಯಿರುವ ಮಕ್ಕಳು ತಮ್ಮ ಕೆಲಸಗಳಿಗೆ ಜವಾಬ್ದಾರರಲ್ಲವೆಂದೂ ಕಾನೂನುಪ್ರಕಾರ ಭಾವಿಸುವರು. ಆದರೆ ಈ ನಂಬಿಕೆಯು ಅನೇಕವೇಳೆ ಮಕ್ಕಳಲ್ಲಿ ಅನೈತಿಕವರ್ತನೆಗಳಿಗೆ ಕಾರಣವಾಗುವುದು. ಆದುದರಿಂದ ಮಕ್ಕಳು ಕದಿಯುವುದು ಮುಂತಾದ ಕೆಟ್ಟಕೆಲಸಗಳನ್ನು ಮಾಡಿದರೆ ಅವರನ್ನು ಕೂಡಲೇ ಒಳ್ಳೆಯದಾರಿಗೆ ತರದೆ 'ಪಾಪ, ಇನ್ನೂ ಹುಡುಗ ಮುಂದೆ ಸರಿಹೋಗುವನು' ಎಂದು ಉದಾಸೀನಮಾಡಿ, ಆ ಮಗು ಕೆಟ್ಟ ಪ್ರವರ್ತನೆಯಲ್ಲಿಯೇ ಮುಂದುವರಿಯುವಂತೆ ಬಿಡಬಾರದು. ನೈತಿಕ ಬೆಳವಣಿಗೆಯು ನಾವು ಮಕ್ಕಳಿಗೆ ತೋರಿಸಿಕೊಟ್ಟ ದಾರಿಯನ್ನು ಹಿಡಿಯುವುದು. ಮೊದಲಿನಿಂದಲೂ ಅವರನ್ನು ಒಳ್ಳೆಯ ದಾರಿಯಲ್ಲಿ ಬೆಳೆಸಿದರೆ ಅವರು ಒಳ್ಳೆಯವರಾಗಿ ಬೆಳೆಯುವರು. ಒಳ್ಳೆಯತನವು ದೊಡ್ಡವರಾದಮೇಲೆ ಕಲಿಯುವ ಒಂದು ಗುಣವಲ್ಲ. ಅದು ಸಣ್ಣ ವಯಸ್ಸಿನಿಂದಲೂ ನಿರಂತರವಾಗಿ ಬೆಳೆಯುತ್ತಿರುವ ಒಂದು ಗುಣ.

ಸತ್ಯಕ್ಕೆ ವಿರೋಧವಾದ ಮತ್ತೊಂದು ನಂಬಿಕೆಯೂ ಇರುವುದು. ಒಬ್ಬ ಹುಡುಗನನ್ನು ಒಂದು ಪರಿಸ್ಥಿತಿಯಲ್ಲಿ ಒಳ್ಳೆಯ ಗುಣವುಳ್ಳವನನ್ನಾಗಿ ಮಾಡಿದರೆ ಅವನು ಎಲ್ಲಾ ಸನ್ನಿವೇಶಗಳಲ್ಲಿಯೂ ಒಳ್ಳೆಯವನಾಗಿಯೇ ಇರುವನೆಂದು ನಂಬುತ್ತೇವೆ. ಪರಿಶೋಧನೆಗಳ ಪ್ರಕಾರ ಈ ನಂಬಿಕೆಯು ಆಧಾರರಹಿತವಾದುದೆಂದು ತಿಳಿದುಬಂದಿದೆ. ಒಂದು ಸನ್ನಿವೇಶದಲ್ಲಿ ಸುಳ್ಳುಹೇಳಬಹುದು. ಮತ್ತೊಂದು ಸನ್ನಿವೇಶದಲ್ಲಿ ನಿಜವನ್ನು ಹೇಳಬಹುದು. ಆದುದರಿಂದ ಪ್ರತಿಯೊಂದು ಸನ್ನಿವೇಶದಲ್ಲಿಯೂ ಅದೇಗುಣವನ್ನು ತೋರ್ಪಡಿಸುವ ಹಾಗೆ ತರಬೇತು

ಕೊಡಬೇಕು. ವಯಸ್ಕರೂ ಇದನ್ನು ಗಮನದಲ್ಲಿಟ್ಟಿರಬೇಕು. ಒಂದು ಮಗು ಮತ್ತೊಂದು ಮನೆಯಿಂದ ಸಾಧಾರಣ ಆಟಿಗೆಯೊಂದನ್ನು ತೆಗೆದುಕೊಂಡು ಬಂದರೆ ತಂದೆತಾಯಿಯರು ಅದನ್ನು 'ಕಳ್ಳತನ' ಎಂದು ಎಣಿಸುವುದಿಲ್ಲ. ಅದೇ ಮಗು ಮತ್ತೊಂದುದಿವಸ ಸ್ವಲ್ಪ ಬೆಲೆಬಾಳುವ ಸಾಮಾನನ್ನು ತೆಗೆದುಕೊಂಡು ಬಂದರೆ ಆಗ ಎಚ್ಚರಗೊಂಡು 'ಕಳ್ಳತನವನ್ನೇಕೆ ಮಾಡಿದೆ?' ಎಂದು ಬೈದು ತಂದಿದ್ದ ಪದಾರ್ಥವನ್ನು ಹಿಂತಿರುಗಿಸುವರು. ಇಂತಹ ವರ್ತನೆಯು ಮಗುವಿನಲ್ಲಿ ಪ್ರಾಮಾಣಿಕತೆಯನ್ನು ಬೆಳೆಸಲಾರದು. ಪದಾರ್ಥದ ಬೆಲೆಯು ಏನೇ ಆಗಲಿ ಇನ್ನೊಬ್ಬರದನ್ನು ತಾನು ತೆಗೆದುಕೊಳ್ಳಬಾರದು ಎಂಬ ತಿಳಿವಳಿಕೆಯು ಎಲ್ಲಾ ಸನ್ನಿವೇಶಗಳಲ್ಲಿಯೂ ಬರಬೇಕು.

**ಬಹುಮಾನ ಮತ್ತು ಶಿಕ್ಷೆ**:—ನೈತಿಕವಾದ ವರ್ತನೆಯು ಮಗುವಿನಲ್ಲಿ ಉಂಟಾಗುವಂತೆಯೂ, ನೀತಿಗೆ ವಿರುದ್ಧವಾದ ವರ್ತನೆಯು ದೂರವಾಗುವಂತೆಯೂ ನೋಡಿಕೊಳ್ಳುತ್ತೇವೆ. ನಾವು ಯಾವ ಕೆಲಸವನ್ನು ಒಳ್ಳೆಯದೆಂದು ತಿಳಿಯುತ್ತೇವೆಯೋ ಅದನ್ನು ದೃಢೀಕರಿಸಲು ಮಗುವಿಗೆ ಬಹುಮಾನಗಳನ್ನು ಕೊಡುವೆವು. ಕೆಟ್ಟಕೆಲಸಗಳನ್ನು ಮಾಡಿದರೆ ಶಿಕ್ಷೆಮಾಡಿ, ಆ ಕೆಲಸಗಳನ್ನು ಬಿಡುವಹಾಗೆ ಮಾಡುವೆವು. ವರ್ತನೆಯ ಮೇಲೆ ಬಹುಮಾನ ಶಿಕ್ಷೆಗಳು ಯಾವ ಪರಿಣಾಮವನ್ನುಂಟುಮಾಡುವುವೆಂದು ಅನೇಕ ಶೋಧನೆಗಳನ್ನು ನಡೆಸಿರುವರು.

ಶಿಕ್ಷೆಯು ನೋವಿನಮೇಲೆ ಆಧಾರವಾಗಿರುವುದು. ನೋವುಂಟಾದರೆ ಆ ಕೆಲಸದಿಂದ ಮಗು ದೂರವಾಗುವುದು. ಆದುದರಿಂದ ಮಗು ಯಾವುದಾದರೂ ಕೆಟ್ಟಕೆಲಸವನ್ನು ಮಾಡಿದರೆ ಅದಕ್ಕೆ ನೋವು ಉಂಟುಮಾಡಿ ಆ ಕೆಲಸದಿಂದ ನಿವೃತ್ತನಾಗುವ ಹಾಗೆ ಮಾಡುವುದು ರೂಢಿಯಲ್ಲಿದೆ. ಮಕ್ಕಳು ಕೆಟ್ಟಕೆಲಸವನ್ನು ಮಾಡಿದರೆ ಸಾಧಾರಣವಾಗಿ ತಂದೆತಾಯಿಗಳು ಮತ್ತಾವದಾರಿಯನ್ನೂ ಕಾಣದೆ ಅವರನ್ನು ಶಿಕ್ಷಿಸುವರು. ಕೆಟ್ಟಕೆಲಸವನ್ನು ಮಾಡಿದಾಗ ಹೊಸ ಉಪಾಯಗಳನ್ನು ಯೋಚಿಸಿ ಆ ಮಗುವನ್ನು ಆ ಕೆಲಸದಿಂದ ನಿವೃತ್ತಿಮಾಡುವುದು ಕಷ್ಟವಾದುದೇ ಸರಿ. ತಕ್ಷಣ ಹೊಡೆಯುವುದು ಬಹುಸುಲಭ.

ಆದುದರಿಂದ ಸಾಧಾರಣವಾಗೆ ಮಕ್ಕಳನ್ನು ಹೊಡೆಯುವರು. ಮತ್ತೆ ಕೆಲವರು ಮಗು ಕೆಟ್ಟಕೆಲಸ ಮಾಡಿದರೆ ಕೋಪಗೊಂಡು ತಮ್ಮ ಕೋಪವನ್ನು ಪರಿಹರಿಸಿಕೊಳ್ಳಲು ಮಕ್ಕಳನ್ನು ಹೊಡೆಯುವರು. ಹೀಗೆ ಮಾಡುವುದರಿಂದ ಮಗುವಿನಲ್ಲಿ ದುಷ್ಪರಿಣಾಮಗಳುಂಟಾಗುವುವು. ಮಗುವಿನ ಮನಸ್ಸಿನಲ್ಲಿ ಕೆಟ್ಟಕೆಲಸದ ಮೇಲೆ ಜಿಗುಪ್ಸೆಯುಂಟಾಗುವುದಕ್ಕೆ ಬದಲಾಗಿ ಹೊಡೆಯುವವರ ಮೇಲೆ ಜಿಗುಪ್ಸೆಯುಂಟಾಗುವುದು. ಆದುದರಿಂದ ಎಷ್ಟೋ ಮಕ್ಕಳಿಗೆ ತಮ್ಮ ತಂದೆ ತಾಯಿಯರನ್ನೂ, ಉಪಾಧ್ಯಾಯರನ್ನೂ ಕಂಡರೆ ಜಿಗುಪ್ಸೆ ದ್ವೇಷಗಳಿರುವುವು. ಮತ್ತೊಂದು ಪರಿಣಾಮವೇನೆಂದರೆ ಮಗು ಯಾವಾಗಲೂ ಹೆದರಿಕೆಯನ್ನು ತೋರಿಸುವುದು. ಸ್ವೇಚ್ಛೆಯಾಗಿ ವರ್ತಿಸುವುದನ್ನು ಬಿಟ್ಟು ಎಲ್ಲಿ ತಪ್ಪು ಮಾಡುವೆನೋ, ಯಾವಾಗ ಏಟು ಬೀಳುವುದೋ ಎಂದು ಹೆದರಿಕೆಯಿಂದಲೇ ಜೀವಿಸುವುದು. ಇಂತಹ ಮಕ್ಕಳು ಬೆಳೆದ ಮೇಲೆ ಅವರಲ್ಲಿ ಇತರರನ್ನು ಕಂಡರೆ ಅಸಹನೆ, ಕ್ರೌರ್ಯ ಮುಂತಾದ ಭಾವನೆಗಳು ಉಂಟಾಗುವುವು. ಕಡೆಯದಾಗಿ ಒಳ್ಳೆಯ ಮಾತಿನಲ್ಲಿ ಹೇಳಿದರೆ ಅದನ್ನು ಕೇಳಿ ಒಳ್ಳೆಯ ಮಾರ್ಗವನ್ನು ಅವಲಂಬಿಸುವುದನ್ನು ಬಿಟ್ಟು ದಂಡಿಸಿದ ಮೇಲೆಯೇ ಒಳ್ಳೆಯ ಮಾರ್ಗಕ್ಕೆ ಬರುವರು. ಈ ಸ್ವಭಾವವು ಮುಂದುವರಿದು ಸಮಾಜದಲ್ಲಿ ಪೋಲೀಸರೂ ಮತ್ತು ಮ್ಯಾಜಿಸ್ಟ್ರೇಟರೂ ಆವಶ್ಯಕರಾಗಿರುವರು. ಶಿಕ್ಷೆಯು ಸಫಲವಾಗಬೇಕಾದರೆ, ಕೆಟ್ಟ ಕೆಲಸ ಮಾಡಿದ ತಕ್ಷಣವೇ, ಅದನ್ನು ಮಾಡಿದ ಒಂದೊಂದು ಸಮಯದಲ್ಲಿಯೂ, ಅದಕ್ಕೆ ಉಚಿತವಾದ ಪ್ರಮಾಣದಲ್ಲಿ, ತಮ್ಮ ಭಾವೋದ್ರೇಕಗಳ ಮೇಲೆ ಪೂರ್ಣವಾಗಿ ಹತೋಟಿಯಿಟ್ಟು ಮಗುವಿನ ಹಿತಕ್ಕೋಸ್ಕರವೇ ತಂದೆ ತಾಯಿಗಳು ಮಕ್ಕಳನ್ನು ಶಿಕ್ಷಿಸಬೇಕು. ಬೆಂಕಿಯನ್ನು ಮುಟ್ಟಿದರೆ ಅದು ಹಾನಿ ಮಾಡಿ ಆ ಮೂಲಕ ಆ ವರ್ತನೆಯನ್ನು ಮಗು ಬಿಡುವ ರೀತಿಯಲ್ಲಿ ಕೆಟ್ಟ ಕೆಲಸಗಳನ್ನು ಬಿಡುವ ಹಾಗೆ ಮಾಡಬೇಕು. ಬಹುಮಾನಗಳೂ ಹೆಚ್ಚು ಒಳ್ಳೆಯದನ್ನು ಮಾಡಲಾರವು. ಬಹುಮಾನಕ್ಕೋಸ್ಕರ ಒಂದು ಕೆಲಸವನ್ನು ಮಾಡಿದರೆ ಅಥವ ಬಿಟ್ಟರೆ ಆ ಮಗು ಬಹುಮಾನ

ವಿಲ್ಲದಿದ್ದಾಗ ತನ್ನ ಕೆಲಸವನ್ನು ಮಾಡಲಾರದು.

ಯಾವ ಕೆಲಸವನ್ನೇ ಮಾಡಬೇಕಾದರೂ ಮಗುವಿಗೆ ಆ ಕೆಲಸದ ಮೇಲೆ ಆಸಕ್ತಿಯಿರಬೇಕು. ಆ ಕೆಲಸವನ್ನು ಬಹುಮಾನದ ಆಸೆಗಾಗಲೀ ಶಿಕ್ಷೆಯ ಹೆದರಿಕೆಗಾಗಲೀ ಮಾಡುವಂತಿರಬಾರದು. ತಂದೆ ತಾಯಿಗಳೂ ಮತ್ತು ಉಪಾಧ್ಯಾಯರೂ ಮಕ್ಕಳಿಗೆ ತಮ್ಮ ಕೆಲಸಗಳಲ್ಲಿ ಆಸಕ್ತಿಯಿರುವ ಹಾಗೆ ಮಕ್ಕಳನ್ನು ತರಬೇತು ಮಾಡಬೇಕು.

ಸಾಧಾರಣವಾಗಿ ಮಕ್ಕಳಗೆ ಏನಾದರೊಂದು ಕೆಲಸ ಮಾಡಬೇಕೆಂಬ ಸಹಜ ಕುತೂಹಲವಿರುವುದು. ವಯಸ್ಸಿಗೆ ತಕ್ಕ ಹಾಗೆ ವ್ಯಕ್ತಿಯ ಬೆಳಿವಣಿಗೆಗೆ ಅನುಸಾರವಾಗಿ ಮಕ್ಕಳಿಗೆ ಕೆಲಸಗಳನ್ನು ಕಲ್ಪಿಸಿಕೊಡಬೇಕು. ಮನೆಯಲ್ಲಿಯೂ ಶಾಲೆಯಲ್ಲಿಯೂ ಅವರು ನಿರಂತರವಾಗಿ ಕೈಗಳಿಂದ ಕೆಲಸ ಮಾಡುವ ಹಾಗೆ ಸಲಕರಣೆಗಳನ್ನು ಒದಗಿಸಿಕೊಡಬೇಕು. ಆಧುನಿಕ ಶಾಲೆಗಳಲ್ಲಿ ಮಕ್ಕಳು ಒಂದು ಕಡೆ ಸುಮ್ಮನೆ ಕೂತು ಉಪಾಧ್ಯಾಯರು ಹೇಳುವುದನ್ನು ಕೇಳುವುದಲ್ಲದೆ ಶಾಲೆಯಲ್ಲಿ ಕೆಲಸಗಳನ್ನು ಮಾಡುವುದರ ಮೂಲಕ ಜ್ಞಾನಾರ್ಜನೆಯನ್ನು ಮಾಡುವ ಹಾಗೆ ಕಲ್ಪಿಸಿರುವರು. ಇದೇ ವಾರ್ಧಾ ಶಿಕ್ಷಣದ ಯೋಜನೆಯಲ್ಲಿರುವ ತತ್ತ್ವ. ಇಂತಹ ಶಿಕ್ಷಣವನ್ನು ಮನೆಯಲ್ಲಿಯೂ ಮನೆಯ ಹೊರಗೂ ಮಗುವಿಗೆ ಲಭಿಸಿದರೆ ತನ್ನ ಕೆಲಸಗಳಲ್ಲಿ ಆಸಕ್ತಿ ಹುಟ್ಟುವುದು ಬಹುಮಾನ–ಶಿಕ್ಷೆಗಳ ಆಸೆ–ಭಯಗಳು ಹೋಗಿ ಕರ್ತವ್ಯದ ಅರಿವು ಉಂಟಾಗುವುದು.

ಸಮಾಜವು ಉನ್ನತ ಸ್ಥಿತಿಗೆ ಬರಬೇಕಾದರೆ ಪ್ರತಿಯೊಂದು ವ್ಯಕ್ತಿಯೂ ಆತ್ಮಗೌರವಕ್ಕಾಗಿಯೂ, ಇತರರ ಹಿತಕ್ಕಾಗಿಯೂ, ನೈತಿಕ ಮಾರ್ಗವನ್ನು ಅವಲಂಬಿಸಬೇಕು. ಇತರರ ಹೆದರಿಕೆಗಾಗಲೀ, ಕಾನೂನಿನ ಭಯಕ್ಕಾಗಲೀ ನೆರೆಹೊರೆಯರ ದೂಷಣೆಗಾಗಲೀ ಅಥವ ಸನ್ಮಾನ ಹೊಗಳಿಕೆಗೋಸ್ಕರವಾಗಲೀ ಜನರು ಧರ್ಮವನ್ನು ಅವಲಂಬಿಸಿದರೆ ಆ ಸಮಾಜವು ಉನ್ನತ ಸ್ಥಿತಿಯನ್ನು ಪಡೆಯುವುದಿಲ್ಲ. ತಮ್ಮ ಕರ್ತವ್ಯವನ್ನು ಆತ್ಮಸಾಕ್ಷಿಯಾಗಿ ಮಾಡುವ ಹಾಗೆ ತಂದೆ ತಾಯಿಗಳೂ ಉಪಾಧ್ಯಾಯರೂ ಚಿಕ್ಕ ವಯಸ್ಸಿನಿಂದಲೂ ಮಕ್ಕಳಿಗೆ ಶಿಕ್ಷಣ ಕೊಡಬೇಕು.

# ಅಧ್ಯಾಯ ೧೨

## ಶೀಲ ರಚನೆ

**" ಶೀಲಂ ಪರಂ ಭೂಷಣಂ "**

ಈ ಅಧ್ಯಾಯದಲ್ಲಿ ಮನಶ್ಶಾಸ್ತ್ರವು ಮಕ್ಕಳನ್ನು ಉತ್ತಮರೀತಿ ಯಿಂದ ಬೆಳೆಸಲು ಎಂತಹ ಸಹಾಯಮಾಡುವುದೆಂದು ವಿವರಿಸಲಾ ಗಿದೆ. ಮೇಲಿನ ಅಧ್ಯಾಯಗಳಲ್ಲಿ ಮಕ್ಕಳ ಒಂದೊಂದು ಅಂಶವೂ ಹೇಗೆ ಬೆಳೆಯುವುದು ಎಂಬುದನ್ನು ನೋಡಿರುವೆವು. ಈಗ ಮಕ್ಕಳ ಕೆಲವು ವರ್ತನ ಸಮಸ್ಯೆಗಳನ್ನು ಮನಶ್ಶಾಸ್ತ್ರದ ಸಹಾಯದಿಂದ ಹೇಗೆ ಬಗೆಹರಿಸಬಹುದೆಂಬುದನ್ನು ನೋಡೋಣ. ಮಕ್ಕಳಲ್ಲಿ ಒಳ್ಳೆಯ ನಡತೆಯನ್ನುಂಟುಮಾಡಲು ಮನಶ್ಶಾಸ್ತ್ರವು ಎರಡುವಿಧವಾಗಿ ಸಹಾ ಯಮಾಡುವುದು. ಅಭ್ಯಾಸಗಳನ್ನು ಹೇಗೆ ಕಲಿಸಬೇಕೆಂಬ ಜ್ಞಾನ ವನ್ನೂ ಮತ್ತು ಕೆಲವು ವಿಶೇಷ ವರ್ತನೆಗಳ ಸಮಸ್ಯೆಗಳ ತಿಳುವಳಿಕೆ ಯನ್ನೂ ಒದಗಿಸಿರುವುದು.

### ಅಭ್ಯಾಸಕ್ರಮದ ಕೆಲವು ನಿಯಮಗಳು

#### ಪಕ್ವತೆ

ಒಂದು ಅಭ್ಯಾಸವನ್ನು ಮಗುವಿಗೆ ಕಲಿಸಬೇಕಾದರೆ ಅದರ ಬೆಳೆವಣಿಗೆಯ ಮಟ್ಟವನ್ನು ತಿಳಿದುಕೊಳ್ಳಬೇಕಾದುದು ಅಗತ್ಯ. ಬೆಳೆವಣಿಗೆಯ ಮಟ್ಟವನ್ನು ಅನುಸರಿಸಿ ಅಭ್ಯಾಸಗಳನ್ನು ಕಲಿಸುವುದು ಅಗತ್ಯವೆಂದು ಗೆಸೆಲ್ ಮುಂತಾದವರ ಪರಿಶೋಧನೆಗಳಿಂದ ಸ್ಪಷ್ಟ ವಾಗಿದೆ.[1] ಪಕ್ವತೆಯನ್ನು ಹೊಂದುವುದಕ್ಕೆ ಮುಂಚೆಯೇ ಒಂದು ಅಭ್ಯಾಸವನ್ನು ಕಲಿಸಿಕೊಡುವುದು ಬಹಳ ಪ್ರಯಾಸ. ಈ ಪ್ರಯಾ ಸವೂ ವ್ಯರ್ಥವಾಗುವುದು. ಏಕೆಂದರೆ ಅದೇ ಅಭ್ಯಾಸವನ್ನು ಮಗು

---

1. ೧೧೮ನೆಯ ಪುಟವನ್ನು ನೋಡಿ.

ಸ್ವಲ್ಪ ಬೆಳೆದ ಮೇಲೆ ಅನಾಯಾಸವಾಗಿ ಕಲಿತುಬಿಡುವುದು. ಆದುದರಿಂದ ಮಕ್ಕಳ ಬೆಳೆವಣಿಗೆಯ ಕ್ರಮವನ್ನು ಜಾಗರೂಕತೆಯಿಂದ ಗಮನಿಸಿ ಅಭ್ಯಾಸಗಳನ್ನು ಕಲಿಸಿಕೊಡುವುದು ಅತ್ಯಗತ್ಯ.

## ವೈಯಕ್ತಿಕ ವ್ಯತ್ಯಾಸಗಳು

ಒಂದೊಂದು ಮಗುವಿನ ಕಲಿಯುವ ಸಾಮರ್ಥ್ಯವೂ ಬೇರೆಬೇರೆಯಾಗಿರುವುದು. ಈ ಅಂಶವನ್ನು ಗಮನದಲ್ಲಿಟ್ಟುಕೊಳ್ಳದೆಹೋದರೆ ನಿರಾಶೆ ಕೋಪಗಳಿಗೆ ಒಳಗಾಗುವೆವು. ಒಂದೊಂದು ವಯಸ್ಸಿನಲ್ಲಿಯೂ ಒದೊಂದು ಶಕ್ತಿಯು ಒಂದು ಗೊತ್ತಾದ ರೀತಿಯಿಂದ ಬೆಳೆಯುತ್ತ ಬಂದರೂ ಆ ವಯಸ್ಸಿನ ಎಲ್ಲಾ ಮಕ್ಕಳಲ್ಲಿಯು ಆಶಕ್ತಿಯು ಅಷ್ಟೇ ಪ್ರಮಾಣದಲ್ಲಿ ಇರುವುದೆಂದು ಹೇಳಲಾಗುವುದಿಲ್ಲ. ಹಿಂದಿನ ಅಧ್ಯಾಯಗಳಲ್ಲಿ ಕೊಟ್ಟಿರುವ ಅಂಕಿ ಅಂಶಗಳು[1] ಗುಂಪಿನ ಸರಾಸರಿಯನ್ನು ತೋರಿಸುವುವೇ ಹೊರತು ಒಂದೊಂದು ವ್ಯಕ್ತಿಯಲ್ಲಿಯೂ ಆಶಕ್ತಿಯು ಸರಾಸರಿಯ ಪ್ರಮಾಣದಲ್ಲಿಯೇ ಇರುವುದೆಂದು ಹೇಳಲಾಗುವುದಿಲ್ಲ. ಈ ವೈಯಕ್ತಿಕ ವ್ಯತ್ಯಾಸಗಳು ಸಹಜವಾದುವು. ಒಂದು ಮಗು ಹಿಂದುಳಿದರೆ ನಿರಾಶೆಪಡಬೇಕಾದ ಆವಶ್ಯಕತೆಯಿಲ್ಲ. ಆ ಮಗುವಿನ ಬುದ್ಧಿಶಕ್ತಿಯನ್ನೂ ಮತ್ತು ಇತರ ಸಾಮರ್ಥ್ಯಗಳನ್ನೂ ಅನುಸರಿಸಿ ಕಲಿಯುವಿಕೆಯು ಮುಂದುವರಿಯುಉದು.

## ಫಲಾಸಕ್ತಿ

ಯಾವ ಅಭ್ಯಾಸವನ್ನು ಕಲಿಯಬೇಕಾದರೂ ಅದರಿಂದ ಮಗುವಿಗೆ ಒಂದು ಫಲ ಲಭಿಸಬೇಕು. ಹೆದರಿಕೆ ನೋವು ಶಿಕ್ಷೆ ಮುಂತಾದ ಕಾರಣಗಳು ಕಲಿಯುವಿಕೆಯನ್ನು ಅಷ್ಟು ಸರಾಗವಾಗಿ ಮುಂದಕ್ಕೆ ಒಯ್ಯಲಾರವು.[2] ಬಹುಮಾನ, ಹೊಗಳಿಕೆ, ಸಂತೋಷ, ಕಾರ್ಯಸಾಧನೆ

---

೧. ೪ನೆಯ ಪಟ್ಟಿಯನ್ನು ನೋಡಿ. ಪುಟ ೧೦೯.

೨. ೭ನೆಯ ಅಧ್ಯಾಯವನ್ನು ನೋಡಿ.

ಮಾಡಿದ ಹೆಮ್ಮೆ ಮುಂತಾದ ಗುರಿಗಳು ಅಭ್ಯಾಸಗಳನ್ನು ಬೇಗ ಮತ್ತು ಉತ್ತಮ ರೀತಿಯಿಂದ ಕಲಿಯುವಹಾಗೆ ಮಾಡುವುವು. ಮತ್ತು ಹೀಗೆ ಕಲಿತ ಗುಣಗಳು ಚಿರಕಾಲವಿರುವುವು.

## ಜಯ ಅಪಜಯ

ಪದೇಪದೇ ಒಂದು ಕೆಲಸದಲ್ಲಿ ಅಪಜಯಗಳು ಬಂದರೆ ಆ ಕೆಲಸವನ್ನು ಕಲಿಯುವುದು ಕಷ್ಟ. ಕೆಲಸವು ಸಫಲವಾದರೆ ಉತ್ಸಾಹವು ಹೆಚ್ಚಿ ಕಲಿಯುವಿಕೆಯ ವೇಗವು ಅಧಿಕವಾಗುವುದು. ಅದುದರಿಂದ ಮಗು ಯಾವಕಾರ್ಯವನ್ನು ಆ ವಯಸ್ಸಿನಲ್ಲಿ ತಕ್ಕಷ್ಟುಮಟ್ಟಿನ ಶ್ರಮದಿಂದ ಉತ್ತೀರ್ಣಗೊಳ್ಳುವುದೋ ಅಂತಹ ಕೆಲಸಗಳನ್ನು ಮಾತ್ರ ಮಾಡುವಂತೆ ನಿಯಮಿಸಬೇಕು. ಶಕ್ತಿಗೆ ಮೀರಿದ ಕಷ್ಟದ ಕೆಲಸಗಳನ್ನು ಕೊಟ್ಟರೆ ಅಪಜಯವನ್ನು ಹೊಂದಿ ಮಕ್ಕಳು ನಿರಾಶೆ ಹೊಂದುವರು.

## ಸ್ವಪ್ರಯತ್ನ

ಒಂದು ಕಲಸವನ್ನು ಉತ್ತಮರೀತಿಯಿಂದ ಕಲಿಯಬೇಕಾದರೆ ಇತರರ ಸಹಾಯವನ್ನು ಆದಷ್ಟುಕಡಿಮೆಯಾಗಿ ಪಡೆದು ತನ್ನ ಪ್ರಯತ್ನದಿಂದಲೇ ಕಾರ್ಯವನ್ನು ಸಾಧಿಸಬೇಕು. ಮಗುವಿಗೆ ತಂದೆತಾಯಿಗಳು ಅಥವಾ ಉಪಾಧ್ಯಾಯರು ಧಾರಾಳಹೃದಯದಿಂದ ಸಹಾಯವನ್ನು ನೀಡಿ ಅದರ ಕೈಯಿಂದ ಕೆಲಸ ಮಾಡಿಸಿದರೆ ಅದರಿಂದ ಮಗುವಿಗೆ ಏನೂ ಲಾಭವಿಲ್ಲ. ಒಂದು ಕೆಲಸವನ್ನು ಕಲಿಯುವುದು ಆ ಕೆಲಸವನ್ನು ಮಾಡುವುದರ ಮೂಲಕ. ಯಾವ ಕೆಲಸವನ್ನು ಸ್ವಪ್ರಯತ್ನದಿಂದ ಮಾಡುವೆವೋ ಅದನ್ನೇ ನಾವು ಕಲಿಯುವುದು.

## ನಿಪುಣತೆಯ ವ್ಯಾಪಕತೆ

ಒಂದು ಅಂಶದಲ್ಲಿ ನಿಪುಣತೆಯನ್ನು ಪಡೆದರೆ ಆ ನಿಪುಣತೆಯು ಇನ್ನೂ ಇತರ ಅಂಶಗಳಲ್ಲಿ ತೋರ್ಪಡಿಸಿಕೊಳ್ಳುವುದೆಂದು ಸಾಧಾರಣವಾಗಿ ಹೇಳುವುದುಂಟು. ತನ್ನ ಉಡುಪುಗಳನ್ನು ಜಾಗರೂಕತೆಯಿಂದ ನೋಡಿಕೊಳ್ಳುವ ಮಗು ತನ್ನ ಆಟದ ಸಾಮಾನುಗಳನ್ನೂ ಮನೆಯ ಸಾಮಾನುಗಳನ್ನೂ ಸಾರ್ವಜನಿಕ ಸಾಮಾನುಗಳನ್ನೂ

ಜಾಗರೂಕತೆಯಿಂದ ನೋಡಿಕೊಳ್ಳಬಹುದೆಂದು ಯೋಚಿಸುವುದು ನಿರಾಧಾರವಾದುದೆಂದು ಅನೇಕ ಪರಿಶೋಧನೆಗಳಿಂದ ತಿಳಿದು ಬಂದಿದೆ. ನಿಪುಣತೆಯು ಕಲಿತಿರುವ ಅಂಶಕ್ಕೆ ಮಾತ್ರ ಅನ್ವಯಿಸು ವುದು. ಇನ್ನಿತರ ಅಂಶಗಳಿಗೆ ಅನ್ವಯಿಸುವುದಿಲ್ಲ. ಇನ್ನಿತರ ಅಂಶ ಗಳಿಗೆ ಹರಡಬೇಕಾದರೆ, ಕಲಿತ ಅಂಶಗಳಲ್ಲಿಯೂ ಇನ್ನಿತರ ಅಂಶ ಗಳಲ್ಲಿಯೂ ಸಾಮಾನ್ಯ ಲಕ್ಷಣಗಳಿರಬೇಕು. ಒಂದು ಸಣ್ಣ ಪ್ರಯೋ ಗವನ್ನು ಉದಾಹರಣೆಗಾಗಿ ಕೊಡಬಹುದು, ಒಬ್ಬ ಲೆಕ್ಕದ ಉಪಾಧ್ಯಾಯರು ಲೆಕ್ಕಗಳನ್ನು ಅಚ್ಚುಕಟ್ಟಾಗಿ ಮಾಡುವುದನ್ನು ಮಕ್ಕಳಿಗೆ ಹೇಳಿಕೊಟ್ಟರು. ಆ ಮಕ್ಕಳು ತಮ್ಮ ಲೆಕ್ಕದ ನೋಟು ಪುಸ್ತಕಗಳನ್ನು ಜಾಗರೂಕತೆಯಿಂದ ಉಪಯೋಗಿಸಿಕೊಂಡು ಅಚ್ಚು ಕಟ್ಟಾಗಿ ಇಟ್ಟುಕೊಂಡಿದ್ದರು. ಆದರೆ ಇನ್ನಿತರ ವಿಷಯಗಳ ನೋಟು ಪುಸ್ತಕಗಳಲ್ಲಿ ಸಿಕ್ಕಾಬಟ್ಟೆ ಬರೆಯುತ್ತಿದ್ದರು. ಲೆಕ್ಕದ ಉಪಾಧ್ಯಾ ಯರು ಕಲಿಸಿಕೊಟ್ಟ ಅಚ್ಚುಕಟ್ಟು ಇತರ ವಿಷಯಗಳಿಗೆ ಹರಡಲಿಲ್ಲ. ಇದನ್ನು ಕಂಡು ಮತ್ತೊಬ್ಬ ಉಪಾಧ್ಯಾಯರು ಜೀವನದ ಎಲ್ಲಾ ಅಂಶಗಳಲ್ಲಿಯೂ ಅಚ್ಚುಕಟ್ಟಾಗಿರುವುದನ್ನು ಒತ್ತಿಹೇಳಿ ಯಾವತರಗತಿ ಯಲ್ಲಿಯೇ ಆಗಲೀ, ಸಿಕ್ಕಾಬಟ್ಟೆ ತಮ್ಮ ಪುಸ್ತಕದಲ್ಲಿ ಬರೆಯುವ ಹುಡುಗರನ್ನು ತಿದ್ದುತ್ತಿದ್ದರು. ಈ ಕಾರಣದಿಂದ ಸ್ವಲ್ಪಕಾಲ ದಲ್ಲಿಯೇ ಹುಡುಗರು ತಮ್ಮ ಎಲ್ಲಾ ಪುಸ್ತಕಗಳನ್ನೂ ಅಚ್ಚುಕಟ್ಟಾಗಿ ಟ್ಟುಕೊಳ್ಳುವುದನ್ನು ಕಲಿತರು.

## ಪ್ರತ್ಯಕ್ಷಶಿಕ್ಷಣದ ಆವಶ್ಯಕತೆ

ಅಭ್ಯಾಸವನ್ನು ಮುಂದೆ ಯಾವ ಸನ್ನಿವೇಶದಲ್ಲಿ ಸಾಧಾರಣ ವಾಗಿ ಹೇಗೆ ಉಪಯೋಗಿಸುತ್ತೇವೆಯೋ ಹಾಗೆ ಅದನ್ನು ಕಲಿಯ ಬೇಕು. ಒಂದು ಬಾಲಕರ ಸಂಘದಲ್ಲಿ. ಒಂದು ಸ್ವಯಂಸೇವಕರ ದಳವನ್ನು ನಿರ್ಮಿಸಿದರು. ಮುಂದಾಳುಗಳು ಸ್ವಯಂಸೇವಕರು ಹೇಗೆ ವರ್ತಿಸಬೇಕೆಂದು ಭಾಷಣಗಳ ಮೂಲಕ ಶಿಕ್ಷಣಕೊಟ್ಟರು. ಇದಾದ ಒಂದುವಾರಕ್ಕೆ ಆ ಮೊಹಲ್ಲಾದಲ್ಲಿ ಒಂದು ಸಭೆ ನಡೆಯಿತು. ಅಲ್ಲಿಗೆ ಇತರ ಮೊಹಲ್ಲಾಗಳಿಂದ ಅನೇಕ ದೊಡ್ಡ ಮನುಷ್ಯರು

ಆಹ್ವಾನಿಸಲ್ಪಟ್ಟರು. ಈ ಸ್ವಯಂಸೇವಕ ದಳಕ್ಕೆ ಸೇರಿದವರೂ ಆ ಸಭೆಗೆ ಪ್ರೇಕ್ಷಕರಾಗಿ ಬಂದಿದ್ದರು. ಸಹಜಗುಣವೇ ಮೇಲಾಗಿ ಇವರೆಲ್ಲರೂ ಒಬ್ಬರಮೇಲೊಬ್ಬರು ಬಿದ್ದು ಅಲ್ಲಿದ್ದ ಕುರ್ಚಿಗಳನ್ನೆಲ್ಲಾ ಆಕ್ರಮಿಸಿಕೊಂಡರು. ಸಭೆಗೆ ಬಂದ ದೊಡ್ಡಮನುಷ್ಯರನೇಕರಿಗೆ ಕುಳಿತುಕೊಳ್ಳಲು ಸ್ಥಳವಿಲ್ಲದೆ ನಿಂತುಕೊಳ್ಳಬೇಕಾದ ಸಂದರ್ಭ ಒದಗಿತು. ತಾವು ಸ್ವಯಂಸೇವಕರಂತೆ ವರ್ತಿಸಬೇಕೆಂದು ಭಾಷಣ ಗಳ ಮೂಲಕ ಶಿಕ್ಷಣ ಪಡೆದಿದ್ದರೂ ಮುಂದಾಳುಗಳು ಸಭೆಯಲ್ಲಿ ನಿಂತು ಅವರಿಗೆ ಪ್ರತ್ಯಕ್ಷ ಶಿಕ್ಷಣವನ್ನು ಕೊಡದಿದ್ದುದರಿಂದ ಅವರ ಶಿಕ್ಷಣಕ್ಕೂ, ಅವರ ಪ್ರತ್ಯಕ್ಷ ನಡೆವಳಿಕೆಗೂ ಏನೇನೂ ಸಂಬಂಧವಿಲ್ಲ ವಾಯಿತು. ಒಂದು ಸನ್ನಿವೇಶದಲ್ಲಿ ಮಗು ಸರಿಯಾಗಿ ವರ್ತಿಸದೇ ಹೋದರೆ "ನಾನು ಆಹೊತ್ತು ಹೇಳಿದ್ದನ್ನು ಮರೆತು ಹೀಗೇಕೆ ನಡೆದುಕೊಂಡೆ" ಎಂದು ಗದರಿಸಿದರೆ ಅದರಿಂದ ಯಾವ ಲಾಭವೂ ಇಲ್ಲ. ಆ ಸನ್ನಿವೇಶದಲ್ಲಿಯೇ ನಡೆವಳಿಕೆಯನ್ನು ತಿದ್ದಬೇಕು.

## ಪುನರಾವರ್ತನೆಯ ಪ್ರಭಾವ

ಯಾವ ವರ್ತನೆಯು ಅನಿಷ್ಟವಾದುದೋ ಅದರ ಪುನರಾವರ್ತ ನೆಯು ಆಗದಿರುವ ಹಾಗೆ ನೋಡಿಕೊಳ್ಳಬೇಕು. ಒಳ್ಳೆಯ ನಡೆವಳಿಕೆ ಗಳಾಗಲೀ, ಪದೇಪದೇ ಅವುಗಳನ್ನು ಮಾಡುತ್ತಿದ್ದರೆ, ಅವು ಚೆನ್ನಾಗಿ ಬೇರೂರುವುವು. ಪುನರಾವರ್ತನೆಯು ಅಭ್ಯಾಸಕ್ರಮದ ಒಂದು ಮುಖ್ಯ ಅಂಶ. ಆದುದರಿಂದ ಅನಿಷ್ಟವರ್ತನೆಯನ್ನು ಕಂಡಕೂಡಲೇ ಅದನ್ನು ತಿದ್ದಿ ಅದು ಮತ್ತೆ ತಲೆದೋರದೆ ಇರುವಹಾಗೆ ನೋಡಿಕೊಳ್ಳ ಬೇಕು. "ಪಾಪ, ಮಗು, ಬೆಳೆದಮೇಲೆ ಎಲ್ಲವೂ ಸರಿಹೋಗುವುದು" ಎಂದು ಉಪೇಕ್ಷೆಮಾಡಿದರೆ ಆ ಕೆಟ್ಟನಡತೆಯು ಬೇರೂರಿ ಮುಂದಕ್ಕೆ ತೊಂದರೆಯನ್ನುಂಟುಮಾಡುವುದು. ಇತರರ ವಿಚಿತ್ರವರ್ತನೆಯನ್ನು ಅಣಕಿಸುವುದಕ್ಕೋಸ್ಕರ ಪದೇಪದೇ ಅದನ್ನು ಅವಲಂಬಿಸಿದರೆ ಕಡೆಗೆ ಅದೇ ದುರಭ್ಯಾಸವು ಅಣಕಿಸುವವರಲ್ಲಿಯೂ ಉಂಟಾಗುವುದು. ಒಳ್ಳೆಯ ನಡೆವಳಿಕೆಯು ನೆಲಸಬೇಕಾದರೆ ಆ ನಡೆವಳಿಕೆಯು ಪುನಃ ಪುನಃ ಸಂಭವಿಸುವಂತೆಯೂ, ಕೆಟ್ಟನಡೆವಳಿಕೆಯು ದೂರವಾಗಬೇ

ಕಾದರೆ ಅದು ಮತ್ತೊಮ್ಮೆ ಉಂಟಾಗದಂತೆಯೂ ನೋಡಿಕೊಳ್ಳಬೇಕಾದುದು ಅತ್ಯಾವಶ್ಯಕ.

## ಬಹುಮಾನ ಶಿಕ್ಷೆಗಳು

ಮೇಲಿನ ಅಧ್ಯಾಯದಲ್ಲಿ ಹೇಳಿರುವಂತೆ, ಬಹುಮಾನ ಶಿಕ್ಷೆಗಳ ಮೂಲಕ ಒಂದು ಅಭ್ಯಾಸವನ್ನು ಕಲಿಸುವುದಾದರೆ,[1] ಆ ಬಹುಮಾನ ಶಿಕ್ಷೆಗಳು ವರ್ತನೆಗೆ ಹೊರಗಿನ ಅಂಶವಾಗದೆ ಆ ಕಲಸದಿಂದಲೇ ಉತ್ಪನ್ನವಾಗುವ ಹಾಗೆ ಇರಬೇಕು. ಹುಡುಗನು ಚೆನ್ನಾಗಿ ಓದಿದರೆ, ಅವನಿಗೆ ಹಣ ಮುಂತಾದ ಬಹುಮಾನವನ್ನು ಕೊಡುವುದಕ್ಕಿಂತಲೂ ಹೊಸ ಪುಸ್ತಕವೊಂದನ್ನು ಬಹುಮಾನವಾಗಿ ಕೊಡುವುದು ಉತ್ತಮವಾದುದು. ಇದಕ್ಕಿಂತಲೂ ಉತ್ತಮ ಮಾರ್ಗವೆಂದರೆ ತಂದೆ ತಾಯಿಗಳೂ ಉಪಾಧ್ಯಾಯರೂ ಸಂತೋಷಪಟ್ಟು ಅವನು ಆ ಕೆಲಸದಲ್ಲಿ ಹೆಚ್ಚಿನ ಯೋಗ್ಯತೆಯನ್ನು ಪಡೆಯಲು ತಕ್ಕ ಏರ್ಪಾಡು ಮಾಡುವುದು.

## ಆಸಕ್ತಿ ಶ್ರದ್ಧೆಗಳು

ಮಗು ಒಂದು ಕೆಲಸವನ್ನು ಚೆನ್ನಾಗಿ ಕಲಿಯಬೇಕಾದರೆ, ಆ ಕೆಲಸದಲ್ಲಿ ಆಸಕ್ತಿ-ಶ್ರದ್ಧೆಗಳುಂಟಾಗುವಂತೆ ಮಾಡುವುದು ಆವಶ್ಯಕ. ಇತರರ ಪ್ರೋತ್ಸಾಹಕ್ಕೂ, ಹೆದರಿಕೆಗೂ, ತನಗೆ ಇಷ್ಟವಿಲ್ಲದ ಕೆಲಸಗಳನ್ನು ಕಲಿಯುವುದು ಬಹಳ ನಿಧಾನ. ಅಂತಹ ಕೆಲಸಗಳಲ್ಲಿ ಪ್ರವೀಣತೆಯನ್ನು ಹೊಂದುವುದಂತೂ ಅಸಾಧ್ಯವೇ ಸರಿ. ಮಗು ತಾನು ಮಾಡುವ ಕೆಲಸದಿಂದ ಸಂತೋಷ ತೃಪ್ತಿಗಳನ್ನು ಪಡೆದರೆ ಆ ಕೆಲಸದಲ್ಲಿ ಆಸಕ್ತಿಯನ್ನು ತೋರಿಸುವುದು. ಆದುದರಿಂದ ಯಾವ ಅಭ್ಯಾಸವನ್ನು ಮಕ್ಕಳಿಗೆ ಕಲಿಸ ಬಯಸುವೆವೋ ಆ ಕೆಲಸದ ಮೂಲಕ ಮಕ್ಕಳಿಗೆ ಸಂತೋಷ ತೃಪ್ತಿಗಳುಂಟಾಗುವ ಹಾಗೆ ನೋಡಿಕೊಳ್ಳಬೇಕು.

ಮಗುವಿಗೆ ತರಬೇತು ಕೊಡುವಾಗ ಮಗುವಿನ ಹಿತವನ್ನು ಗುರಿಯಲ್ಲಿಟ್ಟಿರಬೇಕು. ಮಗು ಯಾವ ಅಂಶವನ್ನು ಕಲಿಯಬೇಕೆಂದು ಬಯಸುವುದೋ ಅದನ್ನು ಕಲಿಯದಿದ್ದರೆ, ಯಾವ ಕಾರಣದಿಂದ

---

1 ೨೩೭ ನೆಯ ಪುಟವನ್ನು ನೋಡಿ.

ಕಲಿಯಲಿಲ್ಲವೆಂದು ವಿಮರ್ಶಿಸಿ, ಹೊಸ ರೀತಿಗಳನ್ನವಲಂಬಿಸಿ ಆ ಅಭ್ಯಾಸಗಳನ್ನೇ ಪಡೆಯುವ ಹಾಗೆ ಮಾಡಬೇಕು. ಆದರೆ ಎಷ್ಟೊಂದು ತಂದೆ ತಾಯಿಗಳು ಈ ಮಾರ್ಗವನ್ನು ಅವಲಂಬಿಸುವರು? ಸಾಧಾರಣವಾಗಿ ಮಗು ಕಲಿಯದೆ ಹೋದರೆ, ತಮ್ಮ ಆತ್ಮಗೌರವಕ್ಕೆ ಕುಂದಕವೆಂದು ತಿಳಿದು ಕೋಪಗೊಂಡು, ಮಗುವನ್ನು ಗೋಳಾಡಿಸುವರು. ಯಂತ್ರವು ಸರಿಯಾಗಿ ನಡೆಯದೆ ಹೋದರೆ, ಅದರ ಮೇಲೆ ರೇಗಿ ಬೀಳುವುದು ಉಚಿತವೇ? ಯಂತ್ರವು ಯಾವ ಕಾರಣದಿಂದ ನಡೆಯುವುದಿಲ್ಲವೆಂದು ವಿಮರ್ಶಿಸಿ, ಹೇಗೆ ಅದನ್ನು ಸರಿಪಡಿಸಬೇಕೆಂಬುದನ್ನು ಯೋಚಿಸಿ, ಮುಂದಿನ ಕಾರ್ಯಗಳನ್ನು ಕೈಗೊಳ್ಳುವರು. ಮಕ್ಕಳಾಗಲೀ ದೊಡ್ಡವರಾಗಲೀ, ಅನಿಷ್ಟ ವರ್ತನವನ್ನೂ ಹಾನಿಕಾರಕ ವರ್ತನವನ್ನು ತೋರಿದಾಗ, ಯಾವ ಕಾರಣದಿಂದ ಅವರು ಹೀಗೆ ವರ್ತಿಸುವರೆಂದು ಯೋಚಿಸಿ, ಅದನ್ನು ಹೇಗೆ ಸರಿಪಡಿಸಬಹುದೆಂದು ನಿರ್ಧರಿಸಿ, ತಕ್ಕ ಹಾಗೆ ನೋಡಿಕೊಳ್ಳುವುದು ಲೇಸಲ್ಲವೇ? ಇದನ್ನು ಬಿಟ್ಟು, ಕುರ್ಚಿಯ ಮೇಲಿ ಬಿದ್ದು ನೋವನ್ನುಂಟುಮಾಡಿಕೊಂಡ ಮಗು ಕುರ್ಚಿಯ ಮೇಲೆ ರೇಗಿ ಅದನ್ನು ಹೊಡೆಯುವಂತೆ, ದೊಡ್ಡವರಲ್ಲಿ ಎಷ್ಟೋಮಂದಿ ಇತರರು ತಮಗೆ ಹಾನಿಯುಂಟಾಗುವಂತೆ ವರ್ತಿಸಿದರೆ ಅಥವಾ ತಮ್ಮ ಇಷ್ಟಾನುಸಾರವಾಗಿ ವರ್ತಿಸದೆ ಹೋದರೆ ಅವರ ಮೇಲೆ ರೇಗಿ ಬೀಳುವರು. ಇದು ಸರಿಯಲ್ಲ.

## ಏಕಪದ್ಧತಿ

ಮಕ್ಕಳನ್ನು ತಿದ್ದುವಾಗ ಏಕಪದ್ಧತಿಯನ್ನು ತಂದೆ ತಾಯಿಗಳೂ ಉಪಾಧ್ಯಾಯರೂ ಅನುಸರಿಸಬೇಕು. ಒಂದು ವರ್ತನವು ಸರಿಬೀಳದೆ ಹೋದರೆ, ಆ ವರ್ತನವನ್ನು ತೋರಿಸಿದ ಒಂದೊಂದು ಸಮಯದಲ್ಲಿಯೂ ಅಸಹ್ಯವನ್ನು ತೋರಿಸಬೇಕು. ಒಂದೇ ವರ್ತನೆಗೆ ಒಂದು ಸಮಯದಲ್ಲಿ ಒಪ್ಪಿಗೆಯನ್ನು ತೋರಿಸುವುದು; ಮತ್ತೊಂದು ಸಮಯದಲ್ಲಿ ಅಸಹ್ಯವನ್ನು ತೋರಿಸುವುದು ಬಹಳ ಅನುಚಿತ. ಈ ರೀತಿಯಾದ ಭಿನ್ನ ವರ್ತನೆಯು ಮಗುವಿನ ಮನಸ್ಸಿನಲ್ಲಿ ಒಳತೋಟಿಯನ್ನುಂಟುಮಾಡಿ ಹೆದರಿಕೆಗೆ ಕಾರಣವಾಗುವುದು. ಮಗು ಸ್ವತಂತ್ರ

ವಾಗಿ ವರ್ತಿಸುವುದನ್ನು ಬಿಟ್ಟು ಯಾವಾಗಲೂ ಅಂಜಿಕೊಂಡಿರುವುದು. ಏಕ ಪದ್ಧತಿಯನ್ನನುಸರಿಸದೆ, ಭಿನ್ನಭಿನ್ನವಾದ ಅಭಿಪ್ರಾಯವನ್ನು ಸೂಚಿಸಿದರೆ ಕೊನೆಗೆ ಹದಗೆಟ್ಟ ಮಕ್ಕಳಾ (ಪ್ರಾಬ್ಲಮ್ ಚಿಲ್ಡ್ರನ್) ಗುವರು. ಮೇಲೆ ಹೇಳಿರುವ ಅಭ್ಯಾಸಕ್ರಮದ ತತ್ವಗಳನ್ನು ಮನಸ್ಸಿನಲ್ಲಿಟ್ಟುಕೊಂಡು ಮಕ್ಕಳ ಪೋಷಣೆಯನ್ನು ಮಾಡಬೇಕು. ಆಗ ಅವರ ಬೆಳವಣಿಗೆಯು ಸುಗಮವಾಗಿ ಮುಂದುವರಿಯುವುದು; ಶೀಲವಂತರಾಗಿ, ಆತ್ಮಸುಖವನ್ನು ಹೊಂದಿ, ಸಮಾಜದ ಹಿತಕಾರಿಗಳಾಗಿ ದೇಶದ ಸತ್ಪ್ರಜೆಗಳಾಗಿ ಬಾಳುವರು.

ಇನ್ನು ಮುಂದೆ ಮಕ್ಕಳ ಸಾಮಾನ್ಯ ನಡತೆಗಳನ್ನು ಕುರಿತು ಮನಶ್ಶಾಸ್ತ್ರದ ಮೂಲಕ ನಮಗೆ ದೊರಕಿರುವ ತಿಳಿವಳಿಕೆಯನ್ನು ಸ್ವಲ್ಪಮಟ್ಟಿಗೆ ಸಂಗ್ರಹಿಸಲಾಗಿದೆ.

## ನಿದ್ದೆ

ಮೇಲಿನ ಅಧ್ಯಾಯದಲ್ಲಿ ಮಕ್ಕಳು ಹುಟ್ಟಿದ ಮೊದಲನೆಯ ವರ್ಷದಲ್ಲಿ ಬಹಳ ಹೆಚ್ಚುಕಾಲ ನಿದ್ದೆಮಾಡಿ ಬೆಳೆಯುತ್ತ ಬೆಳೆಯುತ್ತ ಹೆಚ್ಚುಕಾಲ ಎಚ್ಚರದಿಂದಿರುವರೆಂದು ನೋಡಲಾಯಿತು.[1] ಮತ್ತೊಂದು ಪರಿವರ್ತನೆಯೇನೆಂದರೆ ಮೊದಮೊದಲು ಪ್ರತಿಸಲದ ನಿದ್ರೆಯ ಅವಧಿಯು ೩-೪ ಗಂಟೆಗಳು ಮಾತ್ರವಿದ್ದು ಬೆಳೆದನಂತರ ರಾತ್ರಿಯವೇಳೆ ೮-೧೦ ಗಂಟೆಗಳ ಕಾಲ ನಿರಾಂತಕವಾಗಿ ನಿದ್ರಿಸುವುದು.[2] ಚಿಕ್ಕಮಗುವಿಗೆ ಬೇಕಾದಷ್ಟು ಹಾಲುಕುಡಿಸಿ ಮಲಗಿಸಿದರೆ ಸ್ವಲ್ಪಹೊತ್ತು ಆಡಿಕೊಂಡಿದ್ದು ನಂತರ ನಿದ್ರಿಸುತ್ತದೆ ಅದರ ಮೈಗೆ ನೋವುಂಟಾಗದಂತೆ ಮೆತ್ತನೆಯ ಹಾಸಿಗೆಯನ್ನು ಹಾಸಿ, ಹೊದಿಕೆ ಹೊದಿಸಿ ಬೆಚ್ಚಗೆ ಮಲಗಿಸಿದರೆ ಮಗು ತನ್ನಷ್ಟಕ್ಕೆತಾನೆ ನಿದ್ದೆಮಾಡುತ್ತದೆ. ಲಾಲಿಪದಗಳನ್ನು ಹೇಳಿ, ತೊಟ್ಟಿಲನ್ನು ತೂಗಿ ಮಗು ನಿದ್ರಿಸುವಂತೆ ಮಾಡುವುದು ಸರಿಯಲ್ಲ. ತೊಡೆಯಮೇಲೆ ಮಗುವನ್ನು

---

1. ೧೩ನೆಯ ಚಿತ್ರವನ್ನು ನೋಡಿ. ಪುಟ ೯೫.
2. ೧೪ನೆಯ ಚಿತ್ರವನ್ನು ನೋಡಿ. ಪುಟ ೯೬.

ಮಲಗಿಸಿಕೊಂಡು ಕಾಲನ್ನು ಅಲ್ಲಾಡಿಸುತ್ತಾ ಅದರ ಮೈಯನ್ನು ತಟ್ಟುತ್ತಾ ಮಲಗಿಸುವುದು ಕೆಟ್ಟ ಅಭ್ಯಾಸ. ಇದರಿಂದ ಮಕ್ಕಳು ಕೆಟ್ಟ ಅಭ್ಯಾಸಗಳನ್ನು ಕಲಿಯುತ್ತಾರೆ. ತಾಯಂದಿರಿಗೆ ಕಾಲಹರಣ ವಾಗುತ್ತದೆ. ಅವರ ಕೆಲಸಗಳಿಗೂ ತೊಂದರೆ. ಹೀಗೆ ತೊಂದರೆ ಯಾದಾಗ ಕೋಪಗೊಂಡು ನಿರಪರಾಧಿಯಾದ ಮಗುವನ್ನು ಹೊಡೆ ಯುವರು. ಮಗುವನ್ನು ಹೊತ್ತಿಗೆ ಸರಿಯಾಗಿ ಒಳ್ಳೆಯ ಹಾಸಿಗೆಯ ಮೇಲೆ ಮಲಗಿಸಿ ಅದು ತಾನಾಗಿ ನಿದ್ರಿಸುವಂತೆ ಅಭ್ಯಾಸಮಾಡಿಸು ವುದೇ ಸರಿಯಾದ ಮಾರ್ಗ.

ಕೆಲವು ಮನೆಗಳಲ್ಲಿ ನಾಲ್ಕಾರು ವರ್ಷದ ಮಕ್ಕಳಿಗೆ ಕತೆಗಳನ್ನು ಹೇಳಿ ಮಲಗಿಸುವ ರೂಢಿ ಇದೆ. ಮನೆಯಲ್ಲಿರುವ ಅಜ್ಜಮ್ಮನವರಿಗೂ ಕತೆಗಳನ್ನು ಹೇಳುವುದೆಂದರೆ ಇಷ್ಟ. ಈ ಕತೆಗಳನ್ನು ಕೇಳಲು ಮಕ್ಕ ಳಿಗೂ ಇಷ್ಟ. ಆದರೆ ಮಲಗುವುದಕ್ಕೆ ಮುಂಚೆ ಕತೆಗಳನ್ನು ಹೇಳ ಬಾರದು. ಅದರಿಂದ ಕತೆಗಳಲ್ಲಿರುವ ವಿಷಯಗಳನ್ನೇ ಯೋಚಿಸು ತ್ತಾರೆ. ಬೇಗ ನಿದ್ರೆ ಬರುವುದಿಲ್ಲ. ನಿದ್ರಿಸಿದರೂ ಕನಸುಗಳು ಬೀಳು ತ್ತವೆ. ಹೊತ್ತಿಗೆ ಸರಿಯಾಗಿ ನಿದ್ರಿಸದೆ ಹೊತ್ತುಮೀರಿನಿದ್ದೆ ಮಾಡು ವುದೇ ಅಭ್ಯಾಸವಾಗುತ್ತದೆ. ಈ ಕಾರಣಗಳಿಂದ ಪ್ರತಿನಿತ್ಯವೂ ೭-೮ ಗಂಟೆ ಸಮಯಕ್ಕೆ ಮಕ್ಕಳಿಗೆ ಊಟ ಕೊಟ್ಟು, ಸ್ವಲ್ಪಹೊತ್ತು ಬಿಟ್ಟು ಅವರನ್ನು ಬೆಚ್ಚನೆಯ ಹಾಸಿಗೆಯಲ್ಲಿ ಮಲಗಿಸಬೇಕು.

ಸಾಯಂಕಾಲದ ಹೊತ್ತು ಮಕ್ಕಳಿಗೆ ಉದ್ರೇಕವನ್ನುಂಟು ಮಾಡುವ ಅನುಭವಗಳು ಸಂಭವಿಸಿದರೆ ಆ ರಾತ್ರಿ ಮಗು ಬೇಗನೆ ನಿದ್ರೆಮಾಡುವುದಿಲ್ಲ. ಮನೆಗೆ ನಾಲ್ಕಾರು ಜನ ನೆಂಟರು ಬಂದರೆ, ಇತರ ಮಕ್ಕಳೊಡನೆ ಸಿಕ್ಕಾಬಟ್ಟೆ ಆಡಿದರೆ ಹೊಸ ಆಟಿಕೆಯನ್ನೊ ಬಟ್ಟೆಯನ್ನೊ ಪಡೆದಿದ್ದರೆ ಮಕ್ಕಳು ಅಂದಿನ ರಾತ್ರಿ ಸರಿಯಾಗಿ ನಿದ್ರಿಸುವುದಿಲ್ಲ. ಹೀಗೆ ನಿದ್ದೆ ಮಾಡದೆ ಚಂಡಿ ಹಿಡಿಯುವುದನ್ನು "ದೃಷ್ಟಿತಾಕಿದೆ'' ಎಂದು ತಾಯಂದಿರು ಬಾವಿಸುವರು. ಇದರ ಪರಿಹಾರಕ್ಕಾಗಿ ಹಂಚೀಕಡ್ಡಿಗಳನ್ನೋ, ಕರ್ಪೂರ ತುಪ್ಪದ ಬತ್ತಿ ಮೊದಲಾದುವನ್ನೋ ಮಗುವಿನ ಮುಂದೆ ಉರಿಸುವರು ಅಥವಾ

ಕೆಂಪು ನೀರಿನಿಂದ ಆರತಿ ಮಾಡುವರು. ಆಗ ಮಗು ಶಾಂತವಾಗಿ ನಿದ್ರಿಸುವುದು. ನಿದ್ರಾಭಂಗಕ್ಕೆ ಕಾರಣದೃಷ್ಟಿ ತಾಕಿದುದಲ್ಲಿ, ಉದ್ರೇಕ. ಇದರ ಪರಿಹಾರಕ್ಕಾಗಿ ಮಗುವಿನ ಗಮನವನ್ನು ಹಠಾತ್ತಾಗಿ ಇತರ ವಿಷಯಗಳ ಕಡೆಗೆ ಸೆಳೆದರೆ ಮೊದಲಿನ ಉದ್ರೇಕವು ಶಾಂತವಾಗುವುದು. ಮಗು ನಿದ್ರಿಸುವುದು. ಕರ್ಪೂರದ ಬೆಳಕು ಕೆಂಪು ನೀರಿನ ಆರತಿಗಳ ಬದಲು ಬೈಸಿಕಲ್ ಗಂಟೆಯನ್ನು ಬಾರಿಸಿದರೂ ಅಥವಾ ಗಡಿಯಾರದ ಆಲಾರಂ ಶಬ್ದವನ್ನು ಮಾಡಿದರೂ ಇದೇ ಪರಿಣಾಮ ವುಂಟಾಗುವುದು. ಸಾಯಂಕಾಲದ ಹೊತ್ತು ಮಕ್ಕಳು ಚಂಡಿ ಹಿಡಿದರೆ ಆ ರಾತ್ರಿ ಅವರು ಬೇಗ ನಿದ್ರಿಸುವುದಿಲ್ಲ. ಮಲಗುವ ಮುನ್ನ ಅವರ ಮೇಲೆ ರೇಗಿ ಅವರಿಗೆ ಶಿಕ್ಷೆಯನ್ನು ವಿಧಿಸಿದರೆ ನೋವು ಹೆದರಿಕೆಗಳಿಂದ ಒಳತೋಟಿಯುಂಟಾಗಿ ಬೇಗ ನಿದ್ರೆ ಮಾಡಲಾರರು. ನಿದ್ರಿಸಿದರೂ ಮಧ್ಯೆ ಮಧ್ಯೆ ಬೆದರಿ ಅಳುವರು- ಯಾವ ಕಾರಣದಿಂದಲೋ ಮಗುವಿಗೆ ನಿದ್ರೆ ಬರದೆ ಹೋದರೆ ಅದನ್ನು ಬೆದರಿಸಿ ನಿದ್ರೆಮಾಡುವ ಹಾಗೆ ಮಾಡುವುದುಂಟು. ಹೀಗೆ ಮಾಡಿದರೆ ಮಗು ಹೇಗೆ ತಾನೆ ನಿದ್ರಿಸುವುದು ! ಕಾರಣಾಂತರದಿಂದ ನಿದ್ದೆ ಬರದೆ ಹೋದರೆ ದೊಡ್ಡವರು ಯಾವ ವಿಧವಾಗಿ ಇತರ, ಕೆಲಸಗಳನ್ನು ಮಾಡಿ ಶ್ರಮಹೊಂದಿ ಕೊನೆಗೆ ನಿದ್ರಿಸುವರೋ ಅದೇ ರೀತಿ ಮಗುವಿಗೆ ಆಟಗೆಗಳನ್ನು ಕೊಟ್ಟು ಕೂಡಿಸಿದರೆ ಸ್ವಲ್ಪಹೊತ್ತು ಆಡಿಕೊಂಡು ನಿದ್ದೆ ಬಂದಾಗ ತಾನಾಗಿಯೇ ಮಲಗುವುದು.

ಕೆಲವು ವೇಳೆ ಮಗು ಏನಾದರೂ ಬೇಕೆಂದು ಚಂಡಿ ಮಾಡಿದರೆ ಅದನ್ನು ತೊಟ್ಟಲಲ್ಲಿ ಹಾಕಿ ತೂಗಿ ನಿದ್ರೆ ಮಾಡಿಸಿಬಿಡುವರು. ಇದು ಬಹಳ ಕೆಟ್ಟ ಅಭ್ಯಾಸ ನಿರಾಶೆಯುಂಟಾದಾಗ ಅದನ್ನು ಬಗೆಹರಿಸದೆ ನಿದ್ರೆ ಮಾಡುವುದರ ಮೂಲಕ ಕಷ್ಟನಿವಾರಣೆಯನ್ನು ಮಾಡಿಕೊಳ್ಳುವ ಪ್ರತಿಕ್ರಿಯೆಯು ಮಗುವಿನಲ್ಲಿ ಬೆಳೆದು ದೊಡ್ಡವರಾದ ಮೇಲೂ ಇದೇ ವರ್ತನೆಯನ್ನು ಅವಲಂಬಿಸುವರು.

ಮಕ್ಕಳು ಮಲಗಿದನಂತರ ಅವರನ್ನು ಮಾತನಾಡಿಸಬಾರದು. ಅವರ ಸುತ್ತಲೂ ಕುಳಿತು ಮಗುವಿನ ನಿದ್ರೆಗೆ ಭಂಗತರಬಾರದು.

ಇದರಿಂದ ಇತರರ ಮಾತುಗಳಿಗೆ ಕಿವಿಗೊಡುವ ದುರಭ್ಯಾಸವು ಬರುವುದು.

ಮುಖ್ಯವಾಗಿ ನಿದ್ದೆಯ ವಿಷಯದಲ್ಲಿ ಗಮನವಿಡಬೇಕಾದ ಅಂಶ ವೇನೆಂದರೆ—ನಿದ್ದೆಮಾಡುವುದು ಒಂದು ಅಭ್ಯಾಸ. 'ಊಟನಿದ್ದೆ ಪಾಠಮಾಡಿದ ಹಾಗೆ' ಎಂಬ ನಾಣ್ಣುಡಿಯು ಇದರ ಸತ್ಯಾಂಶದ ಮೇಲೆ ನಿಂತಿದೆ. ಈ ಅಭ್ಯಾಸವನ್ನು ಕಲಿಸಲು ಒಂದೇ ಪದ್ಧತಿ ಯನ್ನು ಅನುಸರಿಸಬೇಕು. ಮೊದಲನೆಯ ವರ್ಷದಲ್ಲಿ ಸರಿಯಾದ ಸಮಯದಲ್ಲಿ ನಿರ್ದಿಷ್ಟವಾದ ಸ್ಥಳದಲ್ಲಿ ಯಾವ ಸದ್ದುಗಲಾಟೆಗಳೂ ಇಲ್ಲದಿರುವ ಕಡೆ ಮಗುವನ್ನು ಮಲಗಿಸಬೇಕು. ಆಹೊತ್ತು, ಆ ಸನ್ನಿ ವೇಶವುಂಟಾದ ಕೂಡಲೇ ಮಗುವಿಗೆ ನಿದ್ದೆಬರುವುದು.

## ತೊಟ್ಟಿಲು ತೂಗುವುದು

ಮಕ್ಕಳು ಅತ್ತರೆ ಅಥವಾ ನಿದ್ದೆಮಾಡಿಸಬೇಕಾದರೆ ಅವರನ್ನು ತೊಟ್ಟಿಲಲ್ಲಿಟ್ಟು ತೂಗುವುದು ತಪ್ಪು. ಮಕ್ಕಳನ್ನು ತೊಟ್ಟಿಲಲ್ಲಿಟ್ಟು ತೂಗಿದರೆ ತಲೆತಿರುಗುವುದು. ಕುಡಿದ ಹಾಲು ಜೀರ್ಣವಾಗುವುದಿಲ್ಲ. ತೂಗಿದ ಹೊರತು ನಿದ್ರಿಸುವುದಿಲ್ಲವೆಂದು ಹಟ ಹಿಡಿಯುವುದು. ಎಷ್ಟೋ ಮಕ್ಕಳು ತೊಟ್ಟಿಲಿಂದ ಬಿದ್ದು ಹಾನಿಯನ್ನು ಹೊಂದಿರು ವರು. ಆದುದರಿಂದ ತೊಟ್ಟಿಲನ್ನು ಉಪಯೋಗಿಸಲೇ ಬಾರದು, ನಮಗೆ ಬೇಕಾದಾಗ ಮಗುವನ್ನು ಬಲಾತ್ಕಾರವಾಗಿ ನಿದ್ರಿಸುವಂತೆ ಮಾಡುವುದು ಮಗವಿನ ಆರೋಗ್ಯಕ್ಕೂ ಅದರ ಮಾನಸಿಕ ಬೆಳೆವಣಿ ಗೆಗೂ ಕುಂದಕವನ್ನುಂಟುಮಾಡುವುದು. ನಿದ್ರೆಮಾಡುವುದು ಮಗು ವಿಗೆ ಸ್ವಾಭಾವಿಕವಾಗಿರಬೇಕು. ದೊಡ್ಡವರಲ್ಲಿ ಕೆಲವರಿಗೆ ರಾತ್ರಿಯ ವೇಳೆ ನಿದ್ರೆಬರುವುದಿಲ್ಲ. ಚಿಕ್ಕಮಕ್ಕಳಾಗಿದ್ದಾಗ ಅವರ ತಾಯಿ ತಂದೆಗಳು ಸರಿಯಾಗಿ ನಿದ್ರಿಸುವಂತೆ ಮಾಡದಿದ್ದುದು ಇದಕ್ಕೆ ಒಂದು ಕಾರಣ.

## ಮಲಮೂತ್ರ ವಿಸರ್ಜನೆ

ಮಲಮೂತ್ರ ವಿಸರ್ಜನೆಯ ವಿಚಾರದಲ್ಲಿಯೂ ತಂದೆತಾಯಿ ಗಳು ಮಕ್ಕಳಿಗೆ ಒಂದು ಕ್ರಮವನ್ನೂ ಹತೋಟಿಯನ್ನೂ ಕಲಿಸ

ಬೇಕು. ಪಟ್ಟಣಗಳಲ್ಲಿಯೂ ಹಳ್ಳಿಗಳಲ್ಲಿಯೂ ತಂದೆತಾಯಿಗಳು ಇದುವರೆವಿಗೂ ಈ ವಿಷಯಕ್ಕೆ ಸರಿಯಾದ ಗಮನಕೊಟ್ಟಿಲ್ಲ. ಮಕ್ಕಳು ತಮ್ಮಿಷ್ಟಕ್ಕೆ ತಾವೇ ಯಾವಾಗಲಂದರೆ ಆಗ ಉಚ್ಚೆಹೊಯ್ಯುವರೆಂದು ಅನೇಕರು ತಿಳಿದಿರುವರು. ಇದು ತಪ್ಪು. ಕ್ರಮವರಿತು ಉಚ್ಚೆ ಹೊಯ್ಯುವುದನ್ನು ಚಿಕ್ಕವಯಸ್ಸಿನಲ್ಲಿಯೇ ಮಕ್ಕಳಿಗೆ ಕಲಿಸಿಕೊಡ ಬೇಕು. ಸಣ್ಣ ಕೂಸಿಗೆ ಹಾಲುಕೊಡುವುದಕ್ಕೆ ಮುಂಚೆ, ಹಾಲುಕೊಟ್ಟ ನಂತರ ಮಲಮೂತ್ರ ವಿಸರ್ಜನೆ ಮಾಡಲು ಕಲಿಸಬೇಕು. ಈ ರೀತಿ ಯಾಗಿ ಒಂದು ಕ್ರಮವನ್ನು ಅನುಸರಿಸಿ ಮಗುವನ್ನು ನೋಡಿಕೊಂ ಡರೆ ಒಂದು ಒಂದೂವರೆ ವರ್ಷ ವಯಸ್ಸಿನೊಳಗಾಗಿ ಮಗು ಮಲ ಮೂತ್ರಗಳನ್ನು ಕ್ರಮವರಿತು ವಿಸರ್ಜನೆ ಮಾಡುವುದನ್ನು ಕಲಿಯು ವುದು.[1] ಸಾಧಾರಣವಾಗಿ ಮೂರು ನಾಲ್ಕು ತಿಂಗಳ ವಯಸ್ಸಿನೊಳಗೆ ಮಗು ಮಲಮೂತ್ರ ವಿಸರ್ಜನೆಯ ಮೇಲೆ ಹತೋಟಿ ಪಡೆಯುವುದು ಆದರೆ ಮೂತ್ರ ವಿಸರ್ಜನೆಯ ಮೇಲೆ ಹತೋಟಿ ಪಡೆಯಲು ಒಂದೂ ವರೆ ವರ್ಷವಾದರೂ ಆಗಬೇಕು. ಕೆಲವು ಮಕ್ಕಳು ಇದಕ್ಕಿಂತ ಬೇಗ ಕಲಿಯಬಹುದು ಮತ್ತೆ ಕೆಲವು ಮಕ್ಕಳು ನಿಧಾನವಾಗಿ ಕಲಿಯ ಬಹುದು.

ಮಲಮೂತ್ರವಿಸರ್ಜನೆಗಳನ್ನು ಕ್ರಮವರಿತು ಮಾಡುವ ಹಾಗೆ ಮಗುವಿಗೆ ಹೇಳಿಕೊಡಬೇಕು. ಈ ಅಭ್ಯಾಸವನ್ನು ಕಲಿಸಿಕೊಡುವ ಕಾಲ, ಸ್ಥಳ, ಸನ್ನಿವೇಶಗಳು ಏಕರೀತಿಯಾಗಿರಬೇಕು. ಮಕ್ಕಳನ್ನು ಎಲ್ಲೆಂದರಲ್ಲಿ ವಿಸರ್ಜನೆಗೆ ಕೂಡಿಸಬಾರದು. ಸಿಕ್ಕಿದಕಡೆ ಪಾಯ ಖಾನೆ ಮಾಡಿದರೆ ಮನೆಯ ಆರೋಗ್ಯವು ಕೆಡುವುದು. ಮತ್ತು ಕೆಟ್ಟ ಅಭ್ಯಾಸಕ್ಕೆ ಕಾರಣವಾಗುವುದು. ಒಂದು ಸಣ್ಣ ಮಡಕೆಯನ್ನು ಇಟ್ಟು ಚಿಕ್ಕಮಕ್ಕಳು ಅದರಲ್ಲಿ ನಿತ್ಯವೂ ಮಲವಿಸರ್ಜನೆ ಮಾಡುವಂತೆ ಅಭ್ಯಾಸ ಮಾಡಿಸಬೇಕು.

---

೧. ೧೪೮ ನೆಯ ಪುಟವನ್ನು ನೋಡಿ.

ಕೆಲವು ವೇಳೆ ಎರಡು ಮೂರು ವರ್ಷ ವಯಸ್ಸಾದರೂ ಮಕ್ಕಳು ಬಟ್ಟೆಯಲ್ಲಿಯೇ ಉಚ್ಚೆಮಾಡಿಕೊಳ್ಳುವರು. ಇದಕ್ಕೆ ಕಾರಣ ಸರಿಯಾದ ಅಭ್ಯಾಸವನ್ನು ಮಾಡಿಸದಿರುವುದು. ಅಂದರೆ ಗೊತ್ತಾದ ಕಾಲಕ್ಕೆ ಉಚ್ಚೆ ಮಾಡಿಸದೆ ಇರುವುದು. ಸರಿಯಾದ ಉಡುಪನ್ನು ಹಾಕದೆ ಇರುವುದೂ ಒಂದು ಕಾರಣ. ಸ್ವಲ್ಪ ವಯಸ್ಸಾದ ಮೇಲೆ ಸಿಕ್ಕಾಬಟ್ಟೆ ಮಗು ಉಚ್ಚೆಮಾಡಿಕೊಳ್ಳುತ್ತಿದ್ದರೆ ತಾಯಿ ತಂದೆಗಳಿಗೆ ಕೋಪಬಂದು ಬೈದು ಸರಿಮಾಡಲೆತ್ನಿಸಿದರೆ ಆಗ ಮಗುವಿಗೆ ಅವರ ಮೇಲೆ ಜಿಗುಪ್ಸೆ ಉಂಟಾಗಬಹುದು. ಆದುದರಿಂದ ಮೊದಲನೆಯ ಎರಡು ವರ್ಷಗಳೊಳಗೆ ಈ ಅಭ್ಯಾಸವನ್ನು ಮಾಡಿಸಬೇಕು. ರಾತ್ರಿಯವೇಳೆ ಮಗು ಹಾಸಿಗೆಯಲ್ಲಿಯೇ ಉಚ್ಚೆಮಾಡಬಹುದು ಇದಕ್ಕೆ ಅನೇಕ ಕಾರಣಗಳಿವೆ ದೈಹಿಕ ಅನಾರೋಗ್ಯದಿಂದ ಈ ಕೆಟ್ಟ ಅಭ್ಯಾಸವು ಬರಬಹುದು ಆದರೆ ಸಾಧಾರಣವಾಗಿ ಮಾನಸಿಕ ಕಾರಣಗಳೇ ಹೆಚ್ಚು. ಮುಖ್ಯವಾಗಿ ಮಗುವಿಗೆ ಮೂತ್ರ ವಿಸರ್ಜನೆಯ ಕ್ರಮವನ್ನು ಹೇಳಿಕೊಡದಿರುವುದು. ಮಗುವಿನಲ್ಲಿ ಕಾರಣಾಂತರದಿಂದ ಒಳ ತೋಟಯುಂಟಾದರೆ ಹಾಸಿಗೆಯಲ್ಲಿ ಉಚ್ಚೆ ಮಾಡಿಕೊಳ್ಳುವುದು. ತಂದೆ ತಾಯಿಗಳ ಗಮನವನ್ನು ತನ್ನ ಕಡೆಗೆ ಸೆಳೆಯುವ ಸಲುವಾಗಿ ಹೀಗೆ ಮಾಡಬಹುದು. ತಂದೆ ತಾಯಿಗಳ ಅಥವಾ ಸಹೋದರ ಮೇಲೆ ಸೇಡು ತೀರಿಸಿಕೊಳ್ಳಲು ಹಾಸಿಗೆಯ ಮೇಲೆ ಉಚ್ಚೆಮಾಡಿಕೊಳ್ಳಬಹುದು. ತನಗೆ ಇಷ್ಟವಿಲ್ಲದಿರುವ ಮನೆಯಲ್ಲಿದ್ದರೆ ಹೀಗೆ ಮಾಡಬಹುದು. ಅಂದರೆ ನಾನಾಕಾರಣಗಳಿಂದ ಈ ದುರಭ್ಯಾಸವು ಬರಬಹುದು. ಆರೆಂಟು ವರ್ಷಗಳಾದರೂ ಈ ಕೆಟ್ಟ ಅಭ್ಯಾಸವು ನಿಲ್ಲುವುದಿಲ್ಲ. ಶ್ರದ್ಧೆಯನ್ನು ತೆಗೆದುಕೊಂಡು ಕಾರಣಗಳನ್ನು ವಿಮರ್ಶಿಸಿ, ಸರಿಪಡಿಸಿದರೆ ಮಗು ಹೊಸ ಅಭ್ಯಾಸವನ್ನು ಕಲಿಯುವುದು.

## ಆಹಾರ

ಹುಟ್ಟಿದ ಮೊದಲನೆಯ ವಾರದಿಂದಲೂ ಎದೆಹಾಲನ್ನು ತಾಯಿಯು ಒಂದು ಕ್ರಮದಿಂದ ಕುಡಿಸಬೇಕು. ಮಕ್ಕಳು ಅತ್ತಾಗಲೆಲ್ಲಾ ಹಾಲುಕೊಡುವುದು ತಪ್ಪು. ಇದು ಹಟಮಾರಿತನಕ್ಕೆ ಕಾರಣ

ವಾಗುವುದು ಸಾಧಾರಣವಾಗಿ ಮೂರು ಗಂಟೆಗಳಿಗೊಮ್ಮೆ ಹಾಲು ಕುಡಿಸಬೇಕು. ಇದರಿಂದ ತಾಯಿ ಮಕ್ಕಳಿಬ್ಬರಿಗೂ ಒಳ್ಳೆಯದು. ಮಗು ಅತ್ತರೆ ಯಾವ ಕಾರಣದಿಂದ ಅಳುವುದೆಂದು ಕಂಡುಹಿಡಿಯುವುದನ್ನು ಬಿಟ್ಟು ಅತ್ತಾಗಲೆಲ್ಲಾ ಹಾಲುಕೊಟ್ಟರೆ ತಾಯಿ ಮಕ್ಕಳಿಬ್ಬರಿಗೂ ಕೆಡುಕುಂಟಾಗುವುದು. ಮಗುವಿಗೆ ರಾತ್ರಿಯ ಹೊತ್ತು ಹಾಲು ಕೊಡುವುದು ಇನ್ನೊಂದು ದುರಭ್ಯಾಸ. ಎಷ್ಟೋ ಮಂದಿ ತಾಯಂದಿರು ಮಗುವನ್ನು ತಮ್ಮ ಮಗ್ಗುಲಲ್ಲಿಯೇ ಮಲಗಿಸಿಕೊಂಡು ಅದು ಎಚ್ಚರಗೊಂಡು ಅತ್ತಾಗಲೆಲ್ಲಾ ಹಾಲುಕೊಡುವರು. ಈ ದುರಭ್ಯಾಸದಿಂದ ತಾಯಿಗೆ ನಿದ್ರಾಭಂಗವೂ ಮಗುವಿಗೆ ಅನಾರೋಗ್ಯವೂ ಉಂಟಾಗುವುದು. ರಾತ್ರಿ ಹತ್ತು ಗಂಟೆಯ ಸಮಯಕ್ಕೆ ಸರಿಯಾಗಿ ಹೊಟ್ಟೆ ತುಂಬ ಹಾಲುಕೊಟ್ಟು ಮಲಗಿಸಿದರೆ ಬೆಳಗ್ಗೆ ೪-೫ ಗಂಟೆಗಳವರೆಗೆ ಚೆನ್ನಾಗಿ ನಿದ್ರಿಸುವುದು. ರಾತ್ರಿಯಲ್ಲಿ ಎದ್ದರೆ ನೋವು ಉಂಟಾದ ಕಾರಣದಿಂದಲೋ ಅಥವಾ ಬಾಯಾರಿಕೆಯಿಂದಲೋ ಎಚ್ಚರಗೊಂಡಿರಬೇಕೆಂದು ತಿಳಿದು ಅವರ ಹಾಸಿಗೆಯನ್ನು ಸರಿಮಾಡಿ ಸ್ವಲ್ಪ ಬೆಚ್ಚಗಿರುವ ನೀರಿಗೆ ಸಕ್ಕರೆ ಸೇರಿಸಿ ಕುಡಿಸಬೇಕು. ಮಗು ಆರೋಗ್ಯದಿಂದಲೂ ಒಳ್ಳೆಯ ನಡತೆಯಿಂದಲೂ ಬೆಳೆಯಬೇಕಾದರೆ ತಾಯಿಯು ರಾತ್ರಿಯಲ್ಲಿ ಹಾಲನ್ನು ಉಣಿಸಲೇ ಬಾರದು ಮಗುವಿಗೆ ೧೦—೧೨ ತಿಂಗಳು ವಯಸ್ಸಾದಾಗ ಎದೆಹಾಲನ್ನು ನಿಲ್ಲಿಸಬೇಕು. ೬-೮ ತಿಂಗಳ ವಯಸ್ಸಿನಿಂದಲೇ ದಿನಕ್ಕೆ ಒಂದೆರಡುಸಲ ಹಸುವಿನ ಹಾಲನ್ನು ಅಭ್ಯಾಸಮಾಡಬೇಕು. ಒಂದು ವರ್ಷವಾದ ಮೇಲೂ ಎದೆಹಾಲನ್ನು ಕೊಟ್ಟರೆ ಮಗು ತಾಯಿಯ ಮೇಲೆಯೇ ತನ್ನ ಆಶಾಪಾಶಗಳನ್ನು ಕೇಂದ್ರೀಕರಿಸಿ ತನ್ನ ಆವರಣದಲ್ಲಿಯೂ, ಸುತ್ತಮುತ್ತಲಿರುವ ಇತರ ಜನರಲ್ಲಿಯೂ ನಿರಾಶೆಯನ್ನು ತೋರಿಸುವುದು. ಮತ್ತು ಮುಂದೆ ಊಟಮಾಡುವ ಅಭ್ಯಾಸವನ್ನು ಬೇಗ ಕಲಿಯುವುದಿಲ್ಲ. ಅನ್ನ ತಿನ್ನುವುದಕ್ಕೆ ಬಹಳ ತೊಂದರೆಯನ್ನು ಕೊಡುವುದು.

ಹೊತ್ತಿಗೆ ಸರಿಯಾಗಿ ಹಾಲುಕೊಡುವ ಹಾಗೆ ಹೊತ್ತಿಗೆ ಸರಿಯಾಗಿ ಊಟವನ್ನು ಮಾಡಿಸಬೇಕು. ಊಟಸೇರದೇ ಇರುವುದಕ್ಕೆ

ಅನಾರೊಗ್ಯ ಕಾರಣವಾಗಿರಬಹುದು. ಅಥವಾ ಕೆಟ್ಟ ಅಭ್ಯಾಸ ಕಾರಣವಾಗಿರಬಹುದು. ಎಷ್ಟೋ ಮಕ್ಕಳು ತಟ್ಟೆಯ ಮುಂದೆ ಕುಳಿತು ಊಟಮಾಡದೆ ತಾಯಿಗೆ ತೊಂದರೆ ಕೊಡುವರು. ಮಗುವಿಗೆ ಒಳ್ಳೆಯ ಅಭ್ಯಾಸವನ್ನು ಕಲಿಸದಿರುವುದೇ ಇದಕ್ಕೆ ಕಾರಣ. ಮಗು ತನ್ನ ಆರೋಗ್ಯಕ್ಕಾಗಿ, ತನ್ನ ಹಸಿವನ್ನು ತೀರಿಸಿಕೊಳ್ಳುವುದಕ್ಕಾಗಿ ಊಟಮಾಡಬೇಕೆಂಬ ಭಾವನೆಯನ್ನು ಪಡೆಯುವ ಹಾಗೆ ಮಾಡಬೇಕು. ಅದನ್ನು ಬಿಟ್ಟು ಎಷ್ಟೋ ತಾಯಂದಿರು ಮಗುವನ್ನು ಹೊಡೆದು, ಬೈದು, ಇಲ್ಲದೆ ಸುಳ್ಳು ಆಸೆಗಳನ್ನು ತೋರಿಸಿ, ಬೆದರಿಸಿ, ಪುಸಲಾಯಿಸಿ ಊಟಮಾಡುವಂತೆ ಮಾಡುವರು. "ನೀನು ಒಳ್ಳೆಯ ಮಗು, ನೀನು ಚಿನ್ನ, ಊಟಮಾಡು" ಎನ್ನುವರು; "ಈ ತುತ್ತು ಯಾರಿಗೆ" ಎಂದು ಹೇಳಿ ಅದನ್ನು ಮಗು ತಿಂದರೆ "ಕಾಗೆ ಬಂದು ತೆಗೆದುಕೊಂಡು ಹೋಯಿತೋ," ಎನ್ನುವರು. ಹೀಗೆ ಮಾಡುವುದರಿಂದ ಮಗು ಊಟದ ಮೇಲಿನ ಆಸಯನ್ನು ತೊರೆದು ತಾಯಿಯನ್ನು ತೃಪ್ತಿಗೊಳಿಸಲು ಊಟಮಾಡುವುದು. ಎಷ್ಟೋ ವೇಳೆ ತಮ್ಮ ಮನೆಯಲ್ಲಿ ಸರಿಯಾಗಿ ಊಟಮಾಡದಿರುವ ಮಗು ನೆರೆಹೊರೆಯರ ನೆಂಟರ ಮನೆಗೆ ಹೋದಾಗ ಆತುರತೆಯಿಂದ ಹೆಚ್ಚಾಗಿ ಊಟಮಾಡಿ ತಾಯಿಯ ಆತ್ಮಗೌರವ (!) ಕ್ಕೆ ಕುಂದುಕವನ್ನು ತರುವುದು. ಸರಿಯಾದ ರೀತಿಯಿಂದ ಊಟಮಾಡುವ ಅಭ್ಯಾಸವನ್ನು ಕಲಿತಿದ್ದರೆ ಈ ಆತುರತೆಯನ್ನು ತೋರಿಸುವುದಿಲ್ಲ.

ಲ್ಯಾಂಗ್‌ಫರ್ಡ್ ಎಂಬವರು ಶಿಶುವಿಹಾರಗಳಲ್ಲಿ ಸಣ್ಣ ಮಕ್ಕಳು ಯಾವವಿಧವಾಗಿ ಊಟಮಾಡುವರೆಂದು ಪರಿಶೀಲಿಸಿರುವರು. ಶೇಕಡ ೮೫ ರಷ್ಟು ಮಂದಿ ಮಕ್ಕಳು ತಟ್ಟೆಯ ಮುಂದೆ ಕುಳಿತೊಡನೆಯೇ ಊಟಮಾಡಲಾರಂಭಿಸುವರು ಶೇಕಡ ೧೧ ಮಂದಿ ಮಕ್ಕಳಿಗೆ ಊಟಕ್ಕೆ ತಟ್ಟೆಹಾಕಿರುವುದನ್ನು ಜ್ಞಾಪಕಕ್ಕೆ ತರಬೇಕಾಯಿತು. ಇನ್ನುಳಿದ ಶೇಕಡ ೪ ಮಂದಿಯನ್ನು ಊಟಮಾಡಲು ಒತ್ತಾಯಪಡಿಸಬೇಕಾಯಿತು.

ವಯಸ್ಸು ಹೆಚ್ಚಾದಂತೆಲ್ಲಾ ಮಕ್ಕಳು ಇತರರ ಸಹಾಯವಿಲ್ಲದೆ

ತಾವೇ ಊಟಮಾಡುವುದನ್ನು ಕಲಿಯುವರು. ಲ್ಯಾಂಗ್‌ಫರ್ಡ್‌ರ ಶೋಧನೆಯಿಂದ ಈ ಕೆಳಗಿನ ಅಂಕಿ ಅಂಶಗಳು ದೊರೆತಿರುವುವು.

**ಪಟ್ಟಿ ೧೪**

| ಮಕ್ಕಳ ವಯಸ್ಸು (ವರ್ಷಗಳಲ್ಲಿ) | ಇತರರ ಸಹಾಯವಿಲ್ಲದೆ ಊಟ ಮಾಡುವವರ ಶೇಕಡಾಕ್ರಮ. |
|---|---|
| ೧ ವರ್ಷ | ೩೦ |
| ೨ ವರ್ಷಗಳು | ೮೭ |
| ೩ ವರ್ಷಗಳು | ೯೪ |
| ೪ ವರ್ಷಗಳು | ೯೯ |
| ೫ ವರ್ಷಗಳು | ೧೦೦ |

ಅಂದರೆ ಮೂರುವರ್ಷಗಳ ವಯಸ್ಸಿನೊಳಗಾಗಿ ಮಗು ಯಾರ ಸಹಾಯವೂ ಇಲ್ಲದೆ ತನ್ನ ಊಟವನ್ನು ತಾನೇ ಮಾಡಿಕೊಳ್ಳ ಬಲ್ಲದು. ಹಾಗೆ ಮಾಡದೆ ಹೋದರ, ಅದರ ತರಬೇತು ಸರಿಯಾದ ಕ್ರಮದಲ್ಲಿ ನಡೆಯಲಿಲ್ಲ. ಸಮಯಕ್ಕೆ ಸರಿಯಾಗಿ ಮಕ್ಕಳಿಗೆ ಊಟವನ್ನು ಕೊಡ ಬೇಕು. ಊಟಮಾಡದೆಹೋದರೆ ಮಾಡಲಿಲ್ಲವೆಂಬ ಚಿಂತೆ ಕೋಪ ಗಳನ್ನು ತೋರ್ಪಡಿಸದೆ ಇರಬೇಕು. ಊಟಮಾಡುವ ಸಮಯದಲ್ಲಿ ಮಗುವಿಗೆ ಕಥೆ ಹೇಳುವುದು, ಮಗುವಿನ ಜೊತೆಯಲ್ಲಿ ಆಡುವುದು, ಆಟಗೆಗಳನ್ನು ಕೊಡುವುದು, ಸ್ಪರ್ಧೆಯಿಡುವುದು ಇವೆಲ್ಲವೂ ಕೆಟ್ಟ ಅಭ್ಯಾಸಗಳಿಗೆ ಕಾರಣವಾಗುವುವು. ಮತ್ತೊಂದು ದುರಭ್ಯಾಸ ವೇನೆಂದರೆ ಮಗುವಿನ ಮುಂದೆ 'ಈ ಊಟ ನಮ್ಮ ಮಗುವಿಗೆ ಬಹಳ ಇಷ್ಟ' 'ಈ ಊಟ ನಮ್ಮ ಮಗುವಿಗೆ ಸೇರುವುದಿಲ್ಲ' ಎಂದು ಕೆಲವು ತಾಯಂದಿರು ಪದೇ ಪದೇ ಹೇಳಿ ಅವರಿಗೆ ಊಟದ ಮೇಲೆ ಇಚ್ಛೆ ಅನಿಚ್ಛೆಗಳನ್ನು ಅವರೇ ಉಂಟುಮಾಡುವರು.

## ಸ್ನಾನ

ಸ್ನಾನದ ಉದ್ದೇಶವು ಮಗುವಿನ ದೇಹವನ್ನು ಶುಚಿಯಾಗಿಡು ವುದು. ಇದು ಆಟಪಾಟಗಳಿಗೆ ಅವಕಾಶವನ್ನು ಕೊಡಬಾರದು. ಅಲ್ಲದೆ ಅಳು-ಕೂಗಾಟಗಳಿಗೂ ಎಡೆಗೊಡಬಾರದು. ಮಗು ನೀರಿನಲ್ಲಿ

ಅಡಿಕೊಂಡು ಎಷ್ಟು ಹೊತ್ತಾದರೂ, ಸ್ನಾನದ ಮನೆಯನ್ನು ಬಿಡದೆ ಹೋದರೂ ತಪ್ಪು; ಸ್ನಾನದ ಮನೆಗೆ ಹೋಗಲು ಅಂಜಿಕೊಂಡು ಅತ್ತರೂ ತಪ್ಪು. ಈ ಎರಡೂ ವಿಪರೀತ ದುರಭ್ಯಾಸಗಳು. ಸ್ನಾನ ಮಾಡಿಸುವಾಗ ಮಗುವಿನ ಗಮನವನ್ನು ದೇಹದ ಶುಚಿಯ ಕಡೆ ಎಳೆಯಬೇಕು. ನಿರ್ಬಂಧದಿಂದ ಮಗುವನ್ನು ಎಳೆದು ಹೊಡೆದು ಬೈದು ಸ್ನಾನದಮನೆಗೆ ಕರೆದುಕೊಂಡುಹೋಗಿ ಬಿಸಿಬಿಸಿಯಾದ ನೀರನ್ನು ಹೊಯ್ದು ಇಲ್ಲವೆ ಒರಟಾದ ರೀತಿಯಲ್ಲಿ ಅದರ ಮೈಯನ್ನು ತಿಕ್ಕಿ ನೋವು ಹೆದರಿಕೆಗಳನ್ನುಂಟುಮಾಡಿದರೆ ಮಗುವಿಗೆ ಸ್ನಾನ ವೆಂದರೆ ಭಯವಾಗುವುದು.

ಮಗು ಒಂದು ವರ್ಷ ವಯಸ್ಸಾದಮೇಲೆ, ತನ್ನ ಮೈಯನ್ನು ತೊಳೆಯುವಾಗ ಒರೆಸುವಾಗ ತಾಯಿಯೊಡನೆ ಸಹಕರಿಸಲಾರಂಭಿಸುವುದು. ಎರಡು ವರ್ಷದ ವಯಸ್ಸಿಗೆ ತನ್ನ ಕೆಲಸಗಳನ್ನು ತಾನೇ ಮಾಡಿಕೊಳ್ಳಬೇಕೆಂಬ ಇಚ್ಛೆಯನ್ನು ತೋರಿಸುವುದು. ಇದು ಮಗುವಿನ ಬೆಳವಣಿಗೆಗೆ ಅತ್ಯಗತ್ಯ. ಆದರೆ ಇದರಿಂದ ತಾಯಗೆ ಕಾಲಹರಣವಾಗಬಹುದು. ಈ ಕಾಲದಲ್ಲಿ ಮಗುವಿಗೆ ಸ್ನಾನಮಾಡಿಸುವುದೊಂದೇ ಅಲ್ಲದೆ, ಅದಕ್ಕೆ ತಾನೇ ಸ್ನಾನಮಾಡಿಕೊಳ್ಳುವುದನ್ನು ಕಲಿಸುವುದು ತಾಯಿಯ ಕೆಲಸ. ಎಷ್ಟು ಬೇಗ ತನ್ನ ಮೈಯನ್ನು ತಾನೇ ಶುಚಿಯಾಗಿಡುವುದನ್ನು ಕಲಿಯುವುದೋ ಅಷ್ಟೂ ಮಗುವಿನ ಬೆಳೆವಣಿಗೆಗೆ ಅನುಕೂಲ.

## ಉಡುಪು

ಮೊದಲ ಕೆಲವು ತಿಂಗಳುಗಳಲ್ಲಿ ಮಗು ಯಾವ ಮೈ ಅಲುಗಾಟವನ್ನೂ ವ್ಯಕ್ತಪಡಿಸುವುದಿಲ್ಲ. ಆದರೆ ಮೂರು-ನಾಲ್ಕು ತಿಂಗಳ ವಯಸ್ಸಿಗೆ ಬರುವಷ್ಟರಲ್ಲಿ, ಉಡುಪನ್ನು ತೊಡಿಸುವಾಗ ಕೈಕಾಲುಗಳನ್ನಾಡಿಸಿ, ಸ್ವಲ್ಪಮಟ್ಟಿಗೆ ಸಹಕರಿಸುವುದು. ಎರಡು ವರ್ಷ ವಯಸ್ಸಿಗೆ ಬಂದಾಗ ಸಾಧಾರಣ ಅಂಗಿಯನ್ನು ತಾನೇ ಹಾಕಿಕೊಳ್ಳುವುದನ್ನು ಕಲಿಯುವುದು. ಈ ಕಾಲದಲ್ಲಿ ಮಗು ತನ್ನ ಬಟ್ಟೆಗಳನ್ನು ತಾನೇ ಹಾಕಿಕೊಳ್ಳುವಂತೆ ಹೇಳಿಕೊಡಬೇಕು. ಮಗು ತಾನೇ ತನ್ನ ಬಟ್ಟೆ

ಗಳನ್ನು ಹಾಕಿಕೊಳ್ಳುತ್ತೇನೆಂದರೆ ಬೈದು ಗದರಿಸಿ ಅದನ್ನು ತಡೆಯಬಾರದು.

ಮಗುವಿನ ಬಟ್ಟೆಯು ಅದಕ್ಕೆ ಸುಖದಾಯಕವಾದುದಾಗಿರಬೇಕು. ಬಟ್ಟೆಯ ಮುಖ್ಯ ಉಪಯೋಗ-ದೇಹದ ಶಾಖವನ್ನು ಒಂದೇ ಸಮನಾಗಿಟ್ಟಿರುವುದು. ಮಗುವಿಗೆ ಅತಿ ಸ್ವಲ್ಪ ಬಟ್ಟೆಗಳನ್ನು ಹಾಕಿದರೆ, ಮೈಶಾಖವನ್ನು ಹೆಚ್ಚಿಸಿಕೊಳ್ಳುವುದಕ್ಕೋಸ್ಕರ ಆಹಾರದಿಂದ ಪಡೆದ ಶಕ್ತಿಯನ್ನು ವಿನಿಯೋಗಿಸಿಕೊಳ್ಳುವುದರಿಂದ ಅದರ ದೇಹದ ಬೆಳೆವಣಿಗೆಯು ಕ್ಷೀಣವಾಗುವುದು. ಅತಿ ಹೆಚ್ಚಾದ ಉಡುಪನ್ನು ಹಾಕಿದರೆ, ಮಗು ಛಳಿಗಾಳಿಯನ್ನು ತಡೆದುಕೊಳ್ಳುವ ಶಕ್ತಿಯನ್ನು ಕಳೆದುಕೊಳ್ಳುವುದು. ಮನೆಯೊಳಗಿರುವಾಗ ಹೆಚ್ಚಾಗಿ ಬೆವರಿ ನೆಗಡಿಗೆ ಕಾರಣವಾಗುವುದು. ದಪ್ಪವಾದ, ಬಹು ಸಡಿಲವಾದ ಇಲ್ಲವೇ, ಅತಿ ಬಿಗಿಯಾದ ಬಟ್ಟೆಗಳನ್ನು ಹಾಕಿದರೆ, ಮಗು ಸ್ವೇಚ್ಛೆಯಾಗಿ ಕೈಕಾಲುಗಳನ್ನು ಆಡಿಸಲು ಅವಕಾಶವಿರುವುದಿಲ್ಲ. ಮಗುವಿಗೆ ನಿರ್ಮಲವಾದ ಬಟ್ಟೆಗಳನ್ನು ಹಾಕಿದರೆ, ಅವುಗಳ ಸ್ವಚ್ಛತೆಯನ್ನು ಕಾಪಾಡಿಕೊಳ್ಳಲು ಪ್ರಯತ್ನಿಸಿ ಪರಿಶುದ್ಧವಾಗಿರುವುದನ್ನು ಕಲಿಯುವುದು. ಕೊಳೆಯ ಮತ್ತು ಹರಕಲು ಬಟ್ಟೆಗಳನ್ನು ಹಾಕಿದರೆ ಮಗುವಿನ ಆತ್ಮಗೌರವಕ್ಕೆ ಕುಂದಕ ಬಂದು ತನ್ನ ಬಟ್ಟೆಗಳ ಕಡೆಗೆ ಗಮನವು ಹೆಚ್ಚಿ ವರ್ತನೆಯಲ್ಲಿ ಅಂಜಿಕೆ ಸಂಕೋಚಗಳನ್ನು ತೋರುವುದು.

ಮಗುವಿನ ಉಡುಪುಗಳು ಸರಳವಾಗಿರಬೇಕು. ಮಗು ತನ್ನ ಬಟ್ಟೆಗಳನ್ನು ತಾನೇ ಹಾಕಿಕೊಳ್ಳುವಂತೆಯೂ, ತಾನೇ ತೆಗೆದುಹಾಕುವಂತೆಯೂ ಇರಬೇಕು. ಕೊಕ್ಕೆಪಿನ್ನು ಮುಂತಾದುವುಗಳನ್ನು ಉಪಯೋಗಿಸಿದರೆ, ಗುಂಡಿಗಳನ್ನು ಪಯೋಗಿಸಿದರೆ ಮಗುವಿಗೆ ಬಹಳ ಅನುಕೂಲ ಅದರಲ್ಲಿಯೂ ಗುಂಡಿಗಳು ದೊಡ್ಡದಾಗಿದ್ದು ಕಣ್ಣಿಗೆ ಕಾಣಿಸುವ ಹಾಗೆ ಎದುರಿನಲ್ಲಿದ್ದರೆ ಮಗು ಸರಾಗವಾಗಿ ತನ್ನ ಉಡುಪುಗಳನ್ನು ತಾನೆ ಹಾಕಿಕೊಳ್ಳುವುದನ್ನು ಕಲಿಯುವುದು.

### “ ಬೇಡ ” ಎನ್ನುವುದರ ಪರಿಣಾಮಗಳು

ಮಕ್ಕಳನ್ನು ನೋಡಿಕೊಳ್ಳುವಾಗ ಅನೇಕ ವೇಳೆ ‘ ಅದನ್ನು

ಮಾಡಬೇಡ' 'ಇದನ್ನು ಮಾಡಬೇಡ' ಎಂದು ನಿರೋಧಿಸವುದು ಸರಿಯಲ್ಲ. ಹೀಗೆ ಪದೇ ಪದೇ ಕೂಗುತ್ತಿದ್ದರೆ ಮಗು ಹೆದರಿ ಕೆಲಸ ವನ್ನು .ಸರಿಯಾಗಿ ಮಾಡುವುದಿಲ್ಲ. ಎಲ್ಲಿ ತಪ್ಪಾಗುವುದೋ ಎಲ್ಲಿ ಬಯ್ಯುವರೋ ಎಂದು ಹೆದರುವುದು. ಅದರ ಮನಸ್ಸಿನಲ್ಲಿ ಒಳ ತೋಟೆಯುಂಟಾಗಿ ಇತರ ವಿಪರೀತ ವರ್ತನೆಗಳಿಗೆ ಕಾರಣವಾಗು ವುದು. 'ಹಾಗೆ ಮಾಡಬೇಡ' ಎನ್ನುವುದಕ್ಕೆ ಬದಲು "ಹೀಗೆ ಮಾಡು" ಎನ್ನುವುದು ಮೇಲು.

## ಅತಿ ಮುದ್ದು

ಪ್ರೀತಿಯ ಅಭಾವದಿಂದ ಮಕ್ಕಳ ವರ್ತನೆಯಲ್ಲಿ ದುಷ್ಪರಿಣಾಮ ಗಳಾಗುವಂತೆಯೇ, ಅತಿಯಾದ ಪ್ರೀತಿ ಮುದ್ದುಗಳಿಂದಲೂ ಕೆಟ್ಟ ಪರಿಣಾಮಗಳುಂಟಾಗುವುವು. ತಾಯಿಯು ಸತ್ತುಹೋಗಿದ್ದರೆ, ಅಥವಾ ಮಲತಾಯಿಯ ರಕ್ಷಣೆಯಲ್ಲಿ ಬೆಳೆದರೆ ಇಲ್ಲವೆ ಕಾರಣಾಂತರಗಳಿಂದ ಪರರ ಮನೆಯಲ್ಲಿ ಮಗು ಪೋಷಿಸಲ್ಪಟ್ಟರೆ, ಪ್ರೀತಿ ವಾತ್ಸಲ್ಯಗಳು ಇಲ್ಲದೆ ಇರುವುದರಿಂದ ಮಗು ಸ್ವೇಚ್ಛೆಯಾಗಿ ವರ್ತಿಸುವುದನ್ನು ಬಿಟ್ಟು ಯಾವಾಗಲೂ ಅಂಜಿಕೊಂಡು ಸಂಕೋಚದಿಂದ ವರ್ತಿಸುವುದು. ತೊದಲುವುದು, ಹಾಸಿಗೆಯಲ್ಲಿಯೇ ಉಚ್ಚೆಮಾಡುವುದು, ಬೆಟ್ಟು ಚಪ್ಪ ರಿಸುವುದು, ಯಾರ ಸಂಗಡಲೂ ಮಾತನಾಡದೆ ಒಂಟಿಯಾಗಿರುವುದು ಮುಂತಾದ ವರ್ತನೆಯ ವಿಪರೀತಗಳಿಗೆ ಕಾರಣವಾಗುವುದು.

ಅತಿ ಹೆಚ್ಚಾಗಿ ಮುದ್ದಿಸಿದರೆ, ಬೇರೆ ವಿಧವಾದ ವರ್ತನೆಯ ವೈಪರಿತ್ಯಗಳುಂಟಾಗುವುವು. ಯಾವಾಗ ನೋಡಿದರೂ ಮಗುವನ್ನು ಎತ್ತಿಕೊಂಡು ಮುದ್ದಾಡುವುದು ಬಹಳ ಸಾಧಾರಣ. ಎಷ್ಟೋ ವೇಳೆ, ಮಗು ತನ್ನಷ್ಟಕ್ಕೆ ತಾನೆ ಚಾಪೆಯಮೇಲೆ ಮಲಗಿರುವಾಗ, ಸ್ವಲ್ಪ ಬೆಳೆದನಂತರ ಆಟಿಕೆಗಳನ್ನು ಇಟ್ಟುಕೊಂಡು ಆಡುತ್ತಿರುವಾಗ ಮಗು ವನ್ನು ಎತ್ತಿ ಮುದ್ದಾಡುವುದುಂಟು. ಈ ಅತಿ ಹೆಚ್ಚಿನ ಮುದ್ದಾಟಕ್ಕೆ ಎರಡು ಕಾರಣಗಳುಂಟು. ಮಗುವನ್ನು ಪ್ರೇಮದಿಂದ ನೋಡಿ ಕೊಂಡು ಅದಕ್ಕೆ ಸಂತೋಷತೃಪ್ತಿಗಳನ್ನುಂಟುಮಾಡಬೇಕೆಂಬ ಇಚ್ಛೆ ಎರಡನೆಯದಾಗಿ, ತಾಯಿಯಲ್ಲಿರುವ ಪ್ರೇಮವನ್ನೆಲ್ಲಾ ಮಗುವಿನ

ಮೇಲೆ ಕೇಂದ್ರೀಕರಿಸುವುದು. ಗಂಡನನ್ನು ಕಳೆದುಕೊಂಡವಳೂ, ತನ್ನನ್ನು ಪ್ರೀತಿಸದೆ ಇರುವ ಗಂಡನೊಂದಿಗೆ ಬಾಳುತ್ತಿರುವವಳೂ, ಅತ್ತೆಯ ಕಿರುಕುಳಕ್ಕೆ ಸಿಕ್ಕಿದವಳೂ-ಇಂತಹ ತಾಯಂದಿರು ತಮ್ಮ ಮಕ್ಕಳನ್ನು ಅತಿ ಹೆಚ್ಚಾಗಿ ಮುದ್ದಿಸುವರು. ಇದರಿಂದ ತಾಯಿ ಮಕ್ಕಳಿಬ್ಬರಿಗೂ ಕೆಡಕು. ಸಮಾಜದಲ್ಲಿ ಎಷ್ಟೋ ಮಂದಿ ತಮ್ಮ ರೋಗ ರುಜಿನಗಳನ್ನು ಕುರಿತು ಮಾತನಾಡುವುದನ್ನು ನೋಡಿರುವೆವು. "ತಮಗೆ ಸೌಖ್ಯವೇ?" ಎಂಬ ಗುರಿಯೇ ಇಲ್ಲದ ಸಾಧಾರಣ ಪ್ರಶ್ನೆಗೆ ತಕ್ಷಣವೇ ತನಗೆ ಕಳೆದ ಒಂದೆರಡು ತಿಂಗಳುಗಳಲ್ಲಿ ಸಂಭವಿಸಿದ ಸುಖದುಃಖಗಳ ಕಂತೆಯೆಲ್ಲವನ್ನೂ ಬಿಚ್ಚಿ ಮುಂದಿಡುವರು. ಚಿಕ್ಕಂದಿನಲ್ಲಿ ತಾಯಿಂದರು ಇವರನ್ನು ಅತಿ ಮುದ್ದಿನಿಂದ ನೋಡಿಕೊಂಡಿದ್ದುದೇ ಈ ವರ್ತನೆಗೆ ಮುಖ್ಯಕಾರಣ ಬೆಳೆದಮೇಲೆ ಇವರು ಯಾರಾದರೂ ತಮ್ಮನ್ನು ಆದರದಿಂದ ನೋಡಿಕೊಳ್ಳುವರೇ ಎಂದು ಕಾತುರರಾಗಿರುವರು; ಬೇರೆಯವರ ಸಹಾನುಭೂತಿಗಾಗಿ ಕಾದಿರುವರು.

ತಾಯಿಯು ಮಗುವನ್ನು ಅತಿಹೆಚ್ಚಾಗಿ ಪ್ರೀತಿಸಿದರೆ ಮಗು ತಾಯಿಯ ಮೇಲೆಯೇ ಆಧೀನವಾಗುವುದು. ತನ್ನ ಕಾರ್ಯ ಕಲಾಪಗಳನ್ನು ಮಾಡುವುದಿಲ್ಲ. ಇಂತಹ ಮಕ್ಕಳಿಗೆ ಆಟಗೆಗಳಮೇಲೆ ಆಸಕ್ತಿಯಿಲ್ಲ; ಇತರರೊಡನೆ ಕೂಡಿ ಆಡಿಕೊಳ್ಳುವ ಆಸೆಯಿಲ್ಲ. ಯಾವಾಗ ನೋಡಿದರೂ ಅಳುತ್ತಿರುವರು, ಚಂಡಿಹಿಡಿಯುವರು. ಎಷ್ಟೋ ಮಂದಿ ತಾಯಿಂದಿರು ತಮ್ಮನ್ನು ಬಿಟ್ಟು ಮಗು ಒಂದುಗಳಿಗೆಯೂ ಇರಲಾರದಿದ್ದರೆ ಸಂತಸ ಪಡುವರು; ಹೆಮ್ಮೆಪಡುವರು. ಆದರೆ ಇದರಿಂದ ಮಗುವಿಗೆ ಅನಾಹುತವೂ, ತಾಯಿಗೆ ಅನಾನುಕೂಲವೂ ಸಂಭವಿಸುವುದು. ಎಷ್ಟೊ ಮನೆಗಳಲ್ಲಿ, ತಾಯಿಯರು ಮನೆಬಿಟ್ಟು ಎಲ್ಲಿಗಾದರೂ ಹೊರಡಬೇಕಾದರೆ ಹೆಬ್ಬಾಗಿಲಿಂದ ಹೊಗದೆ ಹಿಂದಿನ ಬಾಗಿಲಿನಿಂದ ಹೊರಗೆ ಹೋಗಬೇಕಾದ ದುರವಸ್ಥೆಗೆ ಈಡಾಗುವರು.

ತಾಯಿಯ ಅತಿಮುದ್ದಿಗೆ ಸಿಲುಕಿದ ಮಗು ಯಾವಾಗಲೂ ಅಳುತ್ತಾ ಚಂಡಿಮಾಡುತ್ತಾ ಇದ್ದು ಹನ್ನೆರಡು ಹದಿನಾರು ವರ್ಷ ವಯಸ್ಸಿನಲ್ಲಿಯೂ ಅಂಜುಪುರುಕನಾಗಿ ಹೇಡಿಯೊಗಿದ್ದು, ದೊಡ್ಡವ

ಸಾದ ಮೇಲೆ ತನ್ನ ಉದ್ಯೋಗದಲ್ಲಿ ಅಯೋಗ್ಯನಾಗಿ, ಮನೆಯವರಿಗೆ ಅಪ್ರಿಯನಾಗಿ, ಹೆಂಡತಿಯೊಡನೆ ಮೂರುಹೊತ್ತೂ ಕಾದಾಡುವ ವ್ಯಕ್ತಿಯಾಗುವನು.

## ಬೆರಳು ಚೀಪುವುದು

ಮಗು ಹುಟ್ಟಿದ ಕೆಲವು ದಿನಗಳೊಳಗೆಯೇ ಬೆರಳನ್ನು ಚೀಪಬಹುದು. ಕ್ರಮೇಣ ತಾನಾಗಿಯೇ ಇದನ್ನು ಬಿಟ್ಟುಬಿಡುವುದು. ಆದುದರಿಂದ ಮೊದಲು ಮೂರು ನಾಲ್ಕು ತಿಂಗಳೊಳಗೆ ಈ ವರ್ತನೆಯು ಮಗುವಿನಲ್ಲಿ ಕಂಡುಬಂದರೆ ಹೆಚ್ಚು ಗಮನ ಕೊಡಬೇಕಾದುದಿಲ್ಲ. ಆದರೆ ಈ ವರ್ತನೆಯು ಹಾಗೆಯೇ ಉಳಿದುಬಿಟ್ಟರೆ ಮಗುವನ್ನು ಜಾಗರೂಕತೆಯಿಂದ ನೋಡಿಕೊಳ್ಳಬೇಕು ಅನೇಕ ವೇಳೆ ಹೊಟ್ಟೆಗೆ ಸಾಲದೆ ಹೋಗುವುದರಿಂದ ಹೀಗೆ ಮಾಡುವುದುಂಟು. ಆಹಾರವು ಸರಿಯಾಗಿ ದೊರೆತರೆ ಬೆಟ್ಟುಚೀಪುವುದನ್ನು ನಿಲ್ಲಿಸಿಬಿಡುವುದು. ಕೆಲವು ವೇಳೆ ಸರಿಯಾದ ಆಹಾರವನ್ನೇ ಪಡೆಯುತ್ತಿರುವ ಮಗುವೂ ಸಹ ಈ ವರ್ತನೆಯನ್ನು ತೋರಿಸುವುದು. ಈ ದುರಭ್ಯಾಸವನ್ನು ಹೋಗಲಾಡಿಸಬೇಕಾದರೆ ಆದಷ್ಟು ಮಟ್ಟಿಗೆ ಬಾಯಿಂದ ಕೈಯನ್ನು ತಿಗೆಯಬೇಕು. ಬೆಟ್ಟನ್ನು ಬಾಯೊಳಗಿಟ್ಟಾಗ ಚಿಟಕಿ ಹೊಡೆದು ನೋವುಂಟುಮಾಡಿ ಬೆರಳನ್ನು ತೆಗೆಯುವಂತೆಮಾಡಬೇಕು. ಕೈಗೆ ಯಾವುದಾದರೂ ಆಟಿಗೆಯನ್ನು ಕೊಟ್ಟು ಮಗುವಿನ ಗಮನವನ್ನು ಬೇರೆಕಡೆ ಸೆಳೆಯಬೇಕು.

ಎಷ್ಟೋ ವೇಳೆ ಮಕ್ಕಳು ಅಳುವರೆಂದು ರಬ್ಬರಿನ ನಿಪ್ಪಲನ್ನು ಬಾಯಲ್ಲಿಡುವುದುಂಟು. ಅದನ್ನು ಚೀಪುತ್ತಾ ಮಗು ಹಾಗೆಯೇ ನಿದ್ದೆಹೋಗುವುದು. ಇದು ಒಂದು ದುರಭ್ಯಾಸಕ್ಕೆ ಕಾರಣವಾಗುವುದಲ್ಲದೆ ಅನಾರೋಗ್ಯಕ್ಕೂ ಕಾರಣವಾಗುವುದು. ಚೀಪುತ್ತಿರುವ ವಸ್ತು ಕೆಳಗೆ ಬಿದ್ದರೆ ಅದನ್ನೆತ್ತಿ ಮತ್ತೆ ಬಾಯಲ್ಲಿಡುವುದರಿಂದ ರೋಗಗಳಿಗೆ ಕಾರಣವಾಗುವುದು. ಬೆಟ್ಟು ಚೆಪ್ಪರಿಸುವ ಮಕ್ಕಳೂ, ರಬರ್ ನಿಪ್ಪಲ್ ಮುಂತಾದುವನ್ನು ಚೀಪುವ ಮಕ್ಕಳೂ, ಬೆಳೆದ ಮೇಲೆ ಉಗರನ್ನು ಬೆರಳನ್ನೂ ಕಚ್ಚುವ ದುರಭ್ಯಾಸವನ್ನು ಕಲಿಯು

ವರು. ತಮಗೆ ಕಷ್ಟ ಒದಗಿದರೆ ಈ ವರ್ತನೆಯನ್ನು ಅವಲಂಬಿಸಿ ಕಷ್ಟವನ್ನು ಮರೆಯಲು ಪ್ರಯತ್ನಿಸುವರು. ಬಹು ಜಾಗ್ರತೆ ಕೋಪಗಳ್ಳುವರು ; ಯಾವಾಗಲೂ ಮನೋ ವ್ಯಾಕುಲತೆಗಳಿಗೆ ಗುರಿಯಾಗುವರು. ಆದುದರಿಂದ ಈ ಕೆಟ್ಟ ಅಭ್ಯಾಸವನ್ನು ಆದಷ್ಟು ಬೇಗನೆ ಹೋಗಲಾಡಿಸಲು ತಂದೆತಾಯಿಗಳು ಪ್ರಯತ್ನಿಸಬೇಕು.

## ಮಕ್ಕಳ ಪ್ರಶ್ನೆಗಳು

ಮೂರುನಾಲ್ಕು ವರ್ಷ ವಯಸ್ಸಿನ ಮಗು ತನ್ನ ಸುತ್ತಮುತ್ತಲಿರುವ ವಿಷಯಗಳನ್ನು ಕುರಿತು ಪ್ರಶ್ನೆಗಳನ್ನು ಕೇಳುವುದು. ತಿಳಿವಳಿಕೆಯನ್ನು ಹೊಂದಬೇಕೆನ್ನುವ ಈ ಕುತೂಹಲವನ್ನು ತಾಯಿತಂದೆಗಳು ಪ್ರೋತ್ಸಾಹಿಸಬೇಕು. ಮಕ್ಕಳು ಕೇಳಿದ ಪ್ರಶ್ನೆಗಳಿಗೆ ತಮಗೆ ಗೊತ್ತಿರುವಷ್ಟು ವಿಷಯವನ್ನು ತಿಳಿಸಬೇಕು. ಬೇಸರಗೊಳ್ಳಬಾರದು. ಸುಳ್ಳು ಹೇಳಬಾರದು. ಮಗು ಮತ್ತೊಬ್ಬರನ್ನು ಕೇಳಿ ನಿಜಾಂಶವನ್ನು ತಿಳಿದುಕೊಳ್ಳಲು ಪ್ರಯತ್ನಿಸುವುದು. ಮನೆಯಲ್ಲಿ ಹೊಸದಾಗಿ ಒಂದು ಮಗು ಹುಟ್ಟಿದರೆ ಹಿರಿಯ ಮಗು 'ಅದು ಹೇಗೆ ಹುಟ್ಟಿತು?' 'ಎಲ್ಲಿಂದ ಬಂದಿತು?' ಎಂಬ ಪ್ರಶ್ನೆಗಳನ್ನು ಮೂರು ವರ್ಷದ ವಯಸ್ಸಿನಲ್ಲಿಯೇ ಕೇಳುವುದು. ಆದರೆ ಇಂತಹ ಪ್ರಶ್ನೆಗಳಿಗೆ ತಾಯಿತಂದೆಯರು ಸರಿಯಾದ ಉತ್ತರವನ್ನು ಕೊಡುವುದಿಲ್ಲ. 'ಹಕ್ಕಿ ತಂದು ಕೊಟ್ಟಿತು' 'ಕೊಂಡುಕೊಂಡು ಬಂದೆವು' 'ಆಸ್ಪತ್ರೆಯಲ್ಲಿ ಸಿಕ್ಕಿತು' ಮುಂತಾದ ಸುಳ್ಳು ಉತ್ತರಗಳನ್ನು ಕೊಡುವುದು ವಾಡಿಕೆಯಲ್ಲಿದೆ. ಇದನ್ನು ಕೇಳುವಾಗ ಮಗು ತೃಪ್ತಿಗೊಂಡು ಸುಮ್ಮನಿರಬಹುದು. ಆದರೆ ಇತರ ಮಕ್ಕಳ ಜೊತೆಯಲ್ಲಿ ಸೇರಿ ಮಾತನಾಡಿಕೊಂಡಾಗ ತಂದೆತಾಯಿಗಳು ನಿಜವನ್ನು ಹೇಳದೆ ಮರೆಮಾಚಿರುವರೆಂದು ಗ್ರಹಿಸುವುದು. ಇಂತಹ ಪ್ರಶ್ನೆಗಳನ್ನು ಮುಂದೆ ತಂದೆತಾಯಿಗಳ ಹತ್ತಿರ ಕೇಳುವುದೇ ಇಲ್ಲ. ಸ್ನೇಹಿತರನ್ನೋ ಆಳುಗಳನ್ನೋ ಕೇಳಿ ತನ್ನ ಕುತೂಹಲವನ್ನು ಪೂರೈಸಿಕೊಳ್ಳುವುದು. ಆದರೆ ಈ ಮಾರ್ಗಗಳಿಂದ ಸತ್ಯವನ್ನರಿಯದೆ ಲೈಂಗಿಕ ವಿಷಯಗಳಲ್ಲಿ ಜಿಗುಪ್ಸೆಯಿಂದೊಳಗೂಡಿದ ಕುತೂಹಲವನ್ನು ಪಡೆಯುವುದು.

ತಂದೆತಾಯಿಗಳು ಈ ಪ್ರಶ್ನೆಗಳಿಗೆ ಉತ್ತರ ಕೊಡದಿರಲು ಎರಡು ಕಾರಣಗಳಿವೆ. ಒಂದು ಆ ವಿಷಯದಲ್ಲಿ ಅವರ ಜ್ಞಾನವು ಬಹು ಸ್ವಲ್ಪ ಅದೂ ಸಹ ತಪ್ಪುಗಳಿಂದ ಕೂಡಿರುವುದು. ಎರಡನೆಯದು ಈ ವಿಷಯಗಳನ್ನು ಕುರಿತು ಮಾತನಾಡಲು ಸಂಕೋಚ. ಅವರ ತಾಯಿ ತಂದೆಗಳು ಇದೇ ಸಂಕೋಚದಿಂದ ಸರಿಯಾದ ತಿಳಿವಳಿಕೆಯನ್ನು ಕೊಡಲಿಲ್ಲ. ಈಗ ತಾವೂ ತಮ್ಮ ಮಕ್ಕಳಿಗೆ ಅದೇ ರೀತಿ ತಿಳಿವಳಿಕೆಯನ್ನು ಕೊಡುವುದಿಲ್ಲ. ಆದುದರಿಂದ ಈ ವಿಷಯಗಳ ಜ್ಞಾನವು ಪರಂಪರೆಯಾಗಿ ಅನುಚಿತಮಾರ್ಗಗಳಿಂದಲೇ ನಮಗೆ ದೊರೆಯುತ್ತಾ ಬಂದಿದೆ. ತಾಯಿತಂದೆಗಳು ಇತರ ಪ್ರಶ್ನೆಗಳಿಗೆ ಹೇಗೆ ತಮಗೆ ಗೊತ್ತಿರುವಷ್ಟು ತಿಳಿವಳಿಕೆಯನ್ನು ಮಕ್ಕಳಿಗೆ ಕೊಡುವರೋ ಅದೇ ರೀತಿ ಈ ಪ್ರಶ್ನೆಗಳಿಗೂ ಉತ್ತರ ಕೊಡಬೇಕು.

## ಆಟ

ಮಕ್ಕಳ ಆಟದ ವಿಷಯದಲ್ಲಿ ಎರಡು ಅಂಶಗಳನ್ನು ಗಮನದಲ್ಲಿಟ್ಟಿರಬೇಕು. ಮೇಲೆ ನೋಡಿದ ಹಾಗೆ ಮಗುವಿನ ಆಟವು ಅದರ ಬೆಳೆವಣಿಗೆಯ ಮಟ್ಟವನ್ನು ಅನುಸರಿಸಿರುವುದು.[1] ಮತ್ತು ಆಟದ ಮೂಲಕ ಮಗು ಎಷ್ಟೋ ಅಭ್ಯಾಸಗಳನ್ನು ಕಲಿಯುವುದು. ಮಗುವಿನ ಮೊದಲಿನ ಆಟಗಳು ಸ್ವೇಚ್ಛೆಯಾಗಿ ಸದ್ದುಮಾಡುವುದು, ಕೈಕಾಲುಗಳನ್ನಾಡಿಸುವುದು, ಕ್ರಮೇಣ ವಸ್ತುಗಳನ್ನು ಕೈಯಲ್ಲಿ ಹಿಡಿಯುವುದನ್ನು ಕಲಿತಮೇಲೆ ಅವುಗಳನ್ನು ಹಿಡಿದು ಬಡಿಯುವುದು, ಎಸೆಯುವುದು, ಬಾಯಿಗೆ ತೆಗೆದುಕೊಂಡುಹೋಗುವುದು. ಒಂದೂವರೆ-ಎರಡು ವರ್ಷಗಳ ವಯಸ್ಸಿನಲ್ಲಿ ವಸ್ತುಗಳನ್ನು 'ಗಾಡಿಗಳನ್ನು' ತಳ್ಳುವುದು, ಎಳೆಯುವುದು; ಮೂರು ವರ್ಷದ ಮಗು 'ಗಾಡಿ'ಗಳಲ್ಲಿ ಸಾಮಾನುಗಳನ್ನು ಒಂದು ಕಡೆಯಿಂದ ಮತ್ತೊಂದು ಕಡೆಗೆ ಸಾಗಿಸುವುದು. ಐದು ವರ್ಷಗಳಿಂದ ಏಳು ವರ್ಷಗಳವರೆವಿಗೂ ದೊಡ್ಡವರನ್ನು ಅನುಕರಿಸುವ ಆಟಗಳನ್ನು ಆಡುವುದು.

---

1. ೪ನೆಯ ಪಟ್ಟಿಯನ್ನು ನೋಡಿ.

ಮನೆ ಆಟ, ಆಸ್ಪತ್ರೆಯ ಆಟ, ಅಂಗಡಿ ಆಟ, ಕಳ್ಳ-ಪೋಲಿಸ್ ಆಟ, ಮನೆ ಕಟ್ಟುವ ಆಟ ಮುಂತಾದುವುಗಳನ್ನು ಆಡುವುದು. ಎರಡು ವರ್ಷದ ಮಗು ಸೀಸದಕಡ್ಡಿಯನ್ನಾಗಲೀ ಸೀಮೆಸುಣ್ಣ ವನ್ನಾಗಲೀ ತೆಗೆದುಕೊಂಡು ಸಿಕ್ಕಾಬಟ್ಟೆಗೀರುವುದು, ಆದರೆ ನಾಲ್ಕು ವರ್ಷ ವಯಸ್ಸಿಗೆ ಬರುವಸಮಯಕ್ಕೆ ವಸ್ತುಗಳ ಚಿತ್ರವನ್ನು ಬರೆಯ ಲಾರಂಭಿಸುವರು.

ಬಾಟ್ ಎಂಬುವರು ಶಿಶುವಿಹಾರಗಳಿಗೆ ಬರುವ ಮಕ್ಕಳು ಯಾವ ಆಟಗಳನ್ನು ಹೆಚ್ಚಾಗಿ ಉಪಯೋಗಿಸುವರೆಂದು ಪರಿಶೀಲಿಸಿ ದರು. ಬೇರೆ ಬೇರೆ ಆಕಾರಗಳನ್ನು ರಚಿಸಲು ಸಾಧ್ಯವಾಗುವ ಬಣ್ಣದ ಮಣಿಗಳು, ಗೋಲಿಗಳು, ಬಳೆ ಚೂರು, ಮುಂತಾದುವು ಮಕ್ಕಳಿಗೆ ಹೆಚ್ಚು ಪ್ರಿಯವಾದ ಆಟಗಳು. ಮರದ ತುಂಡುಗಳು, ಹುಣಸೆಬೀಜ ಬಣ್ಣದ ಮರದ ತುಂಡುಗಳು, ಕಪ್ಪುಹಲಗೆ ಸೀಮೆಸುಣ್ಣ ಮುಂತಾ ದವು ಸ್ವಲ್ಪಕಡಿಮೆ ಇಷ್ಟವಾದ ಆಟಿಕೆಗಳು. ರೈಲುಗಾಡಿ ಮೂರು ಚಕ್ರದಗಾಡಿ ಮುಂತಾದುವು ಇನ್ನೂ ಕಡಿಮೆ ಇಷ್ಟವಾದ ಆಟಿಕೆಗಳು. ಕೀಲು ಬೊಂಬೆಗಳು, ಸಣ್ಣ ಆಟದ ಮೋಟಾರುಗಳು ಮೊದಲಾದುವು ಎಲ್ಲಕಿಂತಲೂ ಕಡಿಮೆ ಇಷ್ಟವಾದ ಆಟಿಕೆಗಳು. ಈ ಪರೀಕ್ಷೆಯಿಂದ, ಸಾಧಾರಣವಾಗಿ ಮಕ್ಕಳಿಗೆ ಇಷ್ಟವಿಲ್ಲದ ಆಟಿಕೆಗಳನ್ನೇ ಕೊಂಡು ಕೊಳ್ಳುವೆವು ಎಂಬುದು ಸ್ಪಷ್ಟವಾಗುವುದು. ನಿಜವಾಗಿಯೂ ಮಕ್ಕ ಳಿಗೆ ಬೇಕಾದ ಸಾಮಾನುಗಳು ಅಂಗಡಿಯಲ್ಲಿ ದೊರೆಯುವುದೇ ಇಲ್ಲ. ಅವರಿಗೆ ಬೇಕಾದುದು ಹೆಚ್ಚಿನಬೆಲೆಯ ಕೀಲುಬೊಂಬೆಗಳಲ್ಲ ; ಇಷ್ಟಾ ನುಸಾರವಾಗಿ ಮರಿದು ಜೋಡಿಸಿ ಹೊಸ ಹೊಸ ಆಕೃತಿಗಳನ್ನು ನಿರ್ಮಿ ಸಲು ಸಾಧ್ಯವಾಗುವಂತಹ ಸಾಮಾನುಗಳುಬೇಕು;

ಬಾಟ್ ಮತ್ತೊಂದು ಪ್ರಯೋಗವನ್ನು ನಡೆಸಿದನು. ಒಂದು ವಯಸ್ಸಿನ ಮಗು ಸಾಧಾರಣವಾಗಿ ಎಷ್ಟು ಹೊತ್ತು ಮಧ್ಯೆ ನಿಲ್ಲಿ ಸದೆ ಆಡುವುದೆಂದು ವೀಕ್ಷಿಸಿದನು. ಎರಡುವರ್ಷದ ಮಗು ಸಾಧಾರಣ ವಾಗಿ ೨. ೫ ನಿಮಿಷಗಳಕಾಲವೂ, ಮೂರುವರ್ಷದ ಮಗು ೪. ೭ ನಿಮಿಷಗಳ ಕಾಲವು ನಾಲ್ಕುವರ್ಷದ ಮಗು ೫.೬ ನಿಮಿಷಗಳ ಕಾಲವೂ

ನಿರಾತಂಕವಾಗಿ ಆಡುವುದೆಂದು ಕಂಡು ಹಿಡಿದಿರುವನು. ಮಗು ಬೆಳೆಯುತ್ತಾ ಆಟದಲ್ಲಿ ದೀರ್ಘಕಾಲವನ್ನು ಕಳೆಯುವುದು. ಆದುದರಿಂದ ಒಂದು ಹೊಸ ಆಟಿಗೆಯನ್ನು ತೆಗೆದು ಕೊಟ್ಟರೆ ಮಗು ಅದರೊಡನೆ ಸ್ವಲ್ಪಹೊತ್ತು ಅಡಿ ಮತ್ತೊಂದುಕಡೆ ಹೊರಟರೆ ಅದನ್ನು ' ಹಟಹಿಡಿದು ಕೊಂಡು ಕೊಂಡ ಆಟಿಗೆಯನ್ನು ಬಿಸಾಕಿದ್ದೀಯಾ ? ' ಎಂದು ಗದರಿಸಿ ಬೈಯುವುದು ಅನು ಚಿತವಲ್ಲವೇ?

ಫಾಸ್ಟ್ಟರ್‌ಎಂಬವರು ಪ್ರಾಥಮಿಕಶಾಲೆಯ ಮಕ್ಕಳ ಅಟಗಳನ್ನು ಪರೀಕ್ಷಿಸಿರುವರು. ಮಕ್ಕಳು ಮನೆಯೊಳಗೆ ಆಡುವುದಕ್ಕಿಂತ ಮೈದಾನದಲ್ಲಿ ಅಡುವುದನ್ನು ಹೆಚ್ಚಾಗಿ ಅಪೇಕ್ಷಿಸುವರೆಂದು ಕಂಡು ಬಂತು. ಅಟಗಳಲ್ಲಿ ಮುಖ್ಯವಾಗಿ, ಹಿಡಿಯುವುದು, ಎಸೆಯುವುದು, ಅಟ್ಟಿಸಿಕೊಂಡು ಹೋಗುವುದು, ಬಚ್ಚಿಟ್ಟುಕೊಳ್ಳುವುದು ಮುಂತಾದ ಓಡಾಟದ ಆಟಗಳನ್ನೇ ಹೆಚ್ಚಾಗಿ ಆಡಲು ಬಯಸುವರು.

ಲೇಮರ್ಾ ಮತ್ತು ವಿಟ್ಟಿಯವರು ಪ್ರಾಥಮಿಕ ಶಾಲೆಯ ಮಕ್ಕಳನ್ನು ' ನಿಮಗೆ ಮನೆಯಲ್ಲಿ ಯಾವ ಆಟಗಳನ್ನು ಆಡಲು ಹೆಚ್ಚು ಇಷ್ಟ ' ಎಂದು ಕೇಳಿ ಉತ್ತರ ಪಡೆದು ಸಂಗ್ರಹಿಸಿದ ವಿಷಯಗಳ ಮೂಲಕ ಈ ಕೆಳಗಿನ ಅಂಶಗಳು ತಿಳಿಯ ಬಂದವು. ಮಕ್ಕಳಿಗೆ ತಂದೆ ತಾಯಿಗಳ ಮನೆಕೆಲಸಗಳಲ್ಲಿ ಸಹಾಯಮಾಡುವುದೇ ಬಹಳ ಇಷ್ಟವಾದ ಆಟವೆಂದು ಕಂಡುಬಂದಿತು. ದೊಡ್ಡವರು ' ಕೆಲಸ ' ಗಳೆಂದು ತಿಳಿದುಕೊಂಡಿರುವ ತಟ್ಟೆಗಳನ್ನು ತೊಳೆಯುವುದು, ಮನೆ ಗುಡಿಸುವುದು, ಸೌದೆ ಒಡೆಯುವುದು ಮುಂತಾದುವು ಮಕ್ಕಳಿಗೆ ಅತಿ ಪ್ರಿಯವಾದ ಆಟಗಳಾಗಿರುವುವು. ದೊಡ್ಡವರು ತಮ್ಮ ಕೆಲಸವನ್ನು ಹೇಗೆ ಶ್ರದ್ಧೆಯಿಂದ ಮಾಡುವರೋ ಹಾಗೆಯೇ ಮಕ್ಕಳು ತಮ್ಮ ಆಟಗಳನ್ನು ಅತಿ ಶ್ರದ್ಧೆಯಿಂದ ಆಡುವರು. ಆದುದರಿಂದ ಆಟವಾಡಿ ಬಂದ ಮಗುವನ್ನು ' ನೀನು ಸುಮ್ಮನೆ ಕಾಲಕಳೆಯುತ್ತೀಯೆ, ಬಟ್ಟೆಯನ್ನೆಲ್ಲಾ ಹಾಳುಮಾಡಿಕೊಂಡೆ, ಎಂದು ತಿರಸ್ಕಾರ ಮಾಡಬಾರದು. ಅವರ ಆಟಕ್ಕೆ ಪ್ರೋತ್ಸಾಹ ಕೊಡಬೇಕು. ಆಡುವುದರ ಮೂಲಕ ವೈಯಕ್ತಿಕ ಮತ್ತು ಸಾಮಾಜಿಕ ಸದ್ಗುಣಗಳೆಷ್ಟನ್ನೊ ಮಕ್ಕಳು ಕಲಿಯುವರು.

## ಒಳ ತೋಟಿ

ಅನೇಕ ಸನ್ನಿವೇಶಗಳಲ್ಲಿ ಮಗುವಿನ ಮನಸ್ಸಿನಲ್ಲಿ ಒಳತೋಟಿ ಯುಂಟಾಗುವುದು ಒಂದು ಇಚ್ಛೆಗೂ ಮತ್ತೊಂದು ಇಚ್ಛೆಗೂ ಇರುವ ಭಿನ್ನತೆಯು ಈ ಅಂತರ ದ್ವಂದಕ್ಕೆ ಕಾರಣವಾಗುವುದು. ಅಥವಾ ತನ್ನ ಇಚ್ಛೆಗೂ ಇತರರ ಇಚ್ಛೆ ಅಥವಾ ಸಾಮಾಜಿಕ ಕ್ರಮಕ್ಕೂ, ತನ್ನ ಇಚ್ಛೆಗೂ ಪ್ರಕೃತಿ ಸ್ವಭಾವಕ್ಕೂ ಭಿನ್ನತೆ ಅಥವಾ ವಿರೋಧ ವಿದ್ದು ಒಳತೋಟಿಗೆ ಕಾರಣವಾಗುವುದು. ಈ ಕಾರಣಗಳಿಂದ ಮಗು ವಿನ ವರ್ತನೆಯು ಹದಗೆಟ್ಟು ವ್ಯಥೆಗೆ ಕಾರಣವಾಗುವುದು. ಒಳ ತೋಟಿಯು ಬದುಕಿನಲ್ಲಿ ಅನಿವಾರ್ಯ ; ಒಂದಲ್ಲ ಮತ್ತೊಂದು ಕಾರಣ ದಿಂದ ಒಳ ತೋಟಿಯುಂಟಾಗುವುದು. ಇದರಿಂದ ಅಸ್ಥಿರ ಮನೋ ಭಾವನೆಯುಂಟಾಗುವುದು. ಇದನ್ನು ವ್ಯವಸ್ಥೆಗೊಳಿಸಬೇಕಾದರೆ ನಾನಾ ಕಾರಣಗಳಿಂದುಂಟಾದ ವಿರೋಧಗಳನ್ನು ಸಮನ್ವಯ ಮಾಡಿಕೊಂಡು ಬಾಳಬೇಕು. ಮಗುವಿನ ಮನಸ್ಸಿನಲ್ಲಿ ಸಮನ್ವಯ ಹುಟ್ಟಿ ಒಳತೋ ಟಿಯು ಕಡಿಮೆಯಾಗುವ ಹಾಗೆ ಸನ್ನಿವೇಶಗಳನ್ನೇರ್ಪಡಿಸಬೇಕು. ಆವರಣದೊಂದಿಗೂ, ಸುತ್ತಲಿರುವ ಇತರರೊಂದಿಗೂ ಸಮನ್ವೆಯ ಮಾಡಿಕೊಂಡು ಬಾಳುವ ಹಾಗೆ ಹೇಳಿಕೊಡಬೇಕು. ಇಲ್ಲದಿದ್ದರೆ ಮಗುವಿನ ವರ್ತನೆಯು ಹದಗೆಟ್ಟು ಬೆಳೆದ ಮೇಲೆ ಮಾನಸಿಕ ರೋಗ ಗಳಿಗೆ ಗುರಿಯಾಗುವುದು.

## ನಿವಾರಿಸಬೇಕಾದ ಮನೋಭಾವಗಳು

ಮಗು ತನಗೆ ಬೇಕಾದುದನ್ನು ಪಡೆಯದೆ ಹೋದರೆ, ಇತರ ರೊಂದಿಗೆ ಹೊಂದಿಕೊಂಡು ವರ್ತಿಸಲಾರದೆ ಹೋದರೆ, ಹೊರಗಿನ ಸಂಪರ್ಕಗಳೆಲ್ಲವನ್ನೂ ಬಿಟ್ಟು ತನ್ನಷ್ಟಕ್ಕೆ ತಾನೇ ಇರಲು ಪ್ರಯತ್ನಿಸ ಬಹುದು. ಇಂತಹ ವರ್ತನೆಯು ಮಗುವಿನ ಬೆಳವಣಿಗೆಗೆ ಕಂಟಕ ಪ್ರಾಯವಾದುದು. ಈ ಮನೋಭಾವವನ್ನು ಬೆಳೆಸಿದರೆ ಮಾನಸಿಕ ರೋಗಕ್ಕೆ ತುತ್ತಾಗುವುದು. ಆದುದರಿಂದ ಮಗು ಇತರರೊಡನೆ ಸೇರದೆ ಒಂಟಿಯಾಗಿದ್ದರೆ ಕೂಡಲೇ ಅದರ ವರ್ತನೆಯನ್ನು ಪರಿಶೀಲಿಸಿ ಸರಿಪಡಿಸಬೇಕು.

ಅಪಜಯವನ್ನು ಪಡೆದರೆ ಅದಕ್ಕೆ ಕಾರಣವನ್ನು ಹುಡಕಬೇಕು. ಅಪಜಯಕ್ಕೆ ತನ್ನ ಅಸಮರ್ಥತೆಯು ಕಾರಣ ಎಂಬ ಯೋಚನೆ ಹುಟ್ಟುವುದು ಕಷ್ಟ. ಸಾಧಾರಣವಾಗಿ ತನ್ನಿಂದಲೇ ತಾನು ಕೆಟ್ಟೆನೆಂಬ ತಿಳಿವಳಿಕೆಯನ್ನು ಪಡೆದಿರುವವರು ಬಹಳ ವಿರಳ. ಅದುದರಿಂದ ಜನರು ತಮ್ಮ ದುಸ್ಥಿತಿಗೆ ಇತರರು ಕಾರಣರೆಂದು ಭಾವಿಸುವರು. ಹೀಗೆ ಮಾಡುವುದರಿಂದ ಸರಿಯಾದ ಮಾನಸಿಕ ಬೆಳೆವಣಿಗೆ ಯಾಗುವುದಿಲ್ಲ. ಇದರಿಂದ ಸುಳ್ಳು ಹೇಳುವ ಅಭ್ಯಾಸವೂ ಉಂಟಾಗುವುದು. ತಮ್ಮ ಕಷ್ಟಗಳನ್ನು ತಾವು ಅರಿತು ತಿದ್ದಿಕೊಳ್ಳದೇ ಹೋದರೆ ಆತ್ಮಗೌರವ ಆತ್ಮಸ್ಥೈರ್ಯಗಳುಂಟಾಗುವುದಿಲ್ಲ. ಇದರಿಂದ ಇತರರನ್ನು ನಿಂದಿಸಿ ಅವರನ್ನು ದ್ವೇಷಿಸಿ ಅವರ ಮೇಲೆ ಕ್ರೌರ್ಯವನ್ನು ತೋರಿಸುವಂತಾಗುವುದು. ಇತರರನ್ನು ನಂಬದೆ ಯಾವಾಗಲೂ ಸಂದೇಹದಿಂದ ವರ್ತಿಸುವರು. ಅವರ ಬಾಳೊಂದು ಗೋಳಾಗುವುದು.

ಆದುದರಿಂದ ಮೊದಲಿನಿಂದಲೂ, ಮಕ್ಕಳು ತಮಗೆ ಜಯವುಂಟಾದರೆ ಸಂತೋಷಪಟ್ಟು, ಅಪಜಯವಾದರೆ ವ್ಯಸನಪಡದೆ ಅಪಜಯದ ಕಾರಣವನ್ನು ಕಂಡುಹಿಡಿದು, ಅದನ್ನು ನಿವಾರಿಸಿ ಮುಂದೆ ಜಯವನ್ನು ಪಡೆಯಲು ದುಡಿಯುವುದನ್ನು ಕಲಿಯಬೇಕು.

## ಪ್ರೋತ್ಸಾಹಿಸಬೇಕಾದ ಮನೋಭಾವಗಳು

ಮೊದಲಿನಿಂದಲೂ, ಒಂದು ಗುರಿಯನ್ನು ಸಾಧಿಸಲು ದುಡಿಯುವ ಹಾಗೆ ಮಕ್ಕಳಿಗೆ ಹೇಳಿಕೊಡಬೇಕು. ಕಾರ್ಯಸಾಧನೆಯೇ ಗುರಿಯಸಾಧನೆ ಎಂಬ ಅರಿವು ಇರಬೇಕು.

ವರ್ತನೆಯಲ್ಲಿ ಒಂದು ಸ್ಥಿಮಿತವಿರಬೇಕು. ಆತ್ಮಭರವಸೆಯಿಂದ ನಡೆದುಕೊಳ್ಳುವಂತೆ ಸನ್ನಿವೇಶಗಳನ್ನು ಕಲ್ಪಿಸಿಕೊಡಬೇಕು. ಮನಸ್ಸಿನಲ್ಲಿ ಉಭಯಸಂಕಟವಿರಬಾರದು. ಯಾವ ಸನ್ನಿವೇಶದಲ್ಲಿಯೇ ಆಗಲಿ, ಮನಸ್ಸುಮಾಡುವವರೆಗೂ, ನಿಧಾನಗೊಂಡು ಯೋಚಿಸಬಹುದು. ಮನಸ್ಸುಮಾಡಿದನಂತರ ಯಾವ ಸಂದೇಹವೂ ಇಲ್ಲದೆ ಪೂರ್ಣಮನಸ್ಸಿನಿಂದ ಕಾರ್ಯವನ್ನು ಕೈಗೊಳ್ಳಬೇಕು. ಅಂಜಿಕೆ, ಅರೆಮನಸ್ಸುಗಳಿಂದ ಕೆಲಸಮಾಡಿದರೆ ಗುರಿಯನ್ನು ಸಾಧಿಸುವುದು

ಸಾಧ್ಯವಿಲ್ಲ. ಆದುದರಿಂದಲೇ ಮಗುವಿಗೆ ಆತ್ಮಭರವಸೆಯುಂಟಾಗುವ ಹಾಗೆ ಮೊದಲಿನಿಂದಲೂ ನೋಡಿಕೊಳ್ಳಬೇಕು.

ಒಂದು ಕೆಲಸವನ್ನು ಕೈಗೊಂಡರೆ ಅದನ್ನು ಸಾಧಿಸುವವರೆಗೂ ಕೈಬಿಡಬಾರದು. ಮಗು ಯಾವುದಾದರೂ ಕೆಲಸ ಮಾಡತೊಡಗಿದರೆ 'ಅದು ನಿನ್ನ ಕೈಯಲ್ಲಿ ಸಾಧ್ಯವಿಲ್ಲ' ಎಂದು ಹೇಳಿ ನಿರುತ್ಸಾಹಗೊಳಿಸಬಾರದು. ಪದೇಪದೇ ಪ್ರಯತ್ನಮಾಡಿ ಹಿಡಿದ ಕೆಲಸವನ್ನು ಸಾಧಿಸುವಂತೆ ಪ್ರೋತ್ಸಾಹಿಸಬೇಕು. ಇತರರೊಡನೆ ತಾಳ್ಮೆಯಿಂದಲೂ ಸಹಕಾರದಿಂದಲೂ ಕೂಡಿ ಬೆಳೆಯುವ ಹಾಗೆ ಕಲಿಸಿಕೊಡಬೇಕು. ಮಗು ಇತರರ ಅಭಿಪ್ರಾಯಗಳಿಗೆ ಗೌರವ ಕೊಟ್ಟು ಅವರೊಡನೆ ಹೊಂದಿಕೊಂಡು ತನ್ನ ಮತ್ತು ಸಮಾಜದ ಹಿತಕ್ಕೆ ದುಡಿಯಬೇಕು.

## ವ್ಯಕ್ತಿತ್ವದ ರಚನೆ

ಮಗುವಿನ ತನುಮನಗಳಿಗೆ ತಂದೆತಾಯಿಗಳಿಂದ ಪಡೆದ ಜೀವಾಣುಗಳೇ ಆಧಾರ. ದೈಹಿಕ ಮತ್ತು ಮಾನಸಿಕ ಗುಣಗಳು ಈ ಅನುವಂಶಿಕವಸ್ತುಗಳ ವೈಶಿಷ್ಟ್ಯದಮೇಲೂ ಆ ಗುಣಗಳು ವಿಕಾಸಗೊಳ್ಳಲು ಇರುವ ಪರಿಸ್ಥಿತಿಯ ಮೇಲೂ ನಿಂತಿರುವುವು. ಮಗುವಿನ ವ್ಯಕ್ತಿತ್ವದ ರಚನೆಯು ತನ್ನ ಹುಟ್ಟುಗುಣಗಳ ಮೇಲೂ, ತನಗೆ ಒದಗುವ ಅನುಭವಗಳಮೇಲೂ ಆಧಾರಪಟ್ಟಿರುವುದು. ಈ ಅನುಭವಗಳು ತಂದೆತಾಯಿಗಳೂ ಉಪಾಧ್ಯಾಯರೂ ಒದಗಿಸಿಕೊಡುವ ಸನ್ನಿವೇಶಗಳ ಮೇಲೆ ನಿಂತಿರುವುವು. ಆದುದರಿಂದ ಮೇಲೆ ವಿವರಿಸಿರುವ ಮನೋಧರ್ಮಗಳನ್ನು ಜೊತೆಗೂಡಿಸಿ ಮಗುವಿನ ವ್ಯಕ್ತಿತ್ವದ ರಚನೆಯು ಮುಂದುವರಿಯಲು ತಂದೆತಾಯಿಗಳು ಸಹಕರಿಸಬೇಕು.

*

## ಈ ಗ್ರಂಥವನ್ನು ಬರೆಯುವಾಗ ಉಪಯೋಗಿಸಿದ ಕೆಲವು ಗ್ರಂಥಗಳು


೧. ಬ್ರೂಕ್ಸ್—'ಚೈಲ್ಡ್ ಸೈಕಾಲಜಿ'

೨. ಗೆಸೆಲ್—'ಫಸ್ಟ್ ಫೈವ್ ಇಯರ್ಸ್'

೩. ಕಾರ್ಲ್ ಮೂರ್ಷಿಸನ್—'ಹ್ಯಾಂಡ್ ಬುಕ್ ಆಫ್ ಚೈಲ್ಡ್ ಸೈಕಾಲಜಿ'

೪. ಗೆಸೆಲ್—'ಇನ್ಫೆನ್ಸಿ ಅಂಡ್ ಹ್ಯೂಮನ್‌ಗ್ರೋತ್'

೫. ಮಾರ್ಗನ್—'ಚೈಲ್ಡ್ ಸೈಕಾಲಜಿ'

೬. ಬ್ರಿಡ್ಜೆಸ್—'ಎಮೋಷನಲ್ ಡೆವಲಪ್‌ಮೆಂಟ್ ಆಫ್ ಚಿಲ್ರನ್

೭. ಜೆರ್ಸ್ಟೈಲ್ಡ್—'ಚೈಲ್ಡ್ ಸೈಕಾಲಜಿ'

೮. ಫಾಸ್ಟರ್ ಮತ್ತು ಮ್ಯಾಟ್ಸನ್—'ನರ್ಸರಿ ಸ್ಕೂಲ್ ಪ್ರೊಸೀಜರ್'

೯. ಗುಡಿನಫ್—'ಡೆವಲಪ್‌ಮೆಂಟಲ್ ಸೈಕಾಲಜಿ'

೧೦. ಗುಡಿನಫ್—'ಫಿಯರ್ಸ್ ಅಂಡ್ ಆಂಗರ್ ಇನ್‌ಚಿಲ್ರನ್'

೧೧. ಪ್ರಾಟ್, ನೆಲ್ಸನ್, ಮತ್ತು ಸನ್—'ದಿ ಬಿಹೇವಿಯರ್ ಆಫ್ ದಿ ನ್ಯೂ ಬಾರ್ನ್ ಇನ್ಫೆಂಟ್'

೧೨. ಬ್ಯೂಲರ್—'ಫ್ರಮ್ ಬರ್ತ್ ಟು ಮೆಚ್ಯೂರಿಟಿ'

೧೩. ಷರ್ಲಿ—'ಫಸ್ಟ್ ಟೂ ಇಯರ್ಸ್'

೧೪. ವೀಲರ್ ಮತ್ತು ಪರ್ಕಿನ್ಸ್—'ಪ್ರಿನ್ಸಿಪಲ್ಸ್ ಆಫ್ ಮೆಂಟಲ್ ಡೆವಲಪ್‌ಮೆಂಟ್'

೧೫. ಪಿಯಾಜೆ—'ಲ್ಯಾಂಗ್ವೇಜ್ ಅಂಡ್ ತಾಟ್ ಆಫ್ ದಿ ಚೈಲ್ಡ್'

೧೬. ಮೆಕಾರ್ಥಿ—'ಲ್ಯಾಂಗ್ವೇಜ್ ಡೆವಲಪ್‌ಮೆಂಟ್ ಆಫ್ ದಿ ಪ್ರೀ ಸ್ಕೂಲ್ ಚಿಲ್ರನ್'

೧೭. ವಾಟ್ಸನ್—'ಸೈಕಲಾಜಿಕಲ್ ಕೇರ್ ಆಫ್ ಇನ್ಫೆಂಟ್ ಅಂಡ್ ಚೈಲ್ಡ್'

೧೮. ಕಾಫ್‌ಕಾ—'ಗ್ರೋತ್ ಆಫ್ ಮೈಂಡ್'